ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಇಂದು ಜಗತ್ತಿನಾದ್ಯಂತ ಅತ್ಯಂತ ಹೆಚ್ಚು ತಪ್ಪುಕಲ್ಪನೆಗೆ ಒಳಗಾಗಿರುವ ಧರ್ಮ ಇಸ್ಲಾಮ್ ಆಗಿದೆಯೆಂಬುದು ರಹಸ್ಯವೇನಲ್ಲ. ಧರ್ಮವನ್ನು ವಿವಿಧ ರೂಪದಲ್ಲಿ ವ್ಯಾಖ್ಯಾನಿಸಿ, ವಿವಿಧ ಬಣ್ಣ ಬಳಿದು ಅದು ಸ್ವರೂಪವನ್ನು ಕೆಡಿಸುವ ಪ್ರಯತ್ನಗಳು, ಷಡ್ಯಂತ್ರಗಳು ಲೋಕದಾದ್ಯಂತ ನಡೆಯುತ್ತಿವೆ. ಏಕದೇವತ್ವವನ್ನು ಬೋಧಿಸುವ ಮತ್ತು ಅದರಲ್ಲೇ ಅಧಿಷ್ಠಿತವಾದ ಆರಾಧನಾ ಕರ್ಮಗಳನ್ನೂ ನೇರವಾಗಿ ಜೀವನ ಕ್ರಮವನ್ನೂ ಕಲಿಸುವ ಇಸ್ಲಾಮನ್ನು ಇತರ ಮತ-ಧರ್ಮಗಳು ಮತ್ತು ತತ್ವಸಿದ್ಧಾಂತಗಳ ಸಾಲಿಗೆ ತಂದು ಇಲ್ಲಿ ವಿವಿಧ ವಿಧಾನಗಳನ್ನು ಅನುಸರಿಸಲಾಗುತ್ತಿದೆ.

ಇಸ್ಲಾಮ್ ಧರ್ಮದ ಮೂಲಭೂತ ವಿಶ್ವಾಸಗಳು, ಆರಾಧನಾ ಕರ್ಮಗಳು, ಅದರ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಅದರ ಮಾನವೀಯ ಮೌಲ್ಯಗಳು, ಅದೇ ರೀತಿ ಮಹಿಳೆಯರಿಗೆ ಸಂಭಂದಿಸಿ ವಿವಿಧ ಪ್ರಶ್ನೆಗಳನ್ನೆತ್ತಿ, ಜನಮನದಲ್ಲಿ ಸಂದೇಹಗಳನ್ನು ಸೃಷ್ಟಿಸಲಾಗಿದೆ. ಈ ಎಲ್ಲಾ ಸಂದೇಹಗಳು ಮತ್ತು ತಪ್ಪುಕಲ್ಪನೆಗಳನ್ನು ಜನಸಾಮಾನ್ಯರಿಗೆ ವಸ್ತುಸ್ಥಿತಿಯನ್ನು ಮನವರಿಕೆ ಮಾಡಿಸುವ ಉದ್ದೇಶದಿಂದ ಕೇರಳದ 'ಡಯಲಾಗ್ ಸೆಂಟರ್' ಏರ್ಪಡಿಸಿದ ಸಂವಾದ ಕಾರ್ಯಕ್ರಮದಲ್ಲಿ ಪ್ರಖ್ಯಾತ ವಿದ್ವಾಂಸ, ಸಾಹಿತಿ ಹಾಗೂ ವಾಗ್ಮಿಯಾಗಿರುವ ಶೇಖ್ ಮುಹಮ್ಮದ್ ಕಾರಕುನ್ನುರವರು ಪೈಕಿ ಒಂದೊಂದನ್ನು ಎತ್ತಿ ಹಿಡಿದು ಅದಕ್ಕೆ ಸೂಕ್ತ ಉತ್ತರವನ್ನು ವಸ್ತುನಿಷ್ಠವಾಗಿ ಸಭಿಕರ ಮುಂದಿಟ್ಟಿದ್ದಾರೆ.

ಆ ಕಾರ್ಯಕ್ರಮದಲ್ಲಿ ನಡೆದ ಸಂವಾದವನ್ನು ಕ್ರೂಢೀಕರಿಸಿ ಸಿದ್ಧಪಡಿಸಿದ ಲೇಖನಗಳ ಈ ಗ್ರಂಥದ ವಿಷಯ ಇದರ ಅಧ್ಯಯನದಿಂದ ಹಲವಾರು ತಪ್ಪುಗಳು, ಸಂದೇಹಗಳು ನೀಗಬಹುದೆಂದು ನಿರೀಕ್ಷಿಸುತ್ತೇವೆ. ಕನ್ನಡ ಜನತೆಗೆ ಇದೊಂದು ಕೈಪಿಡಿಯಂತೆ ಸಹಾಯಕವಾಗಬಲ್ಲದು.

- ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಲೇಖಕರ ಮಾತು

ಮನುಷ್ಯನೆಂದರೆ ಯಾರು? ಅವನು ಎಲ್ಲಿಂದ ಬಂದ? ಅವನ ಪಯಣ ಎಲ್ಲಿಗೆ ಸಾಗಲಿದೆ? ಜೀವನವೆಂದರೇನು? ಅದರ ಉದ್ದೇಶವೇನು? ಜೀವನ ಹೇಗಿರಬೇಕು? ಮರಣಾನಂತರ ನಮ್ಮ ಗತಿಯೇನು? ಹೀಗೆ . . . . ಜೀವನದ ಬಗ್ಗೆ ಪ್ರಜ್ಞಾವಂತರಾಗಿರುವವರಿಗೆ ಇಂತಹ ಪ್ರಶ್ನೆಗಳು ಹುಟ್ಟಿಕೊಳ್ಳುವುದು ಸಹಜ. ಇವುಗಳ ಉತ್ತರವು ನಮ್ಮ ಬದುಕಿನ ಗುರಿ ಮತ್ತು ದಿಕ್ಕನ್ನು ನಿರ್ಣಾಯಿಸುವಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ.

ಮನುಷ್ಯನಲ್ಲಿ ಮೂರು ಅಂಶಗಳಿವೆ. ಅದು ಶರೀರ, ಆತ್ಮ ಮತ್ತು ಮನಸ್ಸು, ದೇಹ ಹಾಗೂ ದೈಹಿಕ ಅಗತ್ಯಗಳು ಮನುಷ್ಯರಂತೆ ಇತರ ಜೀವಿಗಳಿಗೂ ಇದೆ. ತಿನ್ನುವ, ಕುಡಿಯುವ, ಭೋಗಿಸುವ, ಸುಖಪಡುವ ಹಾಗೂ ಉಲ್ಲಾಸಗೊಳ್ಳುವಂತಹ ಕಾರ್ಯಗಳನ್ನು ಅವುಗಳು ಮಾಡುತ್ತಿವೆ. ಅವುಗಳ ಜೀವಕೋಶಗಳು ಇವುಗಳಿಗೆ ಸಹಾಯ ಮಾಡುತ್ತವೆ. ಅದು ಅವುಗಳ ಹುಟ್ಟುಗುಣಗಳಾಗಿರುತ್ತದೆ. ಮನುಷ್ಯನನ್ನು ಮೀರಿಸುವ ಪ್ರಕೃತಿಯಿರುವ ಜೀವಿಗಳು ಪ್ರಪಂಚದಲ್ಲಿವೆ. ಉದಾಹರಣೆಗೆ- ಜೇನು ನೊಣ. ಅವುಗಳಿಗೆ ದಿಕ್ಕು ತಿಳಿಯಲು ಸೂರ್ಯನ ಬೆಳಕಿನ ಅಗತ್ಯವಿಲ್ಲ, ಅರಳಿ ನಿಂತಿರುವ ಹೂವಿನ ಬಳಿಯಿರುವ ಸಸ್ಯಶಾಸ್ತ್ರಜ್ಞನಿಗೆ ಅವುಗಳಲ್ಲಿ ಅತಿ ಹೆಚ್ಚು ಮಕರಂದ ದೊರೆಯುವ ಸಮಯ ಯಾವುದೆಂದು ತಿಳಿಯುವುದಿಲ್ಲ, ಆದರೆ ಹೂವಿನ ಬಳಿ ಹಾರುವ ಜೇನು ನೊಣಗಳು ಅದನ್ನು ಸುಲಭದಲ್ಲಿ ಗ್ರಹಿಸುತ್ತದೆ. ಜೇನು ನೊಣದ ಗೂಡು ನಿರ್ಮಾಣದ ಕೌಶಲ್ಯವು ಅದ್ಭುತವಾದದ್ದು ಅತಿ ನಿಪುಣನಾದ ಇಂಜಿನಿಯರನಿಗೂ ಅಂತಹ ನಿರ್ಮಾಣ ಸಾಧ್ಯವಿಲ್ಲ, ಜೇನು ನೊಣಗಳ ಕೆಲಸದ ವಿಂಗಡನೆಯು ಆಧುನಿಕ ಜಗತ್ತಿಗೆ ಸವಾಲಾಗಿದೆ.

ಗೆದ್ದಲು ಹುಳಗಳ ಗೂಡುಗಳು ಬಹಳ ಗಮನಾರ್ಹವಾದದ್ದು, ಅದು ಗಟ್ಟಿಯಾಗಿದ್ದು ಹಲವಾರು ಕೋಣೆಗಳನ್ನೊಳಗೊಂಡು 25 ಅಡಿ ಎತ್ತರವಿರುತ್ತದೆ. ಗೆದ್ದಲು ಹುಳುವಿನ ಗಾತ್ರ ಹಾಗೂ ಅದು ನಿರ್ಮಿಸುವ ಗೂಡಿನ ಎತ್ತರವನ್ನು ಹೋಲಿಸಿ ನೋಡಿದಾಗ, ಮಾನವನು ಅದಕ್ಕೆ ಸಮಾನವಾದ ಮನೆ ನಿರ್ಮಿಸುತ್ತಾನೆಂದಾದರೆ, ಕನಿಷ್ಠ 1000 ಅಂತಸ್ತಿನ ಮನೆ ನಿರ್ಮಿಸಬೇಕಾಗುತ್ತದೆ. ಕಪ್ಪೆಯು ಅದರ ಗಾತ್ರಕ್ಕಿಂತ 20 ಪಟ್ಟು ದೂರ ಹಾರುತ್ತದೆ. ಹಸಿರು ಮಿಡಿತೆ ಕೀಟದ ಸ್ಥಿತಿ ಇದಕ್ಕಿಂತಲೂ ಅದ್ಭುತವಾಗಿದೆ. ತನ್ನ ಗ್ರಾತಕ್ಕಿಂತ 200 ಪಟ್ಟು ಹೆಚ್ಚು ನೆಗೆಯಲು ಅದಕ್ಕೆ ಸಾಧ್ಯವಿದೆ. ಅದೇ ರೀತಿ ಮನುಷ್ಯ ಹಾರಬೇಕೆಂದಾದರೆ 400 ಮೀಟರ್

ದೂರ ತಲುಪಲು ಸಾಧ್ಯವಾಗಬೇಕು. ಆದರೆ ಇವೆಲ್ಲ ಊಹಿಸಲಾಸಾಧ್ಯವಾದಂತಹ ವಿಷಯಗಳು. ದೇಶಾಂತರ ಮಾಡುವ ಪಕ್ಷಿಗಳು ತಮ್ಮ ವಾತಾವರಣದ ಸ್ಥಿತಿ ಏರುಪೇರಾದರೆ ಸಾವಿರಾರು ಕಿಲೋಮೀಟರ್ ಹಾರಿ ಯೋಗ್ಯ ಸ್ಥಳವನ್ನು ಆರಿಸಿಕೊಳ್ಳುತ್ತವೆ. ಹೆಣ್ಣು ಚಿಟ್ಟೆಯು ತನ್ನ ಶರೀರದ ವಾಸನೆಯಿಂದ ಹನ್ನೊಂದು ಕಿಲೋಮೀಟರ್ ದೂರವಿರುವ ಗಂಡು ಚಿಟ್ಟೆಯನ್ನು ಆಕರ್ಷಿಸುತ್ತದೆ. ನಿಂತಲ್ಲಿಂದ ಮೇಲೆ, ಕೆಳಗೆ, ಮುಂದೆ, ಹಿಂದೆ, ಹಾರುವ ಸಾಮರ್ಥ್ಯವಿರುವ ದುಂಬಿಯು ವಿಸ್ಮಯಕರವಾಗಿದೆ. ಬೆಕ್ಕಿನ ದೃಷ್ಟಿಯ ಶಕ್ತಿ, ನಾಯಿಯ ಶ್ರವಣ ಶಕ್ತಿ, ಗಿಡುಗನ ಗ್ರಹಣ ಶಕ್ತಿಯು ಮನುಷ್ಯರಿಗಿಂತ ಎಷ್ಟೋ ಪಾಲು ಮೇಲ್ಮಟ್ಟದ್ದಾಗಿದೆ.

ಆದರೆ, ಮಾನವನ ಹೊರತು ಬೇರೆ ಯಾವುದೇ ಜೀವಿಗೂ ತನ್ನ ಹುಟ್ಟುಗುಣದ ಪರಿಧಿಯಿಂದ ಹೊರಬರಲು ಸಾಧ್ಯವಿಲ್ಲ, ಆದುದರಿಂದಲೇ ಅವುಗಳ ಲೋಕದಲ್ಲಿ ಅಭಿವೃದ್ಧಿ, ಪ್ರಗತಿ, ಆಧುನಿಕತೆ ಯಾವುದೂ ಸಾಧ್ಯವಲ್ಲ, ಸಾವಿರಾರು ವರ್ಷಗಳ ಹಿಂದೆ ಗೂಡು ಕಟ್ಟುತ್ತಿದ್ದಂತೆಯೇ ಜೇನು ನೊಣವು ಈಗಲೂ ಗೂಡು ಕಟ್ಟುತ್ತದೆ. ಹಕ್ಕಿಗಳು ಅನೇಕ ಶತಮಾನಗಳ ಹಿಂದಿನದೇ ಶೈಲಿಯಲ್ಲಿ ಹಾರುತ್ತವೆ. ಆದರೆ ಮನುಷ್ಯನಿಗೆ ಎಲ್ಲ ರಂಗಗಳಲ್ಲೂ ಬದಲಾವಣೆ ತರಲು ಸಾಧ್ಯವಾಗಿದೆ. ನಮ್ಮ ಪೂರ್ವಿಕರು ಗುಹೆಗಳಲ್ಲಿ ವಾಸಿಸುತ್ತಿದ್ದು, ಹಸಿರೆಲೆಗಳಿಂದ ಮಾನ ಮುಚ್ಚಿಕೊಳ್ಳುತ್ತಿದ್ದರು. ನಂತರ ಗುಡಿಸಲುಗಳಲ್ಲಿ ವಾಸ ಆರಂಭಿಸಿದರು, ಬಳಿಕ ಹುಲ್ಲು ಹಾಸಿದ ಮನೆಯಾಯಿತು. ಈಗ ಸುಂದರವಾದ ಕಾಂಕ್ರಿಟ್ ಸೌಧಗಳು. ಇನ್ನು ಮುಂದಿನ ಪೀಳಿಗೆಯ ವಾಸಸ್ಥಳ ಹೇಗಿರಬಹುದೆಂದು ಈಗಲೇ ಹೇಳಲು ಅಸಾಧ್ಯ. ಹಾರಾಡಬೇಕೆಂಬ ಮೋಹ ನಮ್ಮ ಪೂರ್ವಿಕರಿಗೂ ಇತ್ತು. ಆದರೆ ಅದನ್ನು ಅವರಿಗೆ ಕನಸು -ಮನಸ್ಸಿನಲ್ಲು ಊಹಿಸಲು ಸಾಧ್ಯವಿರಲಿಲ್ಲ, ಆದರೆ ನಾವೀಗ ಹಕ್ಕಿಗಳಿಗಿಂತಲೂ ವೇಗವಾಗಿ ಹಾರುವ ಉಪಗ್ರಹಗಳನ್ನು ಕಂಡುಹಿಡಿದಿದ್ದೇವೆ. ಮಾನವನಿಗೆ ತನ್ನ ವಿಶೇಷ ಬುದ್ಧಿ ಸಾಮರ್ಥ್ಯದಿಂದ ಕಲಿಯಲು, ಅರ್ಥಮಾಡಿಕೊಳ್ಳಲು, ವಿವೇಚಿಸಲು ಸಾಧ್ಯವಾಯಿತು. ಇದೇ ಮಾನವನ ಪ್ರಗತಿಗೂ ಅಭಿವೃದ್ಧಿಗೂ ಕಾರಣ.

ಅಂದರೆ ಮಾನವನು ಇತರ ಜೀವಿಗಳಿಗಿಂತ ಶ್ರೇಷ್ಠನಾಗಿದ್ದಾನೆ. ತನ್ನನ್ನು ನಿಯಂತ್ರಿಸಲು, ತನ್ನ ಸಾಮರ್ಥ್ಯದ ಮೇಲೆ ಹಿಡಿತ ಸಾಧಿಸಲು ಮನುಷ್ಯನಿಗೆ ಸಾಧ್ಯವಿದೆ. ಇತರ ಜೀವಿಗಳಿಂದ ಅದನ್ನು ಊಹಿಸಲು ಸಾಧ್ಯವಿಲ್ಲ, ಉದಾಹರಣೆಗೆ ಹಸಿವೆಯಿಂದ ಬಳಲಿದ ದನಕ್ಕೆ ಹುಲ್ಲು ಸಿಕ್ಕಿದರೆ ತಿನ್ನದಿರಲು ಸಾಧ್ಯವಿಲ್ಲ, ತನಗಿಂತ ಹೆಚ್ಚು ಹಸಿದಿರುವ ದನಗಳು ತಿಂದ ಬಳಿಕ ತಾನು ತಿನ್ನೋಣವೆಂದು ಅವು ಕಾಯಲಾರವು. ಬಾಯಾರಿದ ನಾಯಿಯೂ, ತನಗಿಂತ ಹೆಚ್ಚು ಬಳಲಿದ ಮರಿ ನಾಯಿಗೆ ನೀರು ಕೊಡದು. ಒಂದು ಹುಂಜ ಕುಕ್ಕಲು ಬಂದರೆ ಇನ್ನೊಂದು ಹುಂಜಕ್ಕೆ ಅದನ್ನು ಕ್ಷಮಿಸಲು ಅಥವಾ ಸಹಿಸಲು ಸಾಧ್ಯವಿಲ್ಲ, ಆದರೆ, ಮಾನವನ ಸ್ಥಿತಿಯು ಇವುಗಳಿಗಿಂತ ಭಿನ್ನವಾಗಿದೆ. ಹಸಿವೆಯಿಂದ ಕಂಗೆಟ್ಟಿದ್ದರೂ, ಬಳಿಯಲ್ಲೇ ಆಹಾರವಿದ್ದರೂ, ತಿನ್ನಬೇಕೆಂಬ ಅತಿಯಾದ ಆಸೆಯಿದ್ದರೂ ಅದನ್ನು ತಿನ್ನದಿರಲು ಮನುಷ್ಯನಿಗೆ ಸಾಧ್ಯವಿದೆ.

ಬಾಯಾರಿ ಬಳಲಿದಾಗ ನೀರನ್ನು ಕುಡಿಯದೆ ತಡೆದಿರಿಸಲು ನಮಗೆ ಸಾಧ್ಯವಿದೆ. ಜಗಳವಾಡಲು ಬಂದವರೊಡನೆ ಪ್ರತೀಕಾರವೆಸಗಲು ಸಾಧ್ಯವಿದ್ದರೂ, ಪ್ರತಿಸ್ಪರ್ಧಿಯ ಭಯದಿಂದಲೋ, ಸಂಸ್ಕಾರದ ದೆಸೆಯಿಂದಲೋ ಹಾಗೆ ಮಾಡದಿರಲು ಸಾಧ್ಯವಿದೆ. ಇದುವೇ ಮನುಷ್ಯನ ವಿಶೇಷತೆ.

ಬಯಕೆಗಳನ್ನು ನಿಯಂತ್ರಿಸಲು, ಮೋಹಗಳಿಗೆ ಕಡಿವಾಣ ಹಾಕಲು, ದೇಹೇಚ್ಛೆಗಳೊಡನೆ ಸೆಣಸಲು ಮನುಷ್ಯರಿಗೆ ಸಾಧ್ಯವಿದೆ. ಇದಕ್ಕೆ ಅವರಲ್ಲಿರುವ ಆಧ್ಯಾತ್ಮಿಕ ಅಂಶವೇ ಪ್ರಥಮ ಕಾರಣ. ಅದುದರಿಂದ ಮನುಷ್ಯರು ಹುಟ್ಟುಗುಣಗಳ ನಿಯಂತ್ರಣದಲ್ಲಿರುವರೋ, ಅವುಗಳ ಬಂಧಿತರೋ ಅಲ್ಲ . ಅವರ ಜೀವಿತದಲ್ಲಿ ಎರಡು ರೀತಿಗಳಿವೆ. ಒಂದು ಸ್ವತಃ ತಾನೇ ಆಯ್ದುಕೊಳ್ಳುವ, ತೀರ್ಮಾನಿಸುವ, ಸ್ವಾತಂತ್ರ್ಯವಿರುವ ವಲಯ. ಇನ್ನೊಂದು ಅಂತಹ ಸ್ವಾತಂತ್ರ್ಯವಿಲ್ಲದ ವಲಯ.

ನಮ್ಮ ದೇಶ,ರಾಜ್ಯ, ಮನೆ, ಕಾಲ, ವೇಷ,ಲಿಂಗ ಇವುಗಳನ್ನು ನಾವು ತೀರ್ಮಾನಿಸು ವವರಲ್ಲ, ನಾವು ಕರ್ನಾಟಕದಲ್ಲೋ, ಭಾರತದಲ್ಲೋ ಜನಿಸಬೇಕೆಂದು ಸ್ವಯಂ ತೀರ್ಮಾನಿಸಿ ರಲಿಲ್ಲ, ನಾವು ಉದ್ದದವರೋ, ಗಿಡ್ಡದವರೋ, ತಮಿಳರೋ, ಕನ್ನಡಿಗನೋ, ಕರಿಯರೋ, ಬಿಳಿಯರೋ, ಗಂಡೋ, ಹೆಣ್ಣೋ ಅಥವಾ 20ನೇ ಶತಮಾನದಲ್ಲಿ ಜನಿಸಬೇಕಿತ್ತೋ, 21ನೇ ಶತಮಾನದಲ್ಲಿ ಹುಟ್ಟಬೇಕಿತ್ತೋ ಎಂದು ತೀರ್ಮಾನಿಸುವ ಸಾಧ್ಯತೆ ಅಥವಾ ಸ್ವಾತಂತ್ರ್ಯ ನಮಗಾರಿಗೂ ಲಭಿಸಿಲ್ಲ ಇವೆಲ್ಲವೂ ಅನುಲ್ಲಂಘನೀಯನಾದ ದೇವ ನಿಯಮಕ್ಕೆ ಬದ್ಧವಾಗಿದೆ.

ಆದರೆ ಮನುಷ್ಯರಿಗೆ ಸ್ವತಃ ಆರಿಸಿಕೊಳ್ಳುವ ತೀರ್ಮಾನ ತೆಗೆದುಕೊಳ್ಳುವ ಸ್ವಾತಂತ್ರ್ಯ ವಿರುವ ವಿಶಾಲವಾದ ಕ್ಷೇತ್ರಗಳಿವೆ. ನಾವು ಏನು ತಿನ್ನಬೇಕು? ಏನು ತಿನ್ನಬಾರದು? ಏನು ಕುಡಿಯಬೇಕು? ಏನು ಕುಡಿಯಬಾರದು? ಎಂದು ತೀರ್ಮಾನಿಸುವ ಅವಕಾಶ ಎಲ್ಲರಿಗೂ ನೀಡಲ್ಪಟ್ಟಿದೆ. ಈ ಸ್ವಾತಂತ್ರ್ಯ ನಿಯಂತ್ರಣಕ್ಕೆ ಕಾನೂನು ಅಥವಾ ನಿಯಮ ಎನ್ನಲಾಗುತ್ತದೆ. ನಮಗೆ ಅಂತರಿಕ್ಷದಲ್ಲಿ ಕೈಯನ್ನು ಆಡಿಸಲು ಸಾಧ್ಯವಿದೆ. ಆದರೆ ಅದು ಬೇರೆಯವರ ದೇಹಕ್ಕೆ ತಾಗಬಾರದೆಂಬ ನಿಯಂತ್ರಣವನ್ನು ಕಾನೂನು ಬಯಸುತ್ತದೆ. ನಮಗೆ ಮಾತನಾಡುವ ಸಾಮರ್ಥ್ಯವಿದೆ. ಆದರೆ, ಅದು ಇತರರ ಭಾವನೆಗಳನ್ನು ಕೆರಳಿಸುವಂತೆ ಅಥವಾ ಸ್ವಾಭಿಮಾನಕ್ಕೆ ಧಕ್ಕೆ ತರುವಂತಿರಬಾರದು.

ಮಾನವ ಜೀವನದಲ್ಲಿ ಇಂತಹ ನಿಯಮ, ನಿಯಂತ್ರಣಗಳು ಅನಿವಾರ್ಯವೆಂದು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದುದರಿಂದಲೇ ವಿಶ್ವದ ಎಲ್ಲ ಜನವಿಭಾಗಗಳಿಗೂ, ಸಮುದಾಯ ಗಳಿಗೂ ಕಾನೂನು ವ್ಯವಸ್ಥೆಯಿದೆ. ಸಂವಿಧಾನವಿದೆ ಹಾಗೂ ಅದನ್ನು ಜಾರಿಗೊಳಿಸುವ ವಿಧಾನಗಳಿವೆ. ಇಲ್ಲಿ ಒಂದು ಪ್ರಶ್ನೆ ಬಹಳ ಮುಖ್ಯವಾಗುತ್ತದೆ. ಮನುಷ್ಯನಿಗೆ ಈ ಕಾನೂನು ನಿರ್ದೇಶನಗಳನ್ನು ನೀಡಬೇಕಾದವರು ಯಾರು? ಆವನೇ ಸ್ವತಃ ಸಿದ್ಧಗೊಳಿಸಬೇಕೇ? ಇಂತಹ ಪ್ರಶ್ನೆಗಳನ್ನು ಪ್ರಜ್ಞಾವಂತರು ಕೇಳದಿರಲಾರರು. ವಿವರಿಸಿ ಹೇಳುವುದಾದರೆ ನಾನು ನನ್ನ ಕೈಯಿಂದ

ಏನು ಮಾಡಬೇಕು? ಏನು ಮಾಡಬಾರದು? ಕಣ್ಣಿನಿಂದ ಯಾವುದನ್ನು ನೋಡಬೇಕು? ನೋಡಬಾರದು? ಕಿವಿಯಿಂದ ಏನು ಕೇಳಬೇಕು? ಕೇಳಬಾರದು? ನಾಲಿಗೆಯಿಂದ ಏನು ಹೇಳಬಹುದು? ಏನು ಹೇಳಬಾರದು? ಕಾಲಿನಿಂದ ಎಲ್ಲಿಗೆಲ್ಲಾ ಹೋಗಬಹದು? ಎಲ್ಲಿಗೆ ಹೋಗಬಾರದು? ಹಾಗಾದರೆ ಇದನ್ನು ತೀರ್ಮಾನಿಸಬೇಕಾದವರು ಯಾರು? ಇದೆಲ್ಲಾ ಸ್ವತಃ ಪ್ರತಿಯೊಬ್ಬರೂ ನಿರ್ಧರಿಸಿಕೊಳ್ಳಲಿ ಎಂದು ನಮಗೆ ಹೇಳಬಹುದು. ಅಂತಾದರೆ 600 ಕೋಟಿ ಜನರ ಪರ, ವಿರುದ್ಧ ಅಭಿಪ್ರಾಯಗಳು, ಆಶೆಗಳು, ಆಗ್ರಹಗಳ ನಡುವೆ ಘರ್ಷಣೆಗಳಿಗೆ ನಾವು ಸಾಕ್ಷ್ಯವಹಿಸಬೇಕಾದೀತು.

ಅದರೊಂದಿಗೆ ನಮಗೆ ನಮ್ಮ ಮೇಲೆ ಎಷ್ಟು ಹಕ್ಕಿದೆಯಂಬ ಪ್ರಶ್ನೆಯು ಪ್ರಸಕ್ತವಾಗಿದೆ. ನಾವು ಸಾಮಾನ್ಯವಾಗಿ ಇದು ನನ್ನ ನಾಲಿಗೆ, ನನ್ನ ಕಿವಿ, ನನ್ನ ಮೂಗು, ನನ್ನ ಕಾಲು ಎಂದು ಹೇಳುತ್ತೇವೆ. ಆದರೆ ಸೂಕ್ಷ್ಮವಾಗಿ ಗಮನಿಸುವಾಗ ಇವುಗಳಲ್ಲಿ ಒಂದೂ ನಮ್ಮದಲ್ಲವೆಂದು ಮನದಟ್ಟಾಗುತ್ತದೆ. ಏಕೆಂದರೆ ಇವುಗಳ ಮೇಲೆ ನಮಗೆ ಒಡೆತನವೋ, ನಿಯಂತ್ರಣವೋ, ಸಾಧ್ಯವಿಲ್ಲ, ಕೈ ನಮ್ಮದೇ ಆಗಿದ್ದರೂ ಅದು ಒಮ್ಮೆಯೂ ನೋವು ಅನುಭವಿಸುತ್ತಿರಲಿಲ್ಲ, ನಮ್ಮಲ್ಲಿ ಹಲವರು ಕನ್ನಡಕ ಧರಿಸಿದ್ದಾರೆ. ಕಣ್ಣು ನಮ್ಮದಾಗಿದ್ದರೆ ನಮಗೆ ಆ ಅನಿವಾರ್ಯತೆ ಬರುತ್ತಿರಲಿಲ್ಲ, ಕೈ ಕಾಲುಗಳು ನಮ್ಮದಾಗಿದ್ದರೆ ಅದು ಸಣಕಲಾಗಿ ದುರ್ಬಲವಾಗುತ್ತಿರಲಿಲ್ಲ, ಕಿವಿ ನಮ್ಮದಾಗಿರುತ್ತಿದ್ದರೆ ಶ್ರವಣ ಶಕ್ತಿ ಕಡಿಮೆಯಾಗುತ್ತಿರಲಿಲ್ಲ, ಅದೇ ರೀತಿ ನಾವು ನಮ್ಮದೆಂದು ಹೇಳುವ ಶರೀರ, ದೇಹದ ಅವಯವಗಳು, ಆಯಸ್ಸು, ಆರೋಗ್ಯ, ಜೀವನ, ಬದುಕು ಒಂದೂ ನಮ್ಮದಲ್ಲ, ಅದು ಸಂಪೂರ್ಣವಾಗಿ ನಮ್ಮ ಒಡೆತನದಲ್ಲೋ ನಿಯಂತ್ರಣದಲ್ಲೋ ಇಲ್ಲ, ನಮಗೆ ಅವುಗಳನ್ನು ನೀಡಿದ ಪ್ರಪಂಚದ ಸೃಷ್ಟಿಕರ್ತನಿಗೆ ಮಾತ್ರ ಅದರ ಒಡೆತನವಿದೆ. ಇವುಗಳನ್ನು ಸೃಷ್ಟಿಸಿದ್ದು ನಾವಲ್ಲವಲ್ಲ! ನಿಜವಾಗಿ ಮನುಷ್ಯ ಈ ಭೂಮಿಯಲ್ಲಿ ನಿರ್ಮಾಣ ಕೆಲಸವನ್ನು ಮಾಡುವುದಿಲ್ಲ, ನಮ್ಮ ಸೌಕರ್ಯಕ್ಕಾಗಿ ನಾವು ಹಾಗೆ ಹೇಳುತ್ತೇವೆ. ಬಡಗಿ ಮೇಜು ನಿರ್ಮಿಸಿದ ಎನ್ನುತ್ತೇವೆ. ಆದರೆ ನಮಗೆ ತಿಳಿದಿರುವಂತೆ ಆ ಮೇಜಿನ ಮರವನ್ನುಂಟು ಮಾಡಿದ್ದು ಬಡಗಿಯಲ್ಲ, ಅದರ ನಿರ್ಮಾಣಕ್ಕೆ ಅಗತ್ಯವಾದ ಮೊಳಗಳಿಗೆ ಕಬ್ಬಿಣವನ್ನು ಉಂಟು ಮಾಡಿದವನು ಅವನಲ್ಲ, ಬಡಗಿಯನ್ನು ಸೃಷ್ಟಿಸಿರುವವನು ಬಡಗಿಯಲ್ಲ ಎಂಬುದು ಸತ್ಯವಾಗಿರುವಾಗ ಬಡಗಿ ಮೇಜನ್ನು ಮಾಡಿದ ಎಂಬ ಮಾತು ಎಷ್ಟೊಂದು ಅಸಂಬದ್ಧವೆಂದು ಆಲೋಚಿಸಬೇಕು. ಪ್ರಪಂಚದಲ್ಲಿರುವ ಮೂಲ ವಸ್ತುಗಳಲ್ಲಿ ಬದಲಾವಣೆ ಉಂಟುಮಾಡಲು ಮಾತ್ರ ನಮಗೆ ಸಾಧ್ಯವೇ ಹೊರತು ಹೊಸದಾಗಿ ನಿರ್ಮಿಸಲು ಸಾಧ್ಯವಿಲ್ಲ,

ನಿರ್ಮಾಣ ಮಾಡದವರಿಗೆ ಒಂದು ವಸ್ತುವಿನ ಮೇಲೆ ಪೂರ್ಣ ಅಧಿಕಾರವೋ ಒಡೆತನವೋ ಇಲ್ಲ, ಸೃಷ್ಟಿಸಿರುವವನೇ ಮಾಲಿಕನಾಗಿರುತ್ತಾನೆ, ಅವನಿಗೆ ಮಾತ್ರ ನಿಯಮವನ್ನು ನಿರ್ಮಿಸುವ ಅಧಿಕಾರವಿರುವುದು. ಆದ್ದರಿಂದ ನಾವು ಹೇಗೆ ಜೀವಿಸಬೇಕು? ಹೇಗೆ ಜೀವಿಸಬಾರದು? ಏನು ಮಾಡಬಹುದು? ಮಾಡಬಾರದು? ಎಂದು ನಿರ್ಧರಿಸುವ ಅಧಿಕಾರ

ನಮ್ಮ ಮತ್ತು ಪ್ರಪಂಚದ ಸೃಷ್ಟಿಕರ್ತನಿಗೆ ಮಾತ್ರ ಇದೆ ಎಂಬುದು ಇಸ್ಲಾಮಿನ ಮೂಲಭೂತ ಸಿದ್ಧಾಂತ. ಮನುಷ್ಯರಿಗೆ ಆರಿಸಿಕೊಳ್ಳುವ ಸ್ವಾತಂತ್ರ್ಯವಿರುವ ರಂಗಗಳಲ್ಲಿ ದೇವನ ಕಾನೂನು ವ್ಯವಸ್ಥೆಗೆ ವಿಧೇಯರಾಗಿ, ಅವನು ಸೂಚಿಸಿದ ಜೀವನ ವ್ಯವಸ್ಥೆಯನ್ನು ಇಸ್ಲಾಮ್ ಎನ್ನಲಾಗುತ್ತದೆ. ಈ ಜೀವನ ಪದ್ಧತಿಯನ್ನು ಅನುಸರಿಸುವ ವ್ಯಕ್ತಿಗಳನ್ನು ಮುಸ್ಲಿಮರೆಂದು ಹೇಳಲಾಗುತ್ತದೆ. ಇದು ಯಾವುದೇ ಜಾತಿ, ದೇಶ, ವರ್ಣ, ಭಾಷೆಗಳ ವಿಶೇಷ ನಾಮಧಾರಿಗಳ ಹೆಸರೇನಲ್ಲ, ಇದನ್ನು ಈ ಪ್ರಪಂಚವನ್ನು ಸೃಷ್ಟಿಸಿದ ದೇವನೇ ನಿರ್ಮಿಸಿದ್ದಾನೆ.

ದೇವನು ಪ್ರಪಂಚದ ಸೃಷ್ಟಿಕರ್ತ. ಇಲ್ಲಿರುವುದೆಲ್ಲಾ ಸೃಷ್ಟಿಗಳು. ಸೃಷ್ಟಿಗಳು ಸೃಷ್ಟಿಕರ್ತರಾಗಲು ಸಾಧ್ಯವಿಲ್ಲ, ದೇವನನ್ನು ಪ್ರಪಂಚದ ಸೃಷ್ಟಿಗಳೊಂದಿಗೆ ಹೋಲಿಸಲು ಸಾಧ್ಯವಿಲ್ಲ. ಈ ಪ್ರಪಂಚವು ದೇವನ ಸೃಷ್ಟಿ ಮಹಾತ್ಮೆಯ ಉತ್ತಮ ನಿದರ್ಶನವಾಗಿದೆ. ನಮ್ಮ ತಿಳುವಳಿಕೆಯಂತೆ ನಾವು ಗಡಿಯಾರವನ್ನು ತಯಾರಿಸುತ್ತೇವೆ ಅಥವಾ ಯಾವುದಾದರೂ ವಸ್ತುವನ್ನು ನಿರ್ಮಿಸುತ್ತೇವೆ. ಆದರೆ, ಆ ವಸ್ತುವಿಗೆ ನಮ್ಮಂತೆ ನೋಡುವ, ಕೇಳುವ, ಚಿಂತಿಸುವ, ಅರ್ಥ ಮಾಡಿಕೊಳ್ಳುವಂತಹ ಸಾಮರ್ಥ್ಯವಿಲ್ಲ, ನಾವು ತಯಾರಿಸಿದ ವಸ್ತುವು ನಮ್ಮ ಸಾಮರ್ಥ್ಯಕ್ಕೆ ಹಾಗೂ ನಮ್ಮ ಬುದ್ಧಿವಂತಿಕೆಗೆ ಸಾಕ್ಷಿಯಾಗಿದೆ. ಹೀಗೆ ಪ್ರಪಂಚದ ಯಾವುದೇ ವಸ್ತುವಿಗೂ ದೇವನಂತೆ ಕಾಣಲು, ಕೇಳಲು, ಅರ್ಥಮಾಡಿಕೊಳ್ಳಲು ಅಥವಾ ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ, ಅವು ಸೃಷ್ಟಿಕರ್ತನಂತೆ ಸರ್ವಜ್ಞನೂ, ಸರ್ವಶಕ್ತನೂ ಅಲ್ಲ, ಮಾತ್ರವಲ್ಲ ಅವೆಲ್ಲವೂ ದೇವನ ಸೃಷ್ಟಿ ಮಹಾತ್ಮೆಯ ನಿರ್ಮಾಣ ಕೌಶಲ್ಯದ ಉತ್ತಮ ದೃಷ್ಟಾಂತವಾಗಿದೆ. ಆದ್ದರಿಂದ ಪ್ರಪಂಚದ ಹಾಗೂ ಸಕಲ ಚರಾಚರಗಳ ಸೃಷ್ಟಿಕರ್ತನೂ, ಸಂರಕ್ಷಕನೂ ಆದ ದೇವನಿಗೆ ಮಾತ್ರ ಕಾನೂನು ನಿರ್ಮಿಸುವ ಪರಮಾಧಿಕಾರವಿದೆಯೆಂದೂ ಅದರಂತೆ ಮಾನವರು ಜೀವಿಸಬೇಕೆಂದೂ ಧರ್ಮವು ಕಲಿಸುತ್ತದೆ. ದೇವಗ್ರಂಥವು ಹೇಳುತ್ತದೆ: 'ಹೇ ಜನರೇ, ನಿಮ್ಮನ್ನೂ ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ.'

(ಪವಿತ್ರ ಕುರ್‌ಆನ್-2:21)

ದೇವನ ಹೊರತು ಯಾರಿಗೂ ಇದರ ಕುರಿತು ಸ್ಪಷ್ಟ ಜ್ಞಾನವಿರಲು ಸಾಧ್ಯವಿಲ್ಲ ದೇವನ ಸಂದೇಶವಾಹಕರಿಗೂ ಅವನು ತಿಳಿಸಿಕೊಟ್ಟದ್ದಕ್ಕಿಂತ ಹೆಚ್ಚು ಅಲೌಕಿಕ ವಿಷಯಗಳನ್ನು ತಿಳಿಯಲು ಸಾಧ್ಯವಿಲ್ಲ, ಆದ್ದರಿಂದ ಅಲೌಕಿಕ ರೀತಿಯಿಂದ ಯಾರಿಗೂ ಉಪಕಾರವೋ ಉಪದ್ರವವೋ ಮಾಡುವುದು ದೇವನ ಹೊರತು ಇನ್ನಾರಿಗೂ ಸಾಧ್ಯವಲ್ಲ, ಆದ್ದರಿಂದ ದೇವನ ಹೊರತು ಇತರರನ್ನು ಪ್ರಾರ್ಥಿಸುವಂತಿಲ್ಲ ಅಥವಾ ಸಹಾಯ ಬೇಡುವಂತಿಲ್ಲ, ಆರಾಧನೆಯನ್ನು ಅವನಿಗೆ ಮಾತ್ರ ಅರ್ಪಿಸಬೇಕು. ಹೀಗೆ ಜೀವನದ ಎಲ್ಲಾ ರಂಗಗಳಲ್ಲಿ ದೇವನನ್ನು ಮಾತ್ರ ಅನುಸರಿಸಿ, ಆರಾಧಿಸಿ ಜೀವಿಸಬೇಕೆಂದು ಇಸ್ಲಾಮ್ ಕರೆ ನೀಡುತ್ತದೆ.

ಮರಣದ ಬಳಿಕ ಜೀವನವಿದೆ ಎಂಬುದು ಇಸ್ಲಾಮ್‌ನ ಎರಡನೇ ಮೂಲ ಭೂವಿಶ್ವಾಸ. ನಮಗೆ ತಿಳಿದಿರುವಂತೆ ಮನುಷ್ಯರು ಮರಣದಿಂದ ಈ ಭೂಮಿಯಿಂದ ನಿರ್ಗಮಿಸುತ್ತಾರೆ.

ಸಾವಿರಾರು ಮಂದಿಯನ್ನು ಕೊಂದ ಕ್ರೂರಿಗಳು ಈ ಲೋಕದಲ್ಲಿ ಆಗಿ ಹೋಗಿದ್ದಾರೆ. ಅವರಿಗೆ ಸೂಕ್ತ ಶಿಕ್ಷೆ ನೀಡಲು ಯಾರಿಗೂ ಸಾಧ್ಯವಾಗಿಲ್ಲ. ಅದು ಸಾಧ್ಯವೂ ಅಲ್ಲ. ಒಬ್ಬನಿಗೆ ಈ ಲೋಕದಲ್ಲಿ ನಾವು ನೀಡಬಹುದಾದ ಗರಿಷ್ಠ ಶಿಕ್ಷೆಯೆಂದರೆ ಅವನನ್ನು ಕೊಲ್ಲುವುದು. ಆದರೆ ಅಪರಾಧಿಯನ್ನು ಕೊಲ್ಲುವುದರಿಂದ ಅವನಿಂದ ಕೊಲ್ಲಲ್ಪಟ್ಟ ಮನೆಯವರಿಗೆ ನ್ಯಾಯ ದೊರೆತಂತಾಗುತ್ತದೆಯೇ? ಉದಾಹರಣೆಗೆ ನಾನು ಕೊಲೆಯಾದರೆ ನನ್ನ ಪತ್ನಿ, ಮಕ್ಕಳು ಆ ನಷ್ಟವನ್ನು ಅನುಭವಿಸುತ್ತಾರೆ. ನನ್ನ ಕೊಲೆಗಾರನನ್ನು ನೇಣಿಗೇರಿಸುವುದರಿಂದ ಅವರು ಅನುಭವಿಸುವ ನೋವು, ವಿರಹ ಕಡಿಮೆಯಾಗಲು ಸಾಧ್ಯವಿಲ್ಲ. ಆದರೆ ಈ ಭೂಮಿಯಲ್ಲಿ ಶಾಂತಿ ಸ್ಥಾಪನೆಗೆ ನ್ಯಾಯಾಧೀಶರು, ನ್ಯಾಯಾಲಯಗಳು ಅಥವಾ ತೀರ್ಪುಗಳು ಅನಿವಾರ್ಯವಾಗಿದೆ.

ನ್ಯಾಯ ದೊರೆಯಬೇಕೆಂದು ಬಯಸದವರು ಯಾರೂ ಇರಲಾರರು. ನನ್ನ ನೆನಪಿನಲ್ಲಿರುವ ಒಂದು ಘಟನೆಯನ್ನು ಹೇಳುತ್ತೇನೆ: ಸೋಮನ್ ಎಂಬ ಸಬ್ ಇನ್ಸ್‌ಪೆಕ್ಟರ್‌ನ ಕೊಲೆ ಪೊಲೀಸ್ ಸ್ಟೇಶನಿನಲ್ಲಿ ನಡೆಯಿತು. ಕೊಲೆಗಾರ ಆತನ ಸಹೋದ್ಯೋಗಿಯೆಂದು ಸಂಶಯಿಸಿ ಕೆಳ ನ್ಯಾಯಾಲಯವು ಆತನಿಗೆ ಶಿಕ್ಷೆ ವಿಧಿಸಿತು. ಆದರೆ ಎಂಟು ವರ್ಷಗಳ ಬಳಿಕ ಉಚ್ಚ ನ್ಯಾಯಾಲಯವು ಅವನನ್ನು ನಿರಪರಾಧಿಯೆಂದು ಹೇಳಿ ಬಿಡುಗಡೆಗೊಳಿಸಿತು. ಸುದೀರ್ಘ ವರ್ಷಗಳಿಂದ ತನ್ನ ಪತಿಯ ಕೊಲೆಗಾರನೆಂದು ಭಾವಿಸಿದ್ದ ವ್ಯಕ್ತಿಯು ಬಿಡುಗಡೆಯಾದ ವಿಷಯ ತಿಳಿದ ಸೋಮನ್‌ರ ಪತ್ನಿ ಬಿಕ್ಕಿ ಬಿಕ್ಕಿ ಅಳುವ ಚಿತ್ರ ಪತ್ರಿಕೆಗಳಲ್ಲಿ ಪ್ರಕಟವಾಯಿತು. ನ್ಯಾಯ ದೊರೆಯಬೇಕೆಂಬ ಮಾನವನ ಇಚ್ಛೆಯನ್ನು ಇದು ಪ್ರತಿಧ್ವನಿಸುತ್ತದೆ. ಆದರೆ ಈ ಲೋಕದಲ್ಲಿ ಸೂಕ್ತ ನ್ಯಾಯ ಲಭಿಸುವುದು ಅಸಾಧ್ಯ. ನೂರಾರು, ಸಾವಿರಾರು ಮಂದಿಯನ್ನು ಕೊಂದವನಿಗೆ ಇಲ್ಲಿ ಯಾವ ಶಿಕ್ಷೆ ನೀಡಲು ಸಾಧ್ಯವಿದೆ ? ಅದೇ ರೀತಿ ಒಳಿತನ್ನು ಮಾಡುವವರಿಗೆ ಇಲ್ಲಿ ಸೂಕ್ತ ರಕ್ಷಣೆಯೂ ದೊರೆಯುವುದಿಲ್ಲ. ನ್ಯಾಯದ ನೈಜ ಬೇಡಿಕೆ ಈಡೇರದೆ ಮಾನವ ಜೀವನ ಮುದುಡಿದೆ. ಅದ್ಭುತ ಸೃಷ್ಟಿಗೆ ಅಂತಹ ಸಂಪೂರ್ಣತೆಯ ಅಂತ್ಯವಿದೆಯೆಂದು ಧರ್ಮ ಕಲಿಸುತ್ತದೆ.

ಮಾನವನ ಶರೀರ ರಚನೆಯ ವೈವಿಧ್ಯತೆಯನ್ನು ಒಂದು ನಿಮಿಷ ಆಲೋಚಿಸಿ ನೋಡಿ. ಈ ಲೋಕದಲ್ಲಿ 600 ಕೋಟಿಗಿಂತಲೂ ಅಧಿಕ ಜನರಿದ್ದಾರೆ. ಒಂದೇ ವಾಯುವನ್ನು ಉಸಿರಾಡುತ್ತಾ, ಒಂದೇ ರೀತಿಯ ನೀರು ಕುಡಿಯುತ್ತಾ, ಒಂದೇ ಭೂಮಿಯ ಮೇಲೆ, ಒಂದೇ ಸೂರ್ಯನ ಕೆಳಗೆ ಬದುಕುತ್ತಿರುವ ಈ ಜನರಲ್ಲಿ ಒಬ್ಬರಿಗೂ ಇನ್ನೊಬ್ಬರಂತಹ ಮುಖವಿಲ್ಲ. ಮನುಷ್ಯನ ಮುಖವು ಎರಡು ಕೈಗಳಿಂದ ಮುಚ್ಚಲು ಸಾಧ್ಯವಿರುವಂತಹ ಸಣ್ಣ ಭಾಗವಾಗಿದೆ. ಆದರೆ ನಮ್ಮಂತೆ ಇನ್ನೊಬ್ಬರಿದ್ದಾರೆಯೇ? ವಿಶ್ವದ ವಿವಿಧ ಭಾಗಗಳಿಂದ ಲಕ್ಷಾಂತರ ಮಂದಿ ಹಜ್ಜ್ ಯಾತ್ರೆಗಾಗಿ ಒಟ್ಟು ಸೇರುತ್ತಾರೆ. ಅಲ್ಲಿ ನಮ್ಮ ಊರಿನವರನ್ನು ಕಂಡರೆ ನಾವು ಸುಲಭವಾಗಿ ಗುರುತಿಸುತ್ತೇವೆ. ಶಬರಿಮಲೆಗೆ ಆಗಮಿಸುವ ಯಾತ್ರಾರ್ಥಿಗಳಲ್ಲೂ ನಮ್ಮೂರಿನವರನ್ನು ಸುಲಭದಲ್ಲಿ ಗುರುತಿಸಬಹುದು. ಕಾರಣವೇನೆಂದರೆ ನಮ್ಮವರಂತೆ ಅಲ್ಲಿ ಯಾರೂ ಇಲ್ಲ. ನೀವೊಮ್ಮೆ ನಿಮ್ಮ ಕೈಬೆರಳುಗಳನ್ನು ಸೂಕ್ಷ್ಮವಾಗಿ ನೋಡಿ. ನಮ್ಮ ಹೆಬ್ಬೆರಳು ಎಷ್ಟು ಕಿರಿದಾಗಿದೆ.

ಓರ್ವ ಉತ್ತಮ ಚಿತ್ರಕಾರನಿಗೆ ಆ ಸಣ್ಣ ಸ್ಥಳದಲ್ಲಿ ಒಂದು ವಸ್ತುವಿನ ಎಷ್ಟು ರೂಪಗಳನ್ನು ಮಾಡಲು ಸಾಧ್ಯ? ಈ ಲೋಕದ 600 ಕೋಟಿ ಮನುಷ್ಯರಲ್ಲಿ ಒಬ್ಬರಿಗೂ ಇನ್ನೊಬ್ಬರಂತಹ ಕೈ ಬೆರಳುಗಳಿಲ್ಲ. ಮಾತ್ರವಲ್ಲ ಸತ್ತು ಹೋದ ಕೋಟ್ಯಂತರ ಮಾನವರ ಅಥವಾ ಇನ್ನು ಜನಿಸಲಿರುವವರಿಗೂ ನಮ್ಮಂತಹ ಕೈ ಬೆರಳುಗಳಿರಲು ಸಾಧ್ಯವಿಲ್ಲ. ಆದ್ದರಿಂದಲೇ ದಾಖಲೆಗಳಲ್ಲಿ ಹೆಬ್ಬೆಟ್ಟು ಒತ್ತುವ ಪದ್ಧತಿಯಿದೆ.

• 1400 ವರ್ಷಗಳ ಹಿಂದೆ ಅಲ್ಲಾಹನು ಹೇಳಿದ್ದಾನೆ: **'ನಾವಂತು ಅವನ ಬೆರಳುಗಳ ತುದಿಗಳನ್ನು ಕೂಡಾ ಸರಿಯಾಗಿ ರಚಿಸಲು ಶಕ್ತರಾಗಿದ್ದೇವೆ.'** ( ಪವಿತ್ರ ಕುರ್‌ಆನ್ 75:4) ಕೈ ಬೆರಳುಗಳ ಈ ವಿಶೇಷತೆನ್ನು ವೈಜ್ಞಾನಿಕವಾಗಿ ಕಂಡು ಹಿಡಿಯುವ ನೂರಾರು ವರ್ಷಗಳ ಹಿಂದೆಯೇ ಕುರ್‌ಆನ್ ಆ ಕುರಿತು ಬೆಳಕು ಚೆಲ್ಲಿದೆ. ನಮ್ಮಲ್ಲಿ ಪ್ರತಿಯೊಬ್ಬನ ದೇಹಕ್ಕೂ ಒಂದೊಂದು ರೀತಿಯ ವಾಸನೆಯಿದೆ. ನನ್ನ ಶರೀರದ ವಾಸನೆಯಂತೆ ನಿಮ್ಮ ದೇಹದ ವಾಸನೆ ಇರಲು ಸಾಧ್ಯವಿಲ್ಲ. ಅದರಿಂದಾಗಿ ಆರೋಪಿಗಳನ್ನು ಪತ್ತೆ ಹಚ್ಚಲು ತರಬೇತಿ ಪಡೆದ ನಾಯಿಗಳು ಮಾನವ ದೇಹದ ವಾಸನೆಯನ್ನು ಉಪಯೋಗಿಸುತ್ತದೆ. ಇದರಿಂದ ಅತ್ಯಂತ ಯೋಜನಾ ಬದ್ಧವಾಗಿ ಸೃಷ್ಟಿಕಾರ್ಯ ನಡೆದಿದೆಯೆಂದು ಸ್ಪಷ್ಟವಾಗುತ್ತದೆ. ಹೀಗೆ ಯುಕ್ತಿಪೂರ್ಣವಾಗಿ ರಚಿಸಲಾಗಿರುವ ಮಾನವರ ಅಂತ್ಯ, ಅರ್ಥಶೂನ್ಯ ಹಾಗೂ ಅನ್ಯಾಯವಾಗಿ ಕೊನೆಗೊಳ್ಳುವುದು ಅಸಾಧ್ಯ. ಅದಕ್ಕೆ ನ್ಯಾಯ ಪೂರ್ಣ ಅಂತ್ಯವಿರಲೇಬೇಕಾಗಿದೆ.

ಮನುಷ್ಯ ತನ್ನ ಕರ್ಮಫಲವನ್ನು ಅನುಭವಿಸಬೇಕೆಂಬುದು ನ್ಯಾಯದ ಬೇಡಿಕೆಯಾಗಿದೆ. ಆದರೆ ಅಂತಹ ನ್ಯಾಯದ ಕಲ್ಪನೆ ಈ ಭೂಮಿಯಲ್ಲಿ ಅಸಾಧ್ಯ. ಆದ್ದರಿಂದ ಧರ್ಮವು ನಮ್ಮೊಡನೆ ಹೇಳುತ್ತದೆ; ಮರಣದಿಂದ ಶಾಶ್ವತ ಅಂತ್ಯ ಸಂಭವಿಸುವುದಿಲ್ಲ, ಅದು ನಮ್ಮ ಬದುಕಿನಲ್ಲಿ ಒಂದು ಬದಲಾವಣೆ ಮಾತ್ರ. ಜೀವನವು ನಿರಂತರ ಮುಂದುವರಿಯುತ್ತಲೇ ಇರುತ್ತದೆ. ಮರಣದ ಬಳಿಕ ಮನುಷ್ಯರು ಬೇರೆ ಲೋಕದಲ್ಲಿ ತನ್ನ ಕರ್ಮಫಲವನ್ನು ಅನುಭವಿಸುತ್ತಾರೆ. ಪ್ರತಿಯೋರ್ವನೂ ತಾನು ಮಾಡಿದ ಕರ್ಮದ ಫಲವನ್ನು ಮಾತ್ರ ಅನುಭವಿಸುತ್ತಾನೆ.

**''ಪ್ರತಿಯೊಬ್ಬನೂ ತನ್ನ ದುಡಿಮೆಯ ಬದಲಿಗೆ ಅಡವಿಡಲ್ಪಟ್ಟಿದ್ದಾನೆ .''**

**(ಪವಿತ್ರ ಕುರ್‌ಆನ್-74:38)**

**''ಅಣುಗಾತ್ರದಷ್ಟು ಪುಣ್ಯಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು ಮತ್ತು ಅಣುಗಾತ್ರದಷ್ಟು ಪಾಪಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು.''**

**(ಪವಿತ್ರ ಕುರ್‌ಆನ್-99:7-8)**

ಆದ್ದರಿಂದ ದೇವನು ನಿರ್ಣಯಿಸಿದ ಮಾರ್ಗದಲ್ಲಿ ನಡೆದರೆ ಪ್ರತಿಫಲವಾಗಿ ಅಲ್ಲಾಹನು ವಾಗ್ದಾನ ಮಾಡಿದ ಸ್ವರ್ಗ ಲಭಿಸುತ್ತದೆ. ದೇವನು ವಿರೋಧಿಸಿದ ಮಾರ್ಗದಲ್ಲಿ ಸಾಗಿದರೆ ಆತನ ಶಿಕ್ಷೆಗೆ ಪಾತ್ರರಾಗುತ್ತಾರೆ.

ನಾವು ಯಾವುದೇ ಸ್ಥಳವನ್ನು ಸ್ಪರ್ಶಿಸಿದರೆ ಅಲ್ಲಿ ನಮ್ಮ ಬೆರಳಚ್ಚು ಬೀಳುತ್ತದೆ. ಎಲ್ಲೇ ಡೆದರೂ ನಮ್ಮ ದೇಹದ ವಾಸನೆ ವಾತಾವರಣದಲ್ಲಿ ಹರಡುತ್ತದೆ. ಅದೇ ರೀತಿ ನಮ್ಮ ಾತುಗಳು ಅಚ್ಚೊತ್ತಲ್ಪಡುತ್ತದೆ. ಅಂದರೆ ಮನುಷ್ಯನ ಕರ್ಮಗಳು ಬಹಳ ಸುಸೂತ್ರವಾಗಿ ಸ್ತುಬದ್ಧವಾಗಿ ಲಿಖಿತಗೊಳ್ಳುತ್ತದೆ. ಅವೆಲ್ಲವೂ ಅವನಿಗೆ ಅನುಕೂಲವಾಗಿ ಅಥವಾ ಪ್ರತಿಕೂಲ ಾಗಿ ಮರಣದ ನಂತರ ಸಾಕ್ಷ್ಯವಹಿಸುತ್ತದೆ. ಮಾನವರ ಯಾವ ಮಾತುಗಳೂ ಲಿಖಿತಗೊಳ್ಳದೆ ಳಿಯುವುದಿಲ್ಲವೆಂದು ಕುರ್‌ಆನ್ ಸ್ಪಷ್ಟವಾಗಿ ಸಾರುತ್ತದೆ. ಆದ್ದರಿಂದ ಮರಣದ ಬಳಿಕ ನುಷ್ಯ ತನ್ನ ಕರ್ಮಗಳಿಗೆ ಅನುಗುಣವಾಗಿ ಸ್ವರ್ಗ ಅಥವಾ ನರಕವನ್ನು ಪಡೆಯುತ್ತಾನೆ.

ಅಲ್ಲಾಹ್, ಸ್ವರ್ಗ, ನರಕ, ದೇವಚರರು ಹಾಗೂ ಶೈತಾನ್‌ಗಳ ಕುರಿತು ಪರೋಕ್ಷ ಞನಗಳಿಸಲು ಮನುಷ್ಯರಿಗೆ ಸಾಧ್ಯವಿದೆಯೇ? ನಮಗೆ ತಿಳಿದಿರುವಂತೆ ವಿಧ್ಯಾಭ್ಯಾಸದ ವಿಧ ಪ್ರಕಾರಗಳನ್ನು ಕಲಿಯಲು ಬೇರೆ ಬೇರೆ ವಿಧಾನಗಳಿವೆ. ಎರಡು ಮತ್ತು ಎರಡು ೇರಿದರೆ ನಾಲ್ಕು ಆಗುತ್ತದೆ ಮತ್ತು ನಾಲ್ಕಕ್ಕೆ ನಾಲ್ಕರಿಂದ ಗುಣಿಸಿದರೆ ಹದಿನಾರು ಆಗುತ್ತದೆಂಬ ೂತ್ರವನ್ನು ಉಪಯೋಗಿಸದೆ ಯಾರಿಗೂ ಅಂಕಗಣಿತ ಕಲಿಯಲು ಸಾಧ್ಯವಿಲ್ಲ, ಒಂದು ವೃತ್ತಕ್ಕೆ 0° ಡಿಗ್ರಿ, ತ್ರಿಕೋನಕ್ಕೆ 180° ಡಿಗ್ರಿ. ಈ ಸೂತ್ರವನ್ನು ತಿಳಿಯದೆ ಯಾರಿಗೂ ರೇಖಾಗಣಿತ ಿಯಲು ಸಾಧ್ಯವಿಲ್ಲ, ರೇಖಾಗಣಿತದ ಸೂತ್ರವನ್ನು ಉಪಯೋಗಿಸಿ ಭೂಗರ್ಭಶಾಸ್ತ್ರ ಿಯಲಾಗುವುದಿಲ್ಲ, ಅದೇ ರೀತಿ ಭೂಗರ್ಭಶಾಸ್ತ್ರದ ನಿಯಮದಂತೆ ಜೀವಶಾಸ್ತ್ರವನ್ನೋ ಥವಾ ಜೀವಶಾಸ್ತ್ರದ ನಿಯಮದಂತೆ ಖಗೋಳಶಾಸ್ತ್ರವನ್ನೋ ಅಭ್ಯಸಿಸಲು ಸಾಧ್ಯವಿಲ್ಲ, ಹೀಗೆ ವಿಧ ವಿಷಯಗಳಿಗೆ ಬೇರೆ ಬೇರೆ ನಿಯಮಗಳು, ಸೂತ್ರಗಳು ಅಗತ್ಯವಾಗಿದೆ.

ಅದರಂತೆ ದೇವರು, ಸ್ವರ್ಗ, ನರಕ, ಪರಲೋಕ, ದೇವಚರರು ಮುಂತಾದ ಪರೋಕ್ಷ ಞನಗಳಿಸಲು ಮನುಷ್ಯರ ಬಳಿ ಬೇರೆ ಮಾಧ್ಯಮಗಳಿವೆಯೇ? ನಾವಿಲ್ಲಿ ಒಟ್ಟು ಸೇರಿರುವುದು ಸ್ತವವಾಗಿದೆ. ಅದು ಓರ್ವ ವಿಜ್ಞಾನಿಗೆ ಪ್ರಯೋಗಾಲಯದಲ್ಲಿ ಕಂಡುಹಿಡಿಯುವಂತಹ ಷಯವಲ್ಲ, ಏಕೆಂದರೆ ಅದನ್ನು ಕಂಡು ಹಿಡಿಯುವ ರೀತಿ ಇದಲ್ಲ, ಇದೇ ವೇಳೆ ನುಷ್ಯರ ಬಳಿ ಅಲೌಕಿಕ ವಿಷಯಗಳನ್ನು ತಿಳಿಯಲು ಇರುವ ಮೂಲವೆಂದರೆ ಸಾಮಾನ್ಯ ನುಷ್ಯರಿಗಿಂತ ಭಿನ್ನವಾದ, ವಿಶೇಷವಾಗಿ ಆರಿಸಲ್ಪಟ್ಟ ದೇವ ಸಂದೇಶವಾಹಕರಿಂದ ದೊರೆತ ಕ ಜ್ಞಾನವಾಗಿದೆ. ಪರೋಕ್ಷ ಜ್ಞಾನವನ್ನು ಅರಿಯಲು ಸಾಧ್ಯವಾಗುವ ಏಕೈಕ ಮಾಧ್ಯಮ. ು ಜ್ಞಾನೇಂದ್ರಿಯಗಳಲ್ಲಿ 6ನೇಯದಾಗಿದೆ. ಒಂದು ವಿಷಯವನ್ನು ನೆನಪಿನಲ್ಲಿಡಬೇಕು. ಟ್ಟುಕುರುಡನೊಡನೆ ನಾವು ಎಲೆಯ ಬಣ್ಣ ಹಸಿರು, ಹಾಲಿನ ಬಣ್ಣ ಬಿಳಿ, ಕಾಗೆಯ ಬಣ್ಣ ್ಪ ಎಂದು ಹೇಳಿದರೆ ಅದನ್ನು ಹೇಳುವ ವ್ಯಕ್ತಿಯಲ್ಲಿ ಆತ ವಿಶ್ವಾಸವಿರಿಸಬೇಕಾಗುತ್ತದೆ. ಲಾಗಿ ಹೇಳುವ ವ್ಯಕ್ತಿಯಲ್ಲಿ ಕುರುಡನಿಗೆ ನಂಬಿಕೆಯಿಲ್ಲವೆಂದಾದರೆ ಒಂದು ದೊಡ್ಡ ನದಗಳಿಕೆಯಿಂದ ಅವನು ವಂಚಿತನಾಗುತ್ತಾನೆ. ಅದೇ ರೀತಿ ಮನುಷ್ಯರಿಂದ ಆರಿಸಲ್ಪಟ್ಟ, ವನದಲ್ಲಿ ಒಮ್ಮೆಯೂ ಸುಳ್ಳು ಹೇಳದ, ಯಾರನ್ನು ವಂಚಿಸದ, ನಯ ವಿನಯಗಳ ಸಾಕಾರ

ರೂಪವಾಗಿರುವ ದೇವ ಸಂದೇಶವಾಹಕರಿಂದ ದೊರೆತ ದಿವ್ಯ ಸಂದೇಶವನ್ನು ನಿರಾಕರಿಸುವವ
ಪರಿಸ್ಥಿತಿಯೂ ಆಗಿದೆ. ಸತ್ಯಸಂಧತೆಯ ಕುರಿತು ಯಾರಿಗೂ ಸಂಶಯವಿಲ್ಲದಂತಹ
ಸಂದೇಶವಾಹಕರನ್ನು ಒಪ್ಪಿಕೊಳ್ಳದವರಿಗೆ ಪರೋಕ್ಷ ಜ್ಞಾನದ ಒಂದು ವಿಶಾಲವಾದ ಲೋಕವೆ
ಅಪರಿಚಿತವಾಗಿರುತ್ತದೆ. ಪರೋಕ್ಷ ಜ್ಞಾನವನ್ನು ಪರಿಚಯಿಸಲು ವಿಶ್ವದ ವಿವಿಧ ಕಡೆಗಳಲ್ಲಿ
ಇತಿಹಾಸದ ವಿವಿಧ ಕಾಲಗಳಲ್ಲಿ ಮಾರ್ಗದರ್ಶಕರನ್ನು ಕಳಿಸಲಾಗಿತ್ತು ಎಂದು ಇಸ್ಲಾಮ
ಕಲಿಸುತ್ತದೆ. ಆ ದೇವ ಸಂದೇಶವಾಹಕರು ಮಾನವ ಸಮೂಹದೊಂದಿಗೆ ಹೇಳಿದ ಮಾತ
ಒಂದೇ ಆಗಿತ್ತು. ''ನೀವು ಈ ಪ್ರಪಂಚದ ಸೃಷ್ಟಿಕರ್ತನಿಗೆ ಮಾತ್ರ ಶಿರಬಾಗಿ, ವಿಧೇಯರಾಗಿ
ಅವನನ್ನು ಮಾತ್ರ ಅನುಸರಿಸಿ, ಆತನ ದಾಸರಾಗಿ ಬಾಳಿರಿ ಮತ್ತು ಅವನ ಅಧಿಕಾರ ವಲಯ
ಅಕ್ರಮವಾಗಿ ಪ್ರವೇಶಿಸಲು ಪ್ರಯತ್ನಿಸುವ ಎಲ್ಲಾ ಅಕ್ರಮಿಗಳನ್ನು ನಿರಾಕರಿಸಿರಿ.''

ಭಾರತ, ಆಫ್ರಿಕಾ, ಅಮೇರಿಕಾ, ಅರಬ್ ದೇಶಗಳಲ್ಲಿ ಹಾಗೂ ವಿಶ್ವದ ಎಲ್ಲೆಡೆಯು
ದೇವ ಸಂದೇಶವಾಹಕರನ್ನು ನಿಯೋಗಿಸಲಾಗಿತ್ತು. ಪ್ರವಾದಿತ್ವ ಪರಂಪರೆಯ ಕೊನೆ
ವ್ಯಕ್ತಿಯೇ ಮುಹಮ್ಮದ್(ಸ) ಪೈಗಂಬರರು. ಅವರು 1400 ವರ್ಷಗಳ ಹಿಂದೆ ಅರೇಬಿಯಾ
ಮರುಭೂಮಿಯಲ್ಲಿ ದೇವನ ಸಂದೇಶವಾಹಕರಾಗಿ ನಿಯೋಗಿಸಲ್ಪಟ್ಟರು. ಅವರು
ಸಮಾಜದಲ್ಲಿ ಸತ್ಯಸಂಧ ಹಾಗೂ ಪ್ರಾಮಾಣಿಕ ಎಂಬ ಬಿರುದಿನೊಂದಿಗೆ ಗುರುತಿಸಲ್ಪಟ್ಟಿದ್ದರು
ಮುಹಮ್ಮದ್ ಪೈಗಂಬರರು ಸೇರಿದಂತೆ ಈ ಲೋಕಕ್ಕೆ ಬಂದ ಎಲ್ಲಾ ಪ್ರವಾದಿಗಳಲ್ಲ
ವಿಶ್ವಾಸವಿರಿಸಬೇಕೆಂದು ಇಸ್ಲಾಮ್ ಆದೇಶಿಸುತ್ತದೆ.

ಆದರೊಂದಿಗೆ ಇಸ್ಲಾಮ್ ಈ ಮೂರು ಸಂಬಂಧಗಳು ಹೇಗಿರಬೇಕೆಂದು ತಿಳಿಸಿದ
ಮನುಷ್ಯ-ದೇವಸಂದೇಶವಾಹಕರ ಸಂಬಂಧ, ಮನುಷ್ಯ-ಮನುಷ್ಯರೊಳಗಿನ ಸಂಬಂಧ
ಮಾನವ ಮತ್ತು ದೇವನ ನಡುವಿನ ಸಂಬಂಧ. ದೇವ-ಮಾನವ ಸಂಬಂಧಗಳ
ಸುದೃಢವಾಗಿರಲು, ದೇವ ಸಾಮೀಪ್ಯಗಳಿಸಲು ಇಸ್ಲಾಮ್ ಆರಾಧನಾ ಕರ್ಮಗಳನ
ನಿರ್ಣಯಿಸಿದೆ. ಇನ್ನೊಂದು ವಿಧದಲ್ಲಿ ಹೇಳುವುದಾದರೆ ದೇವನು ಮಾನವನಿಗೆ ನೀಡಿರು
ಅಗಣಿತ ಅನುಗ್ರಹಗಳಿಗೆ ಆರಾಧನೆಯು ಕೃತಜ್ಞತೆಯಾಗಿದೆ. ಇಸ್ಲಾಮ್ ನಾಲ್ಕು ಆರಾಧನ
ಕರ್ಮಗಳನ್ನು ನಿಶ್ಚಯಿಸಿದೆ. ಅದರಲ್ಲಿ ಮೊದಲನೆಯದು ನಮಾಝ್ ಆಗಿದೆ. ಇದ
ಮಾನವರನ್ನು ದೇವನೊಂದಿಗೆ ಜೋಡಿಸುವ ಒಂದು ಉಪಾಧಿಯಾಗಿದೆ. ಮಾನವ ತ
ಸೃಷ್ಟಿಕರ್ತನೊಂದಿಗೆ ನಡೆಸುವ ಒಂದು ಖಾಸಗಿ ಸಂಭಾಷಣೆಯಾಗಿದೆ. ಅದು ದೇವ ಸನ್ನಿಧಿ
ಮನುಷ್ಯರ ಆತ್ಮದ ತೀರ್ಥ ಯಾತ್ರೆಯು ಹೌದು.

ವಿಶ್ವಾಸಿಗಳು ನಮಾಝ್ ಮಾಡುವುದನ್ನು ನೀವು ಗಮನಿಸಿರಬಹುದು. ಪ್ರಥಮವಾ
ಅಂಗಸ್ನಾನ ಮಾಡಲಾಗುತ್ತದೆ. ಇದರಿಂದ ಶರೀರದ ಮುಖ್ಯ ಭಾಗಗಳು ಶುದ್ಧವಾಗುವು
ರೊಂದಿಗೆ, ತಾನು ಶುದ್ಧಿಯಾಗಿದ್ದೇನೆಂದು ಸ್ವತಃ ತಿಳಿದುಕೊಳ್ಳಲು ಸಹಾಯಕ ವಾಗುತ್ತ
ಹೀಗೆ ಶುದ್ಧವಾಗಿ ಮುಸ್ಲಿಮರು ನಮಾಝ್‌ಗೆ ಪ್ರವೇಶಿಸುತ್ತಾರೆ. ಅವರು ಪಂಕ್ತಿಬದ್ಧರಾ

ನಿಲ್ಲುತ್ತಾರೆ. ಆದರೆ ವಾಸ್ತವದಲ್ಲಿ ಅವರು ನೆಲದಲ್ಲಿ ನಿಲ್ಲುವುದಲ್ಲ, ನಕ್ಷತ್ರ ಲೋಕದ ಆಚೆ ದೇವಸನ್ನಿಧಿಯಲ್ಲಿ ನಿಂತಿದ್ದೇನೆಂಬ ಪ್ರಜ್ಞೆ ಪ್ರತಿ ವಿಶ್ವಾಸಿಯಲ್ಲೂ ಇರಬೇಕು. ನಮಾಝ್‌ನ ಸಮಯದಲ್ಲಿ ಪ್ರತಿಯೊಬ್ಬ ಭಕ್ತನೂ ತನ್ನ ಮನೆ, ಸಂಬಂಧಿಕರು, ಕುಟುಂಬಿಕರು, ವ್ಯಾಪಾರ, ಕೃಷಿ, ಉದ್ಯೋಗ ಹೀಗೆ ಎಲ್ಲರಿಂದಲೂ ವಿದಾಯಕೋರಿ, ಸೃಷ್ಟಿಕರ್ತನ ಸನ್ನಿಧಿಗೆ ತೀರ್ಥಯಾತ್ರೆ ಕೈಗೊಂಡು ದೇವನೊಂದಿಗೆ ಖಾಸಗಿ ಸಂಭಾಷಣೆ ನಡೆಸುತ್ತಾನೆ. ಈ ಮೂಲಕ ಮನುಷ್ಯ ಆಧ್ಯಾತ್ಮಿಕತೆಯ ಉತ್ತುಂಗಕ್ಕೆ ತಲುಪುತ್ತಾನೆ. ಅದರೊಂದಿಗೆ ನಮಾಝ್ ಮನುಷ್ಯರಲ್ಲಿ ಎರಡು ಉತ್ತಮಗುಣಗಳನ್ನು ಬೆಳೆಸುತ್ತದೆ. ಒಂದನೆಯದು ಸಾಮೂಹಿಕ ಪ್ರಜ್ಞೆ ಮೂಡಿಸುವುದು. ಓರ್ವ ವಿಶ್ವಾಸಿ ಮರುಭೂಮಿಯಲ್ಲಿ ಒಂಟಿಯಾಗಿ ನಮಾಝ್ ಮಾಡುವಾಗಲೂ, ನಾವು ನಿನ್ನ ಆರಾಧನೆ ಮಾಡುತ್ತೇವೆ ಎಂದು ಹೇಳಬೇಕು. ಆತ ದೇವಾ, ನಾನು ನಿನ್ನ ಆರಾಧನೆಯನ್ನು ಮಾಡುತ್ತೇನೆ ಎಂದರೆ ಆತನ ನಮಾಝ್ ಸ್ವೀಕೃತವಾಗುವುದಿಲ್ಲ, 'ನಾವು' ಎಂದೇ ಹೇಳಬೇಕು. ಹಾಗಾದರೆ ಈ ನಾವು ಎಂದರೆ ಯಾರು? ಪ್ರಪಂಚದ ಸಚ್ಚಾರಿತ್ರ್ಯವಂತರಾದ ಎಲ್ಲ ವಿಶ್ವಾಸಿಗಳಿಗೂ ಈ ಮಾತು ಅನ್ವಯಿಸುತ್ತದೆ. ಪ್ರತಿದಿನ ಐದು ಬಾರಿ ನಮಾಝ್‌ನಲ್ಲಿ ''ಎಲ್ಲ ದೇವದಾಸರಿಗೂ ನೀನು ರಕ್ಷಣೆ ಹಾಗೂ ಅನುಗ್ರಹವನ್ನು ನೀಡು ಎಂದು ಎಲ್ಲರೂ ನಮಾಝಿನಲ್ಲಿ ಪ್ರಾರ್ಥಿಸಬೇಕು.'' ಇದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಮನುಷ್ಯ ಆರಂಭದಿಂದ ಲೋಕಾಂತ್ಯದವರೆಗಿನ ಎಲ್ಲಾ ಪ್ರದೇಶಗಳ ಸರ್ವ ತಲೆಮಾರುಗಳ ಸಚ್ಚರಿತರಿಗಾಗಿ ಈ ಪ್ರಾರ್ಥನೆಯಿದೆ. ಕಾಲ-ದೇಶ-ವರ್ಗ-ವರ್ಣಗಳನ್ನು ಮೀರಿದ ವಿಶ್ವಮಾನವನಾಗಿ ವಿಶ್ವಾಸಿಯನ್ನು ಬೆಳೆಸುವ ಒಂದು ಪವಿತ್ರ ಕರ್ಮವೇ ನಮಾಝ್. ಇದು ವಿಶ್ವಾಸಿಯನ್ನು ವ್ಯಕ್ತಿ ಎಂಬ ಸಂಕುಚಿತತೆಯಿಂದ ಸಾಮೂಹಿಕತೆಯೆಂಬ ಗಡಿಯಿಲ್ಲದ ಸಾಮ್ರಾಜ್ಯಕ್ಕೆ ತಲುಪಿಸುತ್ತದೆ.

ಮುಸ್ಲಿಮರು ನಮಾಝ್ ಮಾಡಲು ಒಬ್ಬ ನಾಯಕನ ಹಿಂದೆ ಒಂದೇ ದಿಕ್ಕಿಗೆ ಮುಖಮಾಡಿ ಸಾಲಾಗಿ ನಿಂತುಕೊಳ್ಳುತ್ತಾರೆ. ಇದು ಪರಸ್ಪರ ಸಮಾನತೆಯ ಭಾವನೆಯನ್ನು ಮೂಡಿಸುತ್ತದೆ. ಪ್ರಥಮವಾಗಿ ಮಸೀದಿಗೆ ತಲುಪಿದ್ದು ಸಿಪಾಯಿ ಎಂದಿಟ್ಟುಕೊಳ್ಳಿ, ನಂತರ ತಲುಪುವುದು ಜಿಲ್ಲಾಧಿಕಾರಿ, ಹಾಗಿದ್ದರೆ ಜಿಲ್ಲಾಧಿಕಾರಿ ಸಿಪಾಯಿಯ ಕಾಲಿನ ಬಳಿ ತನ್ನ ತಲೆಯಿರಿಸಬೇಕು. ಮೊದಲು ಸಹಾಯಕ ತಲುಪಿ ನಂತರ ಮಂತ್ರಿಯ ಆಗಮನವಾದರೆ ಮಂತ್ರಿಯು ತನ್ನ ಸಹಾಯಕನ ಕಾಲಿನ ಬಳಿ ತಲೆಯಿರಿಸಬೇಕಾಗುತ್ತದೆ. 'ಇವನು ನನ್ನ ಪೇದೆ, ನಾನು ತಲೆಯನ್ನು ಇವನ ಕಾಲಿನ ಪಕ್ಕ ಇರಿಸಲಾರೆ ಎಂದು ಒಬ್ಬನು ತೀರ್ಮಾನಿಸಿದರೆ ಅವನಿಗೆ ನಮಾಝ್ ಇಲ್ಲ, ರಾಜ, ಚಕ್ರವರ್ತಿ, ಬಡವ, ಶ್ರೀಮಂತ ಹೀಗೆ ಯಾರಾದರೂ ಸರಿ ಮೊದಲು ತಲುಪಿದವನ ಕಾಲಿನ ಬಳಿ ತಲೆಯಿರಿಸಬೇಕಾಗುತ್ತದೆ. ಇದು ಬೆಳೆಸುವ ಸಮಾನತೆಯ, ವಿನಯದ ಪಾಠಕ್ಕೆ ಸರಿಸಾಟಿಯಿಲ್ಲ.'

ಇಸ್ಲಾಮ್‌ನ ಎರಡನೇ ಆರಾಧನಾ ಕರ್ಮವಾದ ಉಪವಾಸದ ವಿಷಯವೂ ಅಷ್ಟೆ. ಮುಸ್ಲಿಮರು ದೀರ್ಘವಾದ ಒಂದು ತಿಂಗಳು ಬೆಳಿಗ್ಗೆಯಿಂದ ಸಂಜೆಯವರೆಗೆ ಅನ್ನಪಾನೀಯ

ವನ್ನು ತೊರೆದು ಉಪವಾಸ ಆಚರಿಸುತ್ತಾರೆ. ಇದು ದೇವನ ಆರಾಧನೆಯಾಗಿದೆ. ಆ ನಿಯಂತ್ರಣದ ಶಿಕ್ಷಣ ಹಾಗೂ ಉನ್ನತ ಸಂಸ್ಕೃತಿಯನ್ನು ಬೆಳೆಸಲು ಸಹಾಯ ಮಾಡುತ್ತ ಕಂಡದ್ದೆಲ್ಲವನ ತಿನ್ನುವ, ಕುಡಿಯುವ, ಆಸ್ವಾದಿಸುವ, ನೋಡುವ ಹಾಗೂ ಹೇಳಬೇಕೆನಿ ದ್ದನ್ನೆಲ್ಲಾ ಹೇಳುವ ಗುಣ ಪ್ರಾಣಿಗಳದ್ದಲ್ಲವೇ? ಅಥವಾ ತಮ್ಮ ಸಹಜಗುಣಗಳನ್ನು ತಮ ತೋಚಿದಂತೆ ನಿರ್ವಹಿಸುವುದು ಮೃಗೀಯತೆಯಾಗಿದೆ. ಆದರೆ ಅವುಗಳ ನಿಯಂತ್ರ ಮಾನವೀಯತೆಯಾಗಿದೆ. ಬಯಕೆಗಳಿಗೆ ಕಡಿವಾಣ ಹಾಕುವ, ಇಚ್ಛೆಗಳನ್ನು ನಿಯಂತ್ರಿಸು ವಿಕಾರ ಭಾವನೆಗಳಿಂದ ಮೇಲ್ಮೆ ಸಾಧಿಸುವ ಒಂದು ತರಬೇತಿ ಉಪವಾಸದಿಂದ ದೊರೆಯುತ್ತ ಹಸಿವು ಬಾಯಾರಿಕೆಯ ಮೂಲಕ ಸಹನೆಯನ್ನು ಕಲಿಸುವುದಲ್ಲದೆ, ದೇವ ಭಕ್ತಿಯ ಬೆಳೆಸುತ್ತದೆ. ಅಲ್ಲದೆ, ವ್ರತವು ಸಾಮಾಜಿಕ ಪ್ರಜ್ಞೆ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತ ಉಪವಾಸಿಗನು ಇತರರೊಡನೆ ಕೆಟ್ಟದಾಗಿ ಮಾತನಾಡಿದರೆ ಅವನ ಉಪವಾಸದಿಂದ ಯಾವು ಪ್ರಯೋಜನವಿಲ್ಲ.

ಪ್ರವಾದಿವರ್ಯರು ಹೇಳಿರುವರು: **''ಯಾವನಾದರೂ ಸುಳ್ಳು ಹೇಳುವುದ ಅಸಭ್ಯವಾಗಿ ವರ್ತಿಸುವುದನ್ನು ಬಿಡದೆ ಅನ್ನಪಾನೀಯಗಳನ್ನು ತೊರೆದರೆ ಆದರಿಂದ ಅವನಿ ಯಾವುದೇ ಪ್ರಯೋಜನವಿಲ್ಲ.''**

ಮಾನವ ಸಂಬಂಧಗಳಲ್ಲಿ ಬಿರುಕು ಉಂಟು ಮಾಡಿದರೆ ಆರಾಧನಾ ಕರ್ಮಗಳು ವ್ಯಥ ವಾಗಿ ಬಿಡುತ್ತವೆ. ಅಲ್ಲದೆ, ಉಪವಾಸ ಕಲಿಸಿಕೊಡುವ ಸಮಾನತೆ ಹಾಗೂ ವಿಶಾಲತೆಯೂ ಗ ನಾರ್ಹ. ವಿಶ್ವದ ಎಲ್ಲೆಡೆಯ ಮುಸ್ಲಿಮರು ಏಕ ಕಾಲದಲ್ಲಿ ಆಹಾರ ಪಾನೀಯಗಳನ್ನು ತೊರೆ ಉಪವಾಸ ಆಚರಿಸುತ್ತಾರೆ. ಇದರಲ್ಲಿ ಗಂಡು-ಹೆಣ್ಣು, ಶ್ರೀಮಂತ-ಬಡವ ಎಂಬ ವ್ಯತ್ಯಾಸವಿ

ಝಕಾತ್‌ನ ವಿಷಯವೂ ಅಷ್ಟೆ. ಉಪವಾಸವು ಮಾನವನ ದೇಹವು ತನ್ನದಲ್ಲ, ಅ ದೇವನಿಗೆಸೇರಿದ್ದು ಅವನಆದೇಶಗಳನ್ನುಅನುಸರಿಸಿಬಾಳಬೇಕೆಂದುಮನವರಿಕೆಮಾಡಿಸುತ್ತ ಅದೇ ರೀತಿ ಸಂಪತ್ತು ನಮ್ಮದಲ್ಲ, ದೇವನದ್ದು, ಅವನ ಆದೇಶದಂತೆ ವಿನಿಯೋಗಿಸಬೇಕೆಂ ಸತ್ಯವನ್ನು ತಿಳಿಸಿಕೊಡುವ ಆರಾಧನೆಯೇ ಝಕಾತ್. ವಿಶ್ವಾಸಿಗಳು ತಮ್ಮ ಸಂಪತ್ತಿನಿಂದ ನಿ ಪ್ರಮಾಣವನ್ನು ಕಡ್ಡಾಯವಾಗಿ ದಾನ ಮಾಡಬೇಕು. ಇದು ದೇವನಿಗೆ ಮಾಡುವ ಶ್ರೇ ಆರಾಧನೆಯಾಗಿದೆ. ಆದರೆ ಇದರ ಪ್ರಯೋಜನ ಪಡೆಯುವವರಾರು? ಹಣವನ್ನು ಶೇಖರಿ ದೇವನ ಬಳಿಗೆ ಕಳಿಸುವುದು ಅಸಾಧ್ಯದ ಮಾತು. ಆದ್ದರಿಂದ ಈ ಭೂಮಿಯಲ್ಲಿ ಕಷ್ಟಪಡು ದರಿದ್ರರು, ಬಡವರು, ಅಬಲೆಯರು, ನಿರಾಶ್ರಿತರು ಹಾಗೂ ಸಾಲದಿಂದ ಕಂಗೆಟ್ಟಿರು ಮನುಷ್ಯರಿಗೆ ಆ ಹಣವನ್ನು ನೀಡಬೇಕು. ಈ ಆರಾಧನೆಯ ಫಲಾನುಭವಿಗಳು ಸಮಾಜ ಕೆಳಸ್ತರದ ವ್ಯಕ್ತಿಗಳಾಗಿದ್ದಾರೆ.

ಇಸ್ಲಾಮ್‌ನ ಇನ್ನೊಂದು ಆರಾಧಾನಾ ಕರ್ಮ ಹಜ್ಜ್. ಲಕ್ಷಾಂತರ ರೂಪಾಂ ಖರ್ಚುಮಾಡಿ ನಿರ್ವಹಿಸುವಂತಹ ಆರಾಧನೆ. ಈ ಆರಾಧನೆ ಸ್ವೀಕಾರಾರ್ಹವಾಗಬೇಕಾದ

ಹಜ್ಜ್‌ನ ಸಮಯದಲ್ಲಿ ಇತರರೊಡನೆ ಜಗಳವಾಡಬಾರದು, ತರ್ಕ-ವಾಗ್ವಾದಗಳಲ್ಲಿ ಸಿಲುಕಿರಬಾರದು. **''ನಿಶ್ಚಿತ ತಿಂಗಳಿನಲ್ಲಿ ಹಜ್ಜ್‌ನ ಸಂಕಲ್ಪ ಮಾಡುವಾತನು ಹಜ್ಜ್‌ನ ಕಾಲಾವಧಿಯಲ್ಲಿ ಯಾವುದೇ ಕಾಮಾಪೇಕ್ಷೆಯ, ದುರಾಚಾರದ ಮತ್ತು ಕಲಹದ ಕಾರ್ಯಗಳು ತನ್ನಿಂದ ಸಂಭವಿಸದಂತೆ ಜಾಗರೂಕನಾಗಿರಬೇಕು.'' ( ಪವಿತ್ರ ಕುರ್‌ಆನ್ 2:197)**

ಮಾನವ ಸಂಬಂಧಗಳನ್ನು ಭದ್ರಗೊಳಿಸದ ಭಕ್ತರ ಆರಾಧನಾ ಕರ್ಮಗಳು ಪ್ರತಿಫಲ ಶೂನ್ಯವೆಂದು ಇಸ್ಲಾಮ್ ಕಲಿಸುತ್ತದೆ. ಅಲ್ಲದೆ ಹಜ್ಜ್ ಸರಿಸಾಟಿಯಿಲ್ಲದಂತಹ ಸಮಾನತೆಯ ಸಂದೇಶವನ್ನು ಸಾರುತ್ತದೆ.

ವಿಶ್ವದ ವಿವಿಧ ಭಾಗಗಳಿಂದ ಬಂದು ಸೇರುವ, ವಿವಿಧ ಭಾಷೆ, ವೇಷ, ವಿಭಿನ್ನ ಸಂಸ್ಕೃತಿಯ ಜನರು ತಮ್ಮ ಎಲ್ಲಾ ವೇಷಗಳನ್ನು ಕಳಚಿ, ಒಂದೇ ರೀತಿಯ ವಸ್ತ್ರಗಳನ್ನು ಧರಿಸುತ್ತಾರೆ. ಒಂದೇ ಭಾಷೆಯ ಒಂದೇ ಮಂತ್ರ, ಒಂದೇ ಘೋಷಣೆಯನ್ನು ಕೂಗುತ್ತಾರೆ. ಆರಾಧನೆಯ ರೀತಿ ಒಂದೇ, ಆರಾಧನೆಯೂ ಒಂದೇ. ವರ್ಗ, ವರ್ಣ-ದೇಶ-ಭಾಷೆಗಳ ಸರಹದ್ದನ್ನು ಮೀರಿ ಏಕತೆಯ ಸಂದೇಶವನ್ನು ಸಾರುತ್ತದೆ. ಹಜ್ಜ್ ಕರ್ಮವು ಮೂರು ಮಹಾನ್ ವ್ಯಕ್ತಿಗಳ ಅವಿಸ್ಮರಣೀಯ ಜೀವನದ ಅನುಭವಗಳಿಗೆ ಸಂಬಂಧಿಸಿದೆ. ಪ್ರವಾದಿ ಇಬ್ರಾಹಿಮ್(ಅ), ಅವರ ಮಗ ಇಸ್ಮಾಯೀಲ್(ಅ) ಮತ್ತು ಇಬ್ರಾಹೀಮರ ಪತ್ನಿ ಹಾಜಿರಾ(ಅ).

ಇಲ್ಲಿನಾವು ಇಬ್ರಾಹಿಮರನ್ನು ಕುಲೀನ ವಂಶದ ವ್ಯಕ್ತಿ ಎಂದು ಹೇಳಬಹುದು. 'ಮೇಲು' ವರ್ಗದ ಕುಡಿ. ಆದರೆ ಹಾಜಿರಾ! ಅವರು ಸಮಕಾಲೀನ ಸಮಾಜದ ದೃಷ್ಟಿಯಲ್ಲಿ ನಾಲ್ಕು ದೌರ್ಬಲ್ಯಗಳ ಪ್ರತೀಕವಾಗಿದ್ದರು. ಅವರೋರ್ವ ಗುಲಾಮ ಹೆಣ್ಣಾಗಿದ್ದರು. ಗುಲಾಮರು ಸಮಾಜದಲ್ಲಿ ಎಂದೆಂದೂ ಕಡೆಗಣಿಸಲ್ಪಡುವವರು ಎಂಬುದು ನಮಗೆಲ್ಲಾ ತಿಳಿದ ವಿಚಾರ. ಅವರಿಗೆ ನಗುವ ಅಥವಾ ಅಳುವ ಸ್ವಾತಂತ್ರ್ಯವಿಲ್ಲ, ಸ್ವಂತ ತೀರ್ಮಾನ ತೆಗೆದುಕೊಳ್ಳುವ ಸ್ವಾತಂತ್ರ್ಯವಿಲ್ಲ, ಅವರ ಅಸ್ತಿತ್ವವೇ ಪ್ರಶ್ನಾರ್ಥಕವಾಗಿದೆ. ಅವರು ಯಜಮಾನನ ತುಟಿ ಹಾಗೂ ಬೆರಳಿನ ಚಲನೆಗೆ ಸ್ಪಂದಿಸಬೇಕಾದವರು. ಎಂತಹ ಕಾಲದಲ್ಲೂ ಕಠಿಣ ದೌರ್ಜನ್ಯ, ಅಕ್ರಮ ಅನ್ಯಾಯಗಳಿಗೆ ಗುರಿಯಾಗಬೇಕಾದ ವರ್ಗದ ಪ್ರತಿನಿಧಿಯಾಗಿದ್ದರು.

ಎರಡನೇಯದಾಗಿ ಹಾಜಿರಾ ಕರಿಬಣ್ಣದವರಾಗಿದ್ದರು. ಆಧುನಿಕ ಜಗತ್ತಿನಲ್ಲೂ ಕೂಡಾ ಕರಿಯರನ್ನು ಕಡೆಗಣಿಸುತ್ತಿರುವುದನ್ನು ನಾವು ಕಾಣುತ್ತೇವೆ. ಹೀಗೆ ಎಲ್ಲರಿಂದಲೂ ತುಳಿಯಲ್ಪಟ್ಟ ಒವ ವಿಭಾಗದ ಪ್ರತಿನಿಧಿಯಾಗಿದ್ದರು.

ಮೂರನೇಯದಾಗಿ ಹಾಜಿರಾ ವಿದೇಶಿಯಾಗಿದ್ದರು. 'ವಿದೇಶಿ' ಎಂಬ ಮೂರಕ್ಷರದ ನವು ಪಡುವ ಸಮಸ್ಯೆಗಳ ಕುರಿತು, ಪ್ರಪಂಚವೇ ಪುಟ್ಟ ಗ್ರಾಮವಾಗಿ ಮಾರ್ಪಟ್ಟಿರುವ ಈ ಕಾಲದಲ್ಲಿ ಯಾರಿಗೂ ಹೇಳಿಕೊಡಬೇಕೆಂದಿಲ್ಲ. ನಾಲ್ಕನೇಯದಾಗಿ, ಹಾಜಿರಾ ಹೆಣ್ಣಾಗಿದ್ದರು. ಹೆಣ್ಣು ಎಂದೆಂದೂ ಎಲ್ಲೆಡೆಯೂ ಶೋಷಣೆಗೆ ಒಳಗಾಗಿದ್ದಾಳೆ. ಹೀಗೆ ಸಮಾಜದ ರೂಢಿಯಂತೆ ನಾಲ್ಕು ದೌರ್ಬಲ್ಯಗಳ ಪ್ರತೀಕವಾಗಿದ್ದರು ಹಾಜಿರಾ. ಅವರು ಸಫಾ ಮತ್ತು ಮರ್ವಾ ಎಂಬ

ಎರಡು ಬೆಟ್ಟವನ್ನು ಹತ್ತಿನಿಂತರು. ದೇವನ ಆರಾಧನೆಗೋ, ಉಪಾಸನೆಗೋ, ಕೀರ್ತನೆಗೊ ಪ್ರಾರ್ಥನೆಗೋ ಅಲ್ಲ, ಬಾಯಾರಿ ಬಳಲಿ ಬೆಂಡಾಗಿದ್ದ ಹಸುಗೂಸಿಗೆ ನೀರಿಗಾಗಿ, ಆ ಎರಡ ಬೆಟ್ಟಗಳ ನಡುವೆ ಓಡಾಡಿದ್ದರು. ನಂತರ ಹಾಜಿರಾರ ಪಾದಸ್ಪರ್ಶವಾಗಿದ್ದ ಆ ಬೆಟ್ಟಗಳು ದೇವ ಚಿಹ್ನೆಗಳಾಗಿ ಬದಲಾಯಿತು.

'ನಿಶ್ಚಯವಾಗಿಯೂ ಸಫಾ ಮರ್ವಾಗಳು ಅಲ್ಲಾಹನ ಸಂಕೇತಗಳಲ್ಲಾಗಿರುತ್ತದೆ (ಪವಿತ್ರ ಕುರ್‌ಆನ್ 2:158) ಹಾಜಿರಾರ, ಪಾದಸ್ಪರ್ಶದಿಂದ ಆ ಬೆಟ್ಟಗಳು ಲಕ್ಷಾಂತರ ಹ ಯಾತ್ರಿಕರು ನಡೆದಾಡಬೇಕಾದ ಪವಿತ್ರಸ್ಥಳಗಳಾದವು. ಅಲ್ಲಾಹನ ಚಿಹ್ನೆಗಳಾಗಿ ಬದಲಾದ ಅಂದು ಹಾಜಿರಾ ಎಂಬ ಹೆಣ್ಣುಮಗಳು ನಡೆದಾಡಿದ ಸ್ಥಳದಲ್ಲಿ ಹಜ್ಜ್ ವೇಳೆಯ ಪ್ರತಿಯೋರ್ವ ಮುಸ್ಲಿಮನೂ ನಡೆಯಬೇಕು. ಆತ ದೊಡ್ಡ ಚಕ್ರವರ್ತಿಯೇ ಆಗಿದ್ದ ನಾಲ್ಕು ಸಾವಿರ ವರ್ಷಗಳ ಹಿಂದೆ ಓರ್ವ ಕರಿಯ ಗುಲಾಮ ಹೆಣ್ಣು ನಡೆದ ಸ್ಥಳದಲ್ಲಿ ನಡೆದ ಬೆಟ್ಟವನ್ನು ಹತ್ತಿ ನಿಂತಾಗ ಅದು ಅವರಲ್ಲಿ ಸಮಾನತೆಯ, ವಿನಯಶೀಲತೆಯ ಭಾವನೆಯ ಬೆಳೆಸುತ್ತದೆ. ಹೀಗೆ ಆರಾಧನಾ ಕರ್ಮಗಳು ಸಾಮೂಹಿಕ ಪ್ರಜ್ಞೆಯೊಂದಿಗೆ ಸಮಾನತೆಯ ಸಜೀವಗೊಳಿಸುತ್ತದೆ. ಸೃಷ್ಟಿಕರ್ತನಿಗೆ ಮನುಷ್ಯನು ನಿಕಟನಾಗುತ್ತಾನೆ. ಮಣ್ಣಿನಲ್ಲಿ ಕಾಲೂರಿ ಮನುಷ್ಯನನ್ನು ಭೂಮಿಯ ಒಡೆಯನೊಂದಿಗೆ ಜೋಡಿಸುತ್ತದೆ. ದೇವ ಸನ್ನಿಧಿಗೆ ಆತ್ಮ ತೀರ್ಥಯಾತ್ರೆ ನಡೆಸುವ ಅವಕಾಶ ದೊರೆಯುತ್ತದೆ.

ನಮಾಝ್ ಎಂಬ ಅತಿ ಶ್ರೇಷ್ಠ ಆರಾಧನೆಯಲ್ಲಿ ಅತಿ ಹೆಚ್ಚು ಬಾರಿ 'ಅಲ್ಲಾಹು ಅಕ್ಬ ಎಂಬ ಪದವನ್ನು ಉಚ್ಚರಿಸಲಾಗುತ್ತದೆ. ಅದರ ಅರ್ಥ ಅರಿಯದ ಕಾರಣ ಅನೇಕ ಜನರು ತ ಕಲ್ಪನೆ ಹೊಂದಿದ್ದಾರೆ. 'ಅಲ್ಲಾಹನು ಎಲ್ಲರಿಗಿಂತಲೂ ದೊಡ್ಡವನು', ಎಂಬುದು ಅದರ ಶಬ್ದಾರ್ಥ ಅಥವಾ ನಾನು ಸಣ್ಣವನು. ನನ್ನ ಆಶೆ ಅಭಿಲಾಷೆಗಳು ದೇವನ ಹಾಗೂ ಆತನ ಕಾನೂ ಮುಂದೆ ಏನೂ ಇಲ್ಲ, ಪ್ರಪಂಚದ ಎಲ್ಲಾ ವಸ್ತುಗಳು ಅವನ ಮುಂದೆ ಅತ್ಯಂತ ಕ್ಷುಲ್ಲಕವಾದುದ ದೇವನು ಮಹಾನನೆಂದೂ, ನಾನು ಅವನೊಂದಿಗೆ ಸಂಬಂಧ ಬೆಳೆಸುತ್ತೇನೆಂದೂ ದಿನಕ್ಕೆ ಬಾರಿಯ ನಮಾಝ್‌ನಲ್ಲಿ ಮುಸ್ಲಿಮರು ಪುನರಾವರ್ತಿಸುತ್ತಿರುತ್ತಾರೆ.

ವಿಶ್ವದ ಎಲ್ಲಾ ಕೆಡುಕುಗಳಿಗೆ ಮೂಲಕಾರಣ ಅಹಂಕಾರವಾಗಿದೆ. ನಾನೇ ದೊಡ್ಡವ ಎಲ್ಲಾ ವಿಷಯಗಳ ಕುರಿತು ತೀರ್ಮಾನಿಸುವವನು ನಾನು ಎಂಬ ಭಾವನೆಯು ಪಾಪಕೃತ್ಯಗ ಮೂಲಕಾರಣವಾಗಿದೆ. ಒಂದು ದಿನಕ್ಕೆ ಸುಮಾರು 94 ಬಾರಿ 'ಅಲ್ಲಾಹು ಅಕ್ಬರ್' ಎಂ ನಮಾಝ್‌ನಲ್ಲಿ ಹೇಳಲಾಗುತ್ತದೆ. ಇದರಿಂದ ಮನುಷ್ಯನು ವಿನಯಶೀಲನಾಗಿ ಬದಲಾಗುತ್ ಅಥವಾ ಬದಲಾಗಬೇಕು.

ಒಂದು ವಿಷಯವನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ. ಮನುಷ್ಯನೊಂದಿಗೆ ಸಂಬ ಕೆಟ್ಟರೆ ಎಲ್ಲಾ ಆರಾಧನಾ ಕರ್ಮಗಳು ನಿಷ್ಫಲವಾಗುತ್ತದೆ. ಒಮ್ಮೆ ಪ್ರವಾದಿಯವರು ಅನುಯಾಯಿಗಳೊಡನೆ ಕೇಳುತ್ತಾರೆ; ''ದಿವಾಳಿಕೋರ ಯಾರೆಂದು ನಿಮಗೆ ತಿಳಿದಿದೆಯೆ

ಿವರು ಹೇಳಿದರು: 'ನಮ್ಮಲ್ಲಿ ದಿನಾರ್ ಅಥವಾ ದಿರ್ಹಮ್ ಇಲ್ಲದವರು ದಿವಾಳಿಗಳು.' ಆಗ ಿವರಿಗೆ ತಿಳಿಸಲಾಯಿತು 'ನನ್ನ ಸಮುದಾಯದ ದಿವಾಳಿಯು ಅಂತ್ಯದಿನದಲ್ಲಿ ತಾನು ಮಾಡಿದ ಮಾಝ್, ಉಪವಾಸ ವ್ರತ ಅಥವಾ ಝಕಾತ್‌ನೊಂದಿಗೆ ಬರುವ ವ್ಯಕ್ತಿಯಾಗಿದ್ದಾನೆ; ಆದರೆ ಿವನು ಒಬ್ಬನನ್ನು ಕೆಟ್ಟದಾಗಿ ಬೈದಿದ್ದಾನೆ, ಇನ್ನೊಬ್ಬರ ಮೇಲೆ ಅಪವಾದ ಹೊರಿಸಿದ್ದಾನೆ. ನ್ನೋರ್ವನ ಹಣ ಅಪಹರಿಸಿದ್ದಾನೆ. ಮತ್ತೊಬ್ಬರ ರಕ್ತ ಹರಿಸಿದ್ದಾನೆ. ಅಂತಹ ವ್ಯಕ್ತಿಯ ತ್ಕರ್ಮಗಳನ್ನು ಮರ್ದಿತರಿಗೆ ನೀಡಲಾಗುತ್ತದೆ. ಆದರೆ ಈತನ ದುಷ್ಕರ್ಮಗಳ ಪಟ್ಟಿ ಮುಗಿಯುವ ಮೊದಲೇ ಆತನ ಸತ್ಕರ್ಮಗಳು ಮುಗಿದುಹೋಗುತ್ತದೆ. ಆಗ ಮರ್ದಿತರ ಪ್ಪುಗಳನ್ನು ಈ ವ್ಯಕ್ತಿಗೆ ನೀಡಲಾಗುತ್ತದೆ. ಹೀಗೆ ಆತ ನರಕಕ್ಕೆ ಬೀಳುತ್ತಾನೆ.'' (ಮುಸ್ಲಿಮ್)

ಇದು ಹೆಚ್ಚಿನ ವಿವರಣೆಯು ಅಗತ್ಯವಿಲ್ಲದಷ್ಟು ಸ್ಪಷ್ಟವಾಗಿದೆ. ಆರಾಧನೆಗಳ ಸತ್ಫಲಗಳು ಡ ಸಹಜೀವಿಗಳೊಂದಿಗೆ ಅನ್ಯಾಯವೆಸಗಿದವನಿಗೆ ಆಸ್ವಾದಿಸಲು ಸಾಧ್ಯವಿಲ್ಲ, ಮಾತ್ರವಲ್ಲ ನ್ನಿಂದ ದ್ರೋಹಕ್ಕೊಳಗಾದವರ ತಪ್ಪುಗಳನ್ನು ಹೊರಬೇಕಾಗುತ್ತದೆ.

ದೇವ ಧರ್ಮವು ಮಾನವೀಯ ಸಂಬಂಧಗಳಿಗೆ ನೀಡುವ ಪ್ರಾಧಾನ್ಯತೆಯನ್ನು ಇದು ಸ್ಪಪಡಿಸುತ್ತದೆ. ಅದು ಮನುಷ್ಯರನ್ನು ಬಹಳವಾಗಿ ಗೌರವಿಸುತ್ತದೆ. ಇಸ್ಲಾಮಿನ ಅತ್ಯಂತ ೇಷ್ಠವಾದ ನಮಾಝ್ ಮಾಡಿಸಲು ಸಾವಿರಾರು ಜನರಿಗೆ ಇಮಾಮ್ ಆಗಿ ನಿಂತಿದ್ದರೂ, ಂದು ಪುಟ್ಟ ಮಗುವಿನ ಅಳು ಕೇಳಿದರೆ ನಮಾಝ್ ದೀರ್ಘಗೊಳಿಸಬಾರದೆಂದು ಪ್ರವಾದಿ(ಸ) ದೇಶಿಸಿದ್ದಾರೆ. ಆ ಮಗು ಅತ್ತು ಅತ್ತು ಸತ್ತುಬಿಡುವುದೋ ಎಂಬ ಭಯ ಇದಕ್ಕೆ ಕಾರಣವಲ್ಲ, ದಲಾಗಿ ಆ ಮಗುವಿನ ತಾಯಿಯ ಮನಸ್ಸು ಹೇಗೆ ದುಃಖಿಸಬಹುದು ಎಂಬುದೇ ಮೂಲ ರಣವಾಗಿದೆ. ಒಂದು ಮಾತೃ ಹೃದಯದ ನೋವಿಗೆ ಧರ್ಮವು ನೀಡುವ ಪ್ರಾಧಾನ್ಯತೆಯನ್ನು ದು ಎತ್ತಿ ತೋರಿಸುತ್ತದೆ.

ಮರಣಾನಂತರ ಪರಲೋಕದಲ್ಲಿ ಮಾನವನು ವಿಚಾರಣೆಗೊಳಪಡುವಾಗ ದೇವನು ಾನವನ ಸ್ಥಾನದಲ್ಲಿ ತನ್ನನ್ನು ಕಲ್ಪಿಸಿ, ಮಾನವರೊಂದಿಗೆ ಮಾಡಿದ ದ್ರೋಹವನ್ನು ತನ್ನೊಂದಿಗೆ ಾಡಿದ ಅಕ್ರಮವೆಂದು ಗುರುತಿಸುತ್ತಾನೆಂದು ಧರ್ಮವು ಕಲಿಸುತ್ತದೆ. ಅಂದು ಅಲ್ಲಾಹನು ಃಳುತ್ತಾನೆ: 'ಹೇ ಮನುಷ್ಯಾ! ನಾನು ರೋಗಿಯಾಗಿದ್ದಾಗ ನೀನು ನನ್ನನ್ನು ಸಂದರ್ಶಿಸಲಿಲ್ಲ, ಗ ಮನುಷ್ಯನು ಹೇಳುತ್ತಾನೆ 'ನಾನು ನಿನ್ನನ್ನು ಭೇಟಿಯಾಗುವುದೆ!? ಆಗ ಅಲ್ಲಾಹನು ನ್ನ ಇಂತಿಂತಹ ದಾಸ ರೋಗಿಯಾದದ್ದು ನಿನಗೆ ತಿಳಿದಿರಲಿಲ್ಲವೆ!? ಆದರು ನೀನು ಅವನನ್ನು ೀಡಲು ಹೋಗಲಿಲ್ಲ, ನೀನು ಅವನನ್ನು ಸಂದರ್ಶಿಸಿದ್ದರೆ ಅಲ್ಲಿ ನನ್ನನ್ನು ಕಾಣುತ್ತಿದ್ದೆ ಎಂದು ಗೆ ತಿಳಿದಿರಲಿಲ್ಲವೇ!? ಎನ್ನುತ್ತಾನೆ. ಹೇ, ಮನುಷ್ಯಾ! ನಾನು ನಿನ್ನೊಡನೆ ಆಹಾರ ಕೇಳಿದಾಗ ನು ನೀಡಲಿಲ್ಲ, ಆಗ ಮನುಷ್ಯ ಹೇಳುತ್ತಾನೆ: 'ನೀನು ಪ್ರಪಂಚದ ಸೃಷ್ಟಿಕರ್ತನಲ್ಲವೆ!? ನು ನಿನಗೆ ಹೇಗೆ ಆಹಾರ ನೀಡಲಿ?' ಆಗ ಅಲ್ಲಾಹನು 'ನನ್ನ ಇಂತಿಂತಹ ದಾಸ ಹಸಿವಿನಿಂದ ಾರ ಕೇಳಿದಾಗ ನೀನು ಕೊಡಲಿಲ್ಲ, ನೀನು ಅವನಿಗೆ ಆಹಾರ ನೀಡುತ್ತಿದ್ದರೆ ಅದು ನನ್ನ ಬಳಿ

ಕಾಣುತ್ತಿತ್ತೆಂದು ಅರಿವಿರಲಿಲ್ಲವೇ!? ಮನುಷ್ಯಾ! ನಾನು ನಿನ್ನೊಡನೆ ನೀರು ಕೇಳಿದೆ. ಆದರೆ ನೀನು ನನಗೆ ನೀರು ನೀಡಲಿಲ್ಲ.' ಆತ ಹೇಳುತ್ತಾನೆ 'ನೀನು ಸರ್ವಲೋಕಗಳ ಪ್ರಭುವಾಗಿರುತ್ತಿ. ನಾನು ನಿನಗೆ ನೀರು ಕೊಡುವುದು ಹೇಗೆ!? ಆಗ ಅಲ್ಲಾಹನು ಹೇಳುತ್ತಾನೆ 'ನನ್ನ ಇಂತಿಂತಹ ದಾಸ ನಿನ್ನೊಂದಿಗೆ ನೀರು ಕೇಳಿದಾಗ ನೀನು ನೀರು ಕೊಡಲಿಲ್ಲ, ನೀನು ಅವನಿಗೆ ನೀರು ನೀಡಿದ್ದರೆ ಅದನ್ನು ಈಗ ನನ್ನ ಬಳಿ ಕಾಣುತ್ತಿದ್ದಿಯೆಂದು ನಿನಗೆ ತಿಳಿದಿಲ್ಲವೆ.' (ಬುಖಾರಿ)

ತಂದೆ, ತಾಯಿ, ಪತ್ನಿ, ಮಕ್ಕಳು, ನೆರೆಯವರು, ನಿರ್ಗತಿಕರು, ಅನಾಥರು, ಆಡಳಿತಗಾರರು, ಪ್ರಜೆಗಳು ಹೀಗೆ ಸಮಾಜದ ಎಲ್ಲಾ ಸ್ತರಗಳಲ್ಲಿರುವವರೊಡನೆ ಹೇಗೆ ಸಂಬಂಧವಿರಿಸಬೇಕೆಂದು ಧರ್ಮವು ನಮಗೆ ಕಲಿಸುತ್ತದೆ.

ವೃದ್ಧಾಪ್ಯದಿಂದ ಕಷ್ಟಪಡುವ ಹೆತ್ತವರಿಗೆ ನೋವುಂಟುಮಾಡುವ ಒಂದಕ್ಷರವನ್ನು ಉಸುರಬಾರದೆಂದು ಧರ್ಮವು ಹೇಳುತ್ತದೆ. **'ನಿಮ್ಮ ಪ್ರಭು ಹೇಳುತ್ತಾನೆ: ನೀವು ಕೇವಲ ಅವನೊಬ್ಬನ ಹೊರತು ಇನ್ನ್ಯಾರ ದಾಸ್ಯಾರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ಣವಾಗಿ ಮಾತನಾಡಿರಿ. ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. 'ಓ ನನ್ನ ಪ್ರಭೂ! ಇವರು ನನ್ನ ಚಿಕ್ಕಂದಿನಲ್ಲಿ ದಯಾ ವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆ ತೋರು' ಎಂದು ಪ್ರಾರ್ಥಿಸಿರಿ.'**

(ಪವಿತ್ರ ಕುರ್‌ಆನ್ 17:23-24

ಮಾತಾಪಿತರ ಪ್ರೀತಿಗಳಿಸಿದವರಿಗೆ ಮಾತ್ರ ದೇವನ ಪ್ರೀತಿಯೂ ದೊರೆಯುತ್ತದೆ. ಅವರ ಕೋಪ ದೇವಕೋಪಕ್ಕೆ ಗುರಿಯಾಗಿಸುತ್ತದೆಂದು ಇಸ್ಲಾಮ್ ಎಚ್ಚರಿಸಿದೆ. ನೆರೆಕರೆಯವರು ಮತ್ತು ಅತಿಥಿಗಳನ್ನು ಸತ್ಕರಿಸದವರು ಮುಸ್ಲಿಮರಲ್ಲ ಎಂದು ಘೋಷಿಸಿದ ಇಸ್ಲಾಮ್, ಅವರೊಂದಿಗಿನ ಹಕ್ಕು ಹಾಗೂ ಕರ್ತವ್ಯಗಳನ್ನು ಬಹಳ ವಿವರವಾಗಿ ತಿಳಿಸಿದೆ.

ಗುಲಾಮರ ಬಿಡುಗಡೆ, ಅಸಹಾಯಕರಿಗೆ ಸಾಂತ್ವನ, ಅಭಯಾರ್ಥಿಗಳಿಗೆ ಅಭಯ ಅನಾಥರೊಡನೆ ಪ್ರೀತಿ, ನಿರ್ಗತಿಕರಲ್ಲಿ ಅನುಕಂಪ, ಕಷ್ಟದಲ್ಲಿರುವವರಿಗೆ ಸಹಾಯ ಮರ್ದಿತರ ರಕ್ಷಣೆ ಇವೆಲ್ಲಾ ಇಸ್ಲಾಮೀ ವ್ಯವಸ್ಥೆಯಂತೆ ಮುಸ್ಲಿಮರ ಕಡ್ಡಾಯ ಕರ್ತವ್ಯವಾಗಿದೆ ಆರಾಧನೆಗಳಂತೆ ಇವು ಅತ್ಯಂತ ಉತ್ಕೃಷ್ಟ ಕರ್ಮಗಳಾಗಿವೆ. ಅಲ್ಲಾಹನು ಹೇಳುತ್ತಾನೆ: **'ನೀವು ಕಂಡಿರಾ, ಪರಲೋಕದ ಕರ್ಮಫಲಗಳನ್ನು ನಿರಾಕರಿಸುವವನನ್ನು, ಅವನೇ ತಾನೇ ಅನಾಥನನ್ನು ದೂರ ದಬ್ಬುವವನು ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು! ಮತ್ತು ವಿನಾಶ ಕಾದಿದೆ ಆ ನಮಾಝ್ ನಿರ್ವಹಿಸುವವರಿಗೆ. ಅವರು ತಮ್ಮ ನಮಾಝ್‌ನ ಬಗ್ಗೆ ಅನಾಸ್ಥೆ ತೋರುತ್ತಾರೆ. ಅವರು ತೋರಿಕೆಯ ಕೆಲಸ ಮಾಡುತ್ತಾರೆ ಮತ್ತು ಜನರಿಗೆ ಸಾಮಾನ್ಯ ಅವಶ್ಯ ವಸ್ತುಗಳನ್ನು ಕೊಡುವುದಕ್ಕೂ ಹಿಂಜರಿಯುತ್ತಾರೆ' (ಪವಿತ್ರ ಕುರ್‌ಆನ್ 107: 1-7)**

ಸಾಮಾನ್ಯವಾಗಿ ದೇವನನ್ನು ನಿರಾಕರಿಸುವವನನ್ನು, ಧರ್ಮದ ಕುರಿತು ಪ್ರಶ್ನಿಸುವವನನ್ನು ಧರ್ಮನಿಷೇಧಿ ಎನ್ನಲಾಗುತ್ತದೆ. ಆದರೆ ಇಲ್ಲಿ ಧರ್ಮದ ಬಗ್ಗೆ ಒಂದು ಹೊಸ ವ್ಯಾಖ್ಯಾನವಿದೆ. ಪವಿತ್ರ ಕುರ್‌ಆನ್ ಹೇಳುವಂತೆ, ಧರ್ಮನಿಷೇಧಿಯು ಅನಾಥನನ್ನು ಕಡೆಗಣಿಸುತ್ತಾನೆ. ನಿರ್ಗತಿಕರಿಗೆ ಆಹಾರ ನೀಡಲು ಪ್ರೇರೇಪಿಸುವುದಿಲ್ಲ, ನಮಾಝ್ ಮಾಡುತ್ತಾನಾದರೂ ಉದಾಸೀನನಾಗಿ ಹಾಗೂ ಜನರಿಗೆ ತೋರಿಸಲು ಮಾಡುತ್ತಾನೆ. ಅಂತಹ ನಮಾಝಿಗೆ ಪ್ರತಿಫಲ ವಿಲ್ಲ, ಸಣ್ಣಪುಟ್ಟ ಉಪಕಾರ ಮಾಡಲಿಕ್ಕೂ ಪ್ರೇರಣೆ ನೀಡುವುದಿಲ್ಲ, ದೇವನೊಂದಿಗೆ ಸಂಬಂಧ ಯಾವ ರೀತಿ ಸುದೃಢ, ಸುಶಕ್ತವಾಗಿರಬೇಕೋ ಅದೇ ರೀತಿ ಮನುಷ್ಯ-ಮನುಷ್ಯರ ನಡುವಿನ ಸಂಬಂಧವೂ ಸ್ನೇಹ-ಕರುಣೆ-ವಾತ್ಸಲ್ಯದಿಂದ ಕೂಡಿರಬೇಕೆಂದು ಇಸ್ಲಾಮ್ ಕಲಿಸುತ್ತದೆ.

ಅದೇ ರೀತಿ ಮಾನವ ಮತ್ತು ಪ್ರಪಂಚದ ನಡುವಿನ ಸಂಬಂಧವೂ ಉತ್ತಮವಾಗಿರಬೇಕು. ಒಂದು ಬೆಕ್ಕನ್ನು ಕಟ್ಟಿಹಾಕಿ, ಆಹಾರ ನೀಡದೆ ಸಾಯಿಸಿದ ಕಾರಣದಿಂದ ಓರ್ವ ಹೆಣ್ಣು ನರಕ ಶಿಕ್ಷೆಗೆ ಅರ್ಹಳಾದಳು. ಬಾಯಾರಿ ಬೆಂಡಾದ ನಾಯಿಗೆ ನೀರು ನೀಡಿದ ವ್ಯಕ್ತಿ ಸ್ವರ್ಗ ಪ್ರವೇಶಿಸಿದ ಎಂಬ ಪ್ರವಾದಿ ವಚನಗಳಿವೆ. ಈ ಪ್ರಪಂಚದ ಸರ್ವ ಸೃಷ್ಟಿಗಳೊಂದಿಗೆ ನಾವು ಔದಾರ್ಯದಿಂದ ವರ್ತಿಸಬೇಕು. ಅನಗತ್ಯವಾಗಿ ಮರಕ್ಕೆ ಕಲ್ಲೆಸೆಯುವುದನ್ನು ಧರ್ಮ ಒಪ್ಪುವುದಿಲ್ಲ.

ಹೀಗೆ ಮೂರು ರೀತಿಯ ಸಂಬಂಧಗಳ ಕುರಿತು ಬಹಳ ಸ್ಪಷ್ಟವಾಗಿ ತಿಳಿಸಿ ಅದನ್ನು ಪಾಲಿಸಬೇಕೆಂದು ಹೇಳಿದ ಇಸ್ಲಾಮ್ ಸಂಪೂರ್ಣ ಜೀವನ ವ್ಯವಸ್ಥೆಯಾಗಿದೆ. ಜೀವನದ ಎಲ್ಲಾ ರಂಗಗಳಿಗೂ ಅತ್ಯಗತ್ಯವಾದ ಆದೇಶ, ನಿರ್ದೇಶನಗಳು, ಕಾನೂನು ನಿಯಮಗಳು ವ್ಯಾಖ್ಯಾನಗಳನ್ನು ಇಸ್ಲಾಮ್ ನೀಡಿದೆ. ಎಲ್ಲಿಯವರೆಗೆಂದರೆ ಮನುಷ್ಯನು ತನ್ನ ಗೆಳೆಯನನ್ನು ಭೇಟಿಯಾಗುವಾಗ ಅವನ ಮುಖ ಹೇಗಿರಬೇಕೆಂದು ಪ್ರವಾದಿಯವರು ಕಲಿಸಿದ್ದಾರೆ.

ಓರ್ವ ವ್ಯಕ್ತಿ ತನ್ನ ಸ್ನೇಹಿತರನ್ನು ನೋಡಿ ಮುಗಳ್ನಗುವುದು ಪುಣ್ಯಕಾರ್ಯವಾಗಿದೆ. ಪರಸ್ಪರ ಭೇಟಿಯಾಗುವಾಗ ಹೇಗೆ ಅಭಿನಂದಿಸಬೇಕೆಂದು ಕಲಿಸಿತು. ವಿಶ್ವದಲ್ಲಿ ಅತ್ಯಂತ ಆಧುನಿಕರೆಂದು ಗುರುತಿಸಲ್ಪಡುವ ಪಾಶ್ಚಾತ್ಯರು ಪರಸ್ಪರ ಭೇಟಿಯಾಗುವಾಗ ಬೆಳಿಗ್ಗೆ 'ಗುಡ್ ಮಾರ್ನಿಂಗ್' ಎಂದು ಸಂಜೆ 'ಗುಡ್ ಈವಿನಿಂಗ್' ಎಂದು ಹೇಳುತ್ತಾರೆ. ಆದರೆ ಒಮ್ಮೆ ಯೋಚಿಸಿ ನೋಡಿ. ರಾತ್ರಿ ಹೊಟ್ಟೆ ನೋವಿನಿಂದ ನರಳಿ, ಆಹಾರ ಸೇವಿಸಲು ಸಾಧ್ಯವಾಗದೆ, ನಿದ್ರಿಸಲೂ ಸಾಧ್ಯವಾಗದೆ ಬೆಳಗಾತ ಹೊರಟ ವ್ಯಕ್ತಿಯೊಡನೆ ಗುಡ್ ಮಾರ್ನಿಂಗ್ ಎಂದು ಹೇಳಿದರೆ ಅದೆಷ್ಟು ಅನುಚಿತವೆಂದು ತೋರುತ್ತದೆ. ಹೀಗೆಯೇ ಮರಣ ಹೊಂದಿದ ತಂದೆಯ ಬಳಿ ಕುಳಿತ ಮಗನೊಡನೆ ಗುಡ್ ಇವಿನಿಂಗ್ ಎಂದು ಹೇಳಿದರೆ ಅವನಿಗೆ ಅದನ್ನು ಅರಗಿಸಲು ಸಾಧ್ಯವಾದೀತೆ? ಅದೇ ವೇಳೆ ವಿಶ್ವದಲ್ಲಿ ಯಾವ ವ್ಯಕ್ತಿಯೂ ಎಂತಹ ಸಂದರ್ಭದಲ್ಲೂ ಸಂತೋಷದಿಂದ ಸ್ವೀಕರಿಸಲು ಸಾಧ್ಯವಿರುವ ಅಭಿನಂದನಾ ಶೈಲಿಯನ್ನು ಇಸ್ಲಾಮ್ ನಿರ್ಣಯಿಸಿದೆ. 'ಅಸ್ಸಲಾಮು ಅಲೈಕುಮ್' – ನಿಮ್ಮ ಮೇಲೆ ದೇವನ ಶಾಂತಿ ಇರಲಿ, ಎಂದು ಇದರ ಅರ್ಥ. ಅದಕ್ಕೆ ಪ್ರತ್ಯುತ್ತರವಾಗಿ 'ವಅಲೈಕುಮ್ ಅಸ್ಸಲಾಮ್' ನಿಮ್ಮ ಮೇಲೂ ಶಾಂತಿಯಿರಲಿ ಎಂದಾಗಿದೆ.

ಇನ್ನು ಜೀವನದ ಎಲ್ಲಾ ರಂಗಗಳಿಗೂ ಅದು ಮಾರ್ಗದರ್ಶನ ಮಾಡಿದೆ. ನಾವು ನಡೆಯುವ ರೀತಿ ಹೇಗಿರಬೇಕೆಂದು ಸಹ ಕಲಿಸಿದೆ. ಕುರ್‌ಆನ್‌ನಲ್ಲಿ ಹಲವೆಡೆ 'ನೀವು ವಿನಯದಿಂದ ನಡೆಯಿರಿ' 'ಅಹಂಕಾರ ಹಾಗೂ ದರ್ಪದಿಂದ ಭೂಮಿಯಲ್ಲಿ ನಡೆಯದಿರಿ' ಎಂದು ಹೇಳಲಾಗಿದೆ. ಮಲಗುವುದು ಹೇಗೆ? ಆಹಾರ ಸೇವನೆ ಹೇಗಿರಬೇಕು? ನಿದ್ರಿಸುವುದು ಹೇಗೆ? ಏಳುವುದು ಹೇಗೆ? ನೆರೆಕೆರೆಯವರೊಂದಿಗೆ ನಮ್ಮ ವರ್ತನೆ ಹೇಗಿರಬೇಕು? ಸಮಾಜವನ್ನು ಯಾವ ದೃಷ್ಟಿಯಿಂದ ನೋಡಬೇಕು? ಆಡಳಿತಗಾರರೊಂದಿಗೆ ಸಂಬಂಧ ಹೇಗಿರಬೇಕು? ಪ್ರಜೆಗಳೊಂದಿಗೆ ವರ್ತನೆ ಹೇಗಿರಬೇಕು ಎಂಬುದನ್ನೂ ಇಸ್ಲಾಮ್ ಸಂಪೂರ್ಣವಾಗಿ ವಿವರಿಸಿದೆ. ಮನುಷ್ಯರ ವಿಚಾರ, ಆಚಾರ, ಭಾವನೆಗಳು, ಚಲನೆಗಳು ಹಾಗೂ ಕರ್ಮಗಳನ್ನು ದೇವನ ಮಾರ್ಗದರ್ಶನದಂತೆ ಬದಲಾಯಿಸಬೇಕೆಂದು ಅದು ಬಯಸುತ್ತದೆ. ಇಂತಹ ಬದುಕನ್ನು ಸಾಗಿಸುವವರೇ ಮುಸ್ಲಿಮರು.

ಇಸ್ಲಾಮ್ ಮನುಕಲದ ಏಕತೆ ಮತ್ತು ಸಮಾನತೆಗೆ ಬಹಳ ಪ್ರಾಮುಖ್ಯತೆ ನೀಡುತ್ತದೆ. ವಿಶ್ವದ ಎಲ್ಲಾ ಮಾನವರೂ ಏಕದೇವನ ಸೃಷ್ಟಿಗಳು. ವರ್ಗ-ವರ್ಣ-ದೇಶ-ಭಾಷೆ-ಕಾಲ-ಲಿಂಗಭೇದಗಳಿಗೆ ಅತೀತವಾಗಿ ಅವರೆಲ್ಲರೂ ಸಮಾನರು. ಪರಸ್ಪರ ಸಹೋದರರು ಹಾಗೂ ಒಂದೇ ತಂದೆ-ತಾಯಿಗಳ ಮಕ್ಕಳು. ಅಲ್ಲಾಹನು ಹೇಳಿದ್ದಾನೆ: **'ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟುಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ ನಿಮ್ಮನ್ನು ಜನಾಂಗಗಳು, ಗೋತ್ರಗಳನ್ನಾಗಿ ಮಾಡಿದೆವು. ನಿಮ್ಮಲ್ಲಿ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಅರ್ಹನು.' (ಪವಿತ್ರ ಕುರ್‌ಆನ್ 49:13)** ಅಂತ್ಯಪ್ರವಾದಿ ಮುಹಮ್ಮದ್ ಪೈಗಂಬರರು ಹೇಳಿರುವರು: 'ನಿಮ್ಮೆಲ್ಲರ ದೇವನು ಒಬ್ಬನೇ, ನಿಮ್ಮೆಲ್ಲರ ತಂದೆಯೂ ಒಬ್ಬರೇ, ಎಲ್ಲರೂ ಆದಮನಿಂದ, ಆದಮ್ ಮಣ್ಣಿನಿಂದ ಆಗಿದ್ದಾರೆ.'

'ಬಾಚಣಿಗೆಯ ಹಲ್ಲುಗಳಂತೆ ಮನುಷ್ಯರೆಲ್ಲರೂ ಸಮಾನರು' ಎಂದು ಪ್ರವಾದಿ(ಸ) ಕಲಿಸಿರುವರು. ಸರಿಸಾಟಿಯೇ ಇಲ್ಲದಂತಹ ಈ ಮಾತುಗಳು ಕೇವಲ ಹೇಳಿಕೆಗೆ ಸೀಮಿತ ವಾಗದೆ ಪ್ರವಾದಿಯವರು ಪ್ರಾಯೋಗಿಕವಾಗಿ ಜಾರಿಗೊಳಿಸಿದರು. ಪ್ರವಾದಿಯವರು ಸಂದೇಶವಾಹಕರಾಗಿ ನಿಯೋಗಿಸಲ್ಪಟ್ಟ ಸಮಾಜವು ಉಚ್ಚ-ನೀಚತೆಯ ಪರಾಕಾಷ್ಠೆಯಲ್ಲಿತ್ತು. ಗುಲಾಮ-ಯಜಮಾನ, ಒಡೆಯ-ಆಳು, ಮೇಲ್ವರ್ಗ-ಕೆಳವರ್ಗವೆಂಬ ಅಸಮಾನತೆ ಅಲ್ಲಿತ್ತು. ಇಸ್ಲಾಮ್‌ನ 'ನೀವೆಲ್ಲರೂ ಸಮಾನರು' ಎಂಬ ಘೋಷಣೆ ಒಪ್ಪಿಕೊಳ್ಳುವುದು ಅವರಿಗೆ ಕಷ್ಟವಾಯಿತು. ಒಮ್ಮೆ ಪ್ರವಾದಿಯವರ ಸಂಗಾತಿಗಳಾದ ಅಬೂದರ್ರ್ ಗಿಫ್ಫಾರಿ(ರ) ಹಾಗು ಗುಲಾಮರಾಗಿದ್ದ ಬಿಲಾಲ್ ಇಬ್ನ್ ರಬಾಹ್‌ರ ನಡುವೆ ವಾಗ್ವಾದ ಉಂಟಾಯಿತು. ಜಗಳ ಜೋರಾದಾಗ ಗಿಫ್ಫಾರಿಯವರು ಬಿಲಾಲ್‌ರನ್ನು 'ಹೇ, ಕರಿಯಳ ಪುತ್ರಾ' ಎಂದು ಜರೆದರು. ಬಿಲಾಲ್(ರ)ರು ಈ ವಿಷಯವನ್ನು ಪ್ರವಾದಿಯವರಿಗೆ ತಿಳಿಸಿದರು. ಪ್ರವಾದಿವರ್ಯರು

ಗಿಫ್ಫಾರಿಯವರೊಡನೆ ಸಂಗತಿಯ ಕುರಿತು 'ನೀನು ನಿನ್ನ ಗೆಳೆಯನನ್ನು ತಾಯಿಯ ಹೆಸರಿನಿಂದ ನಿಂದಿಸಿದೆಯಾ? ಎಂದು ಹೇಳಿದಾಗ ಗಿಫ್ಫಾರಿ 'ಹೌದೆಂದರು'. ಆಗ ಪೈಗಂಬರರು 'ಹಾಗಾದರೆ ನಿನ್ನಲ್ಲಿ ಇಸ್ಲಾಮ್ ಪೂರ್ಣಗೊಂಡಿಲ್ಲ, ಅನಿಸ್ಲಾಮಿಕತೆ ಈಗಲೂ ಉಳಿದಿದೆ, ಆದ್ದರಿಂದ ನೀನು ಪಶ್ಚಾತ್ತಾಪಪಟ್ಟು ಮರಳಬೇಕು.' ಇದನ್ನು ಕೇಳಿದ ಕುಲೀನ ಮನೆತನದ ಅಬೂದರ್ರ್ ಗಿಫ್ಫಾರಿಯವರು ಬಿಲಾಲ್‌ರ ಬಳಿಗೆ ಬಂದು ತನ್ನ ಮುಖವನ್ನು ನೆಲದಲ್ಲಿಟ್ಟು ಹೇಳಿದರು. 'ಬಿಲಾಲ್, ನಾನು ಮಾಡಿದ ತಪ್ಪಿಗೆ ನೀನು ನನ್ನ ಮುಖಕ್ಕೆ ಒದ್ದು ಪ್ರತಿಕಾರವನ್ನು ತೀರಿಸು ಎಂದು ವಿನಂತಿಸಿದರು.' ಆಗ ಬಿಲಾಲ್ ಹೇಳಿದರು: 'ನಾನು ನಿಮ್ಮನ್ನು ಕ್ಷಮಿಸಿದ್ದೇನೆ.'

ಇದು ಪ್ರವಾದಿ (ಸ) ರು ಆ ಸಮಾಜದಲ್ಲಿ ಬೆಳೆಸಿದ ಸಮಾನತೆಯ ಉಜ್ವಲ ಉದಾಹರಣೆ. ಈ ಸಮಾನತೆಗೆ ಧಕ್ಕೆ ಉಂಟಾಗುವಂತಹ ಸಣ್ಣ ಕೈಸನ್ನೆಯೂ ಉಂಟಾಗಬಾರದೆಂದು ಇಸ್ಲಾಮ್ ತಾಕೀತು ಮಾಡುತ್ತದೆ.

ಪವಿತ್ರ ಕುರ್‌ಆನ್‌ನಲ್ಲಿ ಮುಹಮ್ಮದ್(ಸ) ಒಂದು ಬಾರಿ ಮಾತ್ರ ವಿಮರ್ಶೆಗೆ ಒಳಗಾಗಿದ್ದಾರೆ. ಅದು ಪ್ರವಾದಿವರ್ಯರ ಆರಾಧನಾ ಕರ್ಮದಲ್ಲಾದ ದೋಷಕ್ಕಾಗಿ ಅಲ್ಲ, ದೇವನೊಂದಿಗಿನ ಸಂಬಂಧದಲ್ಲಿ ಬಿರುಕುಂಟಾದುದಕ್ಕೂ ಅಲ್ಲ, ಬದಲಾಗಿ ತನ್ನ ಅನುಯಾಯಿಯೊಂದಿಗಿನ ಅವರ ವರ್ತನೆ ಸರಿಯಾಗದಿದ್ದ ಕಾರಣಕ್ಕಾಗಿತ್ತು. ಒಂದು ಬಾರಿ ಪ್ರವಾದಿವರ್ಯರು ಊರ ಪ್ರಮುಖರೊಂದಿಗೆ ಮಾತುಕತೆ ನಡೆಸುತ್ತಿದ್ದರು. ಅಬೂಜಹಲ್, ಅಬೂಲಹಬ್, ಉತ್ಬಾ, ಶೈಬ ರಂತಹ ಮಕ್ಕಾದ ಕುರೈಶಿ ಪ್ರಮುಖರು ಸೇರಿದ್ದರು. ಇಸ್ಲಾಮ್ ಧರ್ಮದ ಬಗ್ಗೆ ಮಾತುಕತೆ ನಡೆಯುತ್ತಿತ್ತು. ಆ ಸಂದರ್ಭದಲ್ಲಿ ಅಂಧರಾದ ಅಬ್ದುಲ್ಲಾ ಇಬ್ನು ಉಮ್ಮು ಮಕ್ತೂಮ್ ಅಲ್ಲಿಗೆ ಬಂದರು. ಆಗ ಪ್ರವಾದಿವರ್ಯರಿಗೆ ಅಂಧರಾದ ಅಬ್ದುಲ್ಲಾ ಇಬ್ನು ಉಮ್ಮ ಮಕ್ತೂಮ್‌ರನ್ನು ಗಮನಿಸಲು ಅಥವಾ ವಿಶೇಷವಾಗಿ ಆದರಿಸಲು ಸಾಧ್ಯವಾಗಲಿಲ್ಲ, ಪ್ರವಾದಿಯವರ ವರ್ತನೆಯ ಕುರಿತು ಹುಟ್ಟು ಕುರುಡರಾದ ಉಮ್ಮು ಮಕ್ತೂಮ್‌ರಿಗೆ ತಿಳಿಯಲೂ ಇಲ್ಲ, ಪ್ರವಾದಿಯವರ ಮುಖಭಾವ ತಿಳಿಯಲು ಅವರ ಕಣ್ಣಿಗೆ ದೃಷ್ಟಿಯಿರಲಿಲ್ಲ, ಅವರು ತಮ್ಮನ್ನು ಗಮನಿಸಿದರೋ ಇಲ್ಲವೋ ಎಂದು ತಿಳಿಯಲಿಲ್ಲ, ಆದರೆ ಅಬ್ದುಲ್ಲಾ ಇಬ್ನು ಮಕ್ತೂಮ್‌ರಿಗೆ ವಿಷಯ ತಿಳಿಯಿತೋ ಇಲ್ಲವೋ ಎಂಬುದು ದೇವನಿಗೆ ಸಮಸ್ಯೆಯಾಗಿರಲಿಲ್ಲ, ಬದಲಾಗಿ ಅಂತ್ಯ ಪ್ರವಾದಿಯವರು ತನ್ನ ಓರ್ವ ದಾಸನನ್ನು ನಿರ್ಲಕ್ಷಿಸಿದರೋ ಇಲ್ಲವೋ ಎಂಬುದು ಮುಖ್ಯ ವಿಷಯವಾಗಿತ್ತು. ಇದಕ್ಕಾಗಿ ಕುರ್‌ಆನ್‌ನಲ್ಲಿ ಹಲವು ಸೂಕ್ತಗಳು ಅವತೀರ್ಣವಾಯಿತು. ಅಲ್ಲಿ ಪ್ರವಾದಿಯವರ ನಿಲುವನ್ನು ವಿವರಿಸಿ ಇಂತಹ ಪ್ರಮಾದ ಮುಂದೆ ಸಂಭವಿಸಬಾರದೆಂದು ಅವರನ್ನು ಎಚ್ಚರಿಸಲಾಯಿತು.

ಮಾನವರು ಪರಸ್ಪರ ದ್ರೋಹವೆಸಗಿದರೆ ದೇವನು ಅದನ್ನು ಖಂಡಿತವಾಗಿಯೂ ಕ್ಷಮಿಸಲಾರ. ಸಮಾನತೆಯ ಉದಾತ್ತ ಭಾವನೆಯು ವಿಶ್ವಾಸಿಯಲ್ಲಿ ಸದಾ ಜಾಗೃತವಾಗಬೇಕೆಂದು ಪವಿತ್ರ ಕುರ್‌ಆನ್ ಆದೇಶಿಸಿದೆ. ಮುಖ್ಯವಾದ ಒಂದು ವಿಷಯ ನೆನಪಿಸಬಯಸುತ್ತೇನೆ.

ಪವಿತ್ರ ಕಅಬಾವು ಜಗತ್ತಿನ ಅತ್ಯಂತ ಉನ್ನತವಾದ ಶ್ರದ್ಧಾ ಕೇಂದ್ರವಾಗಿದೆ. ಜಗತ್ತಿನ ನೂರು ಕೋಟಿ ಮನುಷ್ಯರು ದಿನಕ್ಕೆ ಐದು ಬಾರಿ ಅದರ ಕಡೆಗೆ ತಿರುಗಿ ನಮಾಝ್ ಮಾಡುತ್ತಾರೆ. ಅವರೆಲ್ಲಾ ಮರಣಾಸನ್ನರಾಗುವಾಗ ಅವರ ಮುಖವನ್ನು ಅದರ ಕಡೆಗೆ ತಿರುಗಿಸಲಾಗುತ್ತದೆ. ವಿವಿಧ ತಲೆಮಾರುಗಳ, ಶತಮಾನಗಳ ಅಸಂಖ್ಯಾತ, ಕೋಟ್ಯಂತರ ಮನುಷ್ಯರು ಕಅಬಾದ ಕಡೆಗೆ ಮುಖ ಮಾಡಿ ಅಂತ್ಯ ವಿಶ್ರಾಂತಿ ಪಡೆಯುತ್ತಿದ್ದಾರೆ. ಆ ದೇವನ ಮಂದಿರದ ಮೇಲೆ ಹತ್ತಿ ಬಾಂಗ್(ಅದಾನ್) ಕರೆ ನೀಡಿದ ಜಗತ್ತಿನ ಓರ್ವನೇ ವ್ಯಕ್ತಿ. ಅದು ಬಿಲಾಲ್ ಬಿನ್ ರಬಾಹ್ ಆಗಿದ್ದರು. ಅದೊಂದು ವಿಜಯದ ಘೋಷಣೆಯಾಗಿತ್ತು. ತಾಯಿನಾಡಿಗೆ ಅನಿವಾರ್ಯತೆಯಿಂದ ವಿದಾಯಕೋರಿದ್ದ ಪ್ರವಾದಿ(ಸ) ಮತ್ತು ಅನುಯಾಯಿಗಳು ಮಕ್ಕಾಕ್ಕೆ ಮರಳಿದ ಶುಭ ಮುಹೂರ್ತವಾಗಿತ್ತು. ಅಂದು ಓರ್ವ ವಿಜಯೀ ನಾಯಕನಂತೆ, ಆಡಳಿತಗಾರನಂತೆ, ಸೇನಾಧಿಪತಿಯಂತೆ ಪವಿತ್ರ ಕಅಬಾ ಮಂದಿರದ ಮೇಲೆ ಹತ್ತಿ ಬಾಂಗ್ ಕರೆ ನೀಡಲು ಪ್ರವಾದಿಯವರು ಆಯ್ದುಕೊಂಡ ವ್ಯಕ್ತಿ ಉನ್ನತ ಗೋತ್ರದವನಾಗಿರಲಿಲ್ಲ, ಓರ್ವ ಕರಿಯ, ಗುಲಾಮನಾದ ಬಿಲಾಲ್ ಬಿನ್ ರಬಾಹ್‌ರನ್ನು ಆರಿಸಿಕೊಂಡರು. ಹಝ್ರತ್ ಬಿಲಾಲ್ ರವರು ಕಅಬಾದ ಮೇಲೆ ಹತ್ತಿ ಬಾಂಗ್ ಕರೆ ನೀಡಿದರು. ಹೀಗೆ ಸಮೂಹದ ಉಚ್ಚ-ನೀಚತೆಯ ಕೊನೆಯ ಅಂಶವು ಕೊನೆಗೊಳ್ಳುವಂತೆ ಶ್ರಮಿಸಿದರು.

ಇನ್ನೊಂದು ವಿಷಯ ಹೇಳುತ್ತೇನೆ, ಭೂಮಿಯಲ್ಲಿ ಮನುಷ್ಯರು ಮಾಡುವ ಮಹತ್ವದ ಕಾರ್ಯ ಯಾವುದು ಎಂಬುದು ಪ್ರಸಕ್ತವಾಗುತ್ತದೆ. ಸಾಮಾನ್ಯವಾಗಿ ನಾವು ದೇವನಿಗಾಗಿ ಮಾಡುವ ಆರಾಧನೆಗಳು, ಉಪವಾಸ ಅಥವಾ ಏಕಾಂತದಲ್ಲಿ ಮಾಡುವ ಧ್ಯಾನವು ದೇವನಿಗೆ ಇಷ್ಟವಾದದ್ದೆಂದು ಭಾವಿಸುತ್ತೇವೆ. ಆದರೆ ದೇವನು ತಿಳಿಸುವಂತೆ ತೋರಿಕೆಯ ಉದ್ದೇಶವಿಲ್ಲದೆ, ದೇವನ ಪ್ರೀತಿಯನ್ನು ಬಯಸಿ, ತಮ್ಮ ಸಹಜೀವಿಗಳಿಗೆ ಮಾಡುವ ಸೇವೆಯೇ ದೇವನಿಗೆ ಇಷ್ಟದ ಕಾರ್ಯವಾಗಿದೆ.

ಹೀಗೆ ಸಾಮೂಹಿಕ ರಂಗದಲ್ಲಿ ಅನಿವಾರ್ಯವಾದ ಆದೇಶಗಳನ್ನು ಕಲಿಸಿದ ಇಸ್ಲಾಮ್ ಸಂಪತ್ತನ್ನು ವಿನಿಯೋಗಿಸುವ ರೀತಿಯನ್ನು ವಿವರಿಸಿತು. ಸಂಪತ್ತು ದೇವನದ್ದಾಗಿದೆ. ಮಾನವನಿಗೆ ಅದನ್ನು ಉಪಯೋಗಿಸುವ ಅವಕಾಶ ಮಾತ್ರವಿದೆ. ಅದನ್ನು ಸಂಪಾದಿಸುವುದು ಹೇಗೆ? ಖರ್ಚು ಮಾಡುವುದು ಹೇಗೆ? ಹೇಗೆ ಕೈವಶದಲ್ಲಿರಿಸಬಹುದು? ಹೇಗೆ ವ್ಯಯಿಸಬಾರದು? ಇವೆಲ್ಲವನ್ನೂ ಇಸ್ಲಾಮ್ ಬಹಳ ಸ್ಪಷ್ಟವಾಗಿ ವಿವರಿಸಿದೆ. ಸಂಪಾದನೆ ಮಾಡುವುದು ಪಾಪಕಾರ್ಯವಲ್ಲ, ಅದು ಪುಣ್ಯ ಕಾರ್ಯವಾಗಿದೆ. ಕಾರಣವೇನೆಂದರೆ ಮಾನವನು ಭೂಮಿಯಲ್ಲಿ ದೇವನ ಪ್ರತಿನಿಧಿಯಾಗಿದ್ದಾನೆ. ಈ ಭೂಮಿಯನ್ನು ಸಂಪನ್ನಗೊಳಿಸುವುದು ದೇವ ಸೃಷ್ಟಿಯಾದ ಮಾನವರ ಕರ್ತವ್ಯವಾಗಿದೆ. ಮುಂದಿನ ಪೀಳಿಗೆಗೆ ಭೂಮಿಯನ್ನು ಫಲವತ್ತಾಗಿಸುವುದು ಆರಾಧನೆಯಾಗಿದೆ.

ಒಮ್ಮೆ ಪ್ರವಾದಿವರ್ಯರು ಹೇಳಿದರು: ''ಶ್ರಮದ ದುಡಿಮೆಯಿಂದ ವಿಶ್ವಾಸಿಯು ಆಯಾಸಗೊಂಡರೆ ಅವನು ಪಾಪಮುಕ್ತನಾಗುತ್ತಾನೆ.'' ಒಮ್ಮೆ ಪ್ರವಾದಿ(ಸ) ತಮ್ಮ ಓರ್ವ

ಅನುಚರನಿಗೆ ಹಸ್ತಲಾಘವ ಮಾಡಿದರು. ಆ ವ್ಯಕ್ತಿಯ ಕೈ ಒರಟಾಗಿತ್ತು. ಪ್ರವಾದಿಯವರು ನಿನ್ನ ಕೈಗೆ ಏನಾಗಿದೆ? ಎಂದು ಕೇಳಿದಾಗ ಆ ವ್ಯಕ್ತಿ ಹೇಳಿದರು ' ನನ್ನ ಕಠಿಣ ದುಡಿಮೆಯಿಂದ ಕೈಯಲ್ಲಿ ದಡ್ಡು ಉಂಟಾಗಿದೆ' ಆಗ ಪ್ರವಾದಿ(ಸ) ಆ ವ್ಯಕ್ತಿಯ ಕೈಯನ್ನು ಚುಂಬಿಸಿದರು. ನಂತರ ಆ ಕೈಗಳನ್ನು ಎತ್ತಿ ಹಿಡಿದು, 'ಇದು ದೇವನು ಮತ್ತು ಅವನ ಪ್ರವಾದಿಯು ಇಷ್ಟಪಟ್ಟ ಕೈಗಳು' ಎಂದರು. ಅಂದರೆ ಶ್ರಮದಾಯಕ ಕೆಲಸ ಮಾಡಿ ಒರಟಾದ ಕೈಗಳು ದೇವನಿಗೆ ಹಾಗೂ ಪ್ರವಾದಿಗೆ ಬಹಳ ಪ್ರಿಯವಾದುದು ಎಂದರ್ಥ.

ಸಮಾಜದಲ್ಲಿ ಅಕ್ರಮ, ಅನ್ಯಾಯಗಳಿಂದ ಸಂಪಾದಿಸುವುದನ್ನು ನಿಷೇಧಿಸಲಾಗಿದೆ. ಅಲ್ಲದೆ ಹಣವನ್ನು ಕೈಯಲ್ಲಿರಿಸುವ ಅನುಮತಿ ನೀಡಿರುವ ಇಸ್ಲಾಮ್ ಸಮೂಹದ ಆರ್ಥಿಕ ಸ್ಥಿತಿಯನ್ನು ಸಂಪೂರ್ಣವಾಗಿ ಗಮನದಲ್ಲಿರಿಸಿ ತನ್ನ ವಶದಲ್ಲಿರಸಬೇಕೆಂದು ಸ್ಪಷ್ಟಪಡಿಸಿದೆ. ಅಲ್ಲದೆ ಹಣದಲ್ಲಿ ಆಡಂಬರ ಹಾಗೂ ದುಂದುವೆಚ್ಚ ಮಾಡಬಾರದೆಂದು ತಾಕೀತು ಮಾಡಿದೆ.

ಹೀಗೆ ಅಂತ್ಯ ಪ್ರವಾದಿಯ ಮೂಲಕ ಮಾನವನಿಗೆ ಅಗತ್ಯವಿರುವ ಮಾರ್ಗದರ್ಶನ ಮಾಡಲಾಗಿದೆ. ಅದರಂತೆ ಬದುಕು ಸಾಗಿಸುವವರನ್ನು ಮುಸ್ಲಿಮ್ ಎನ್ನಲಾಗುತ್ತದೆ. ಮುಸ್ಲಿಮ್ ಎಂದರೆ ಒಂದು ಜಾತಿಯ ಹೆಸರಲ್ಲ, ಯಾವುದೋ ದೇಶ, ಭಾಷೆಯ ಅಥವಾ ಪ್ರತ್ಯೇಕ ಹೆಸರಿರುವವರ ಹೆಸರಲ್ಲ, ಈ ಪ್ರಪಂಚವನ್ನು ನಿರ್ಮಿಸಿ ಅದಕ್ಕೆ ಪ್ರಕೃತಿಯ ನಿಯಮವನ್ನು ರೂಪಿಸಿದವನೇ ಮನುಷ್ಯರಿಗಾಗಿ ಸೂಚಿಸಿದ ಜೀವನ ವ್ಯವಸ್ಥೆಯನ್ನು ಪಾಲಿಸುವವರಾಗಿದ್ದಾರೆ. ಇದುವೇ ಇಸ್ಲಾಮ್ ಧರ್ಮ. ಇಸ್ಲಾಮ್ ಮೂರು ಮೂಲಭೂತ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತದೆ.

ಪ್ರಪಂಚದ ಏಕೈಕ ಒಡೆಯನಿಗೆ ಮಾತ್ರ ವಿಧೇಯರಾಗಿ, ಅವನ ಆದೇಶಗಳನ್ನು ಅನುಸರಿಸಿ ಬದುಕಬೇಕು. ಹೀಗೆ ಬಾಳಿದರೆ ಮರಣದ ಬಳಿಕ ದೇವನು ವಾಗ್ದಾನ ಮಾಡಿದ ಸ್ವರ್ಗಸುಖ ಲಭಿಸುತ್ತದೆ. ಅದೇ ವೇಳೆ ದೇವನನ್ನು ಧಿಕ್ಕರಿಸಿ, ನಿಷೇಧಿಯಾಗಿ, ಅಹಂಕಾರಿಯಾಗಿ ಬಾಳಿದವರಿಗೆ ಮರಣದ ಬಳಿಕ ಪರಲೋಕದಲ್ಲಿ ಕಠಿಣ ನರಕದ ಶಿಕ್ಷೆ ಅನುಭವಿಸಬೇಕಾಗುತ್ತದೆ. ಈ ಸಂದೇಶವನ್ನು ಮಾನವರಿಗೆ ತಲುಪಿಸಲು ವಿಶ್ವದ ವಿವಿಧ ಭಾಗಗಳಿಗೆ, ಬೇರೆ ಬೇರೆ ಕಾಲಗಳಲ್ಲಿ ನಿಯೋಗಿಸಲಾದ ಎಲ್ಲಾ ದೇವ ಸಂದೇಶವಾಹಕರಲ್ಲಿ ಹಾಗೂ ಅಂತಿಮ ಪ್ರವಾದಿ ಮುಹಮ್ಮದ್(ಸ)ರಲ್ಲಿ ವಿಶ್ವಾಸವಿರಿಸುವುದು. ಪ್ರವಾದಿಗಳಿಗೆ ಅವತೀರ್ಣಗೊಂಡ ದೇವಗ್ರಂಥಗಳನ್ನು ಅಂಗೀಕರಿಸುವುದು. ಈ ಮೂರು ಮೂಲಭೂತ ವಿಶ್ವಾಸಗಳನ್ನು ಅಂಗೀಕರಿಸಿ, ದೇವನ ಅನುಗ್ರಹಗಳಿಗೆ ಕೃತಜ್ಞರಾಗಿ, ಅವನು ತಿಳಿಸಿದ ರೀತಿಯಲ್ಲಿ ಅವನ ಆರಾಧನೆ ಮಾಡಿ, ಆತನ ಮಾರ್ಗದರ್ಶನದಂತೆ ಜೀವನದ ಎಲ್ಲಾ ರಂಗಗಳನ್ನೂ ಕಳೆಯಬೇಕೆಂದು ಇಸ್ಲಾಮ್ ಬಯಸುತ್ತದೆ. ಇಂತಹ ವ್ಯಕ್ತಿ ತನ್ನ ಕುಟುಂಬ, ಸಮೂಹ, ದೇಶ ಹಾಗೂ ವಿಶ್ವಕ್ಕೆ ಅನುಗ್ರಹವಾಗಿರುತ್ತಾನೆ. ಹೀಗಾದರೆ ಮಾನಸಿಕ ನೆಮ್ಮದಿ, ವೃತ್ತಿಜೀವನದಲ್ಲಿ ಪ್ರಾಮಾಣಿಕತೆ, ಕುಟುಂಬ ಜೀವನದಲ್ಲಿ ಸ್ವಾಸ್ಥ್ಯ. ಶಾಂತಿಯುತ ಸಮಾಜ, ಸುಭದ್ರ ರಾಷ್ಟ್ರ ಹಾಗೂ

ಪ್ರಶಾಂತಪೂರ್ಣವಾದ ವಿಶ್ವದ ನಿರ್ಮಾಣವಾಗುತ್ತದೆ. ಒಟ್ಟಿನಲ್ಲಿ ದೇವಶಿಕ್ಷೆಯಿಂದ ಪಾರಾಗಿ, ಅನುಗ್ರಹೀತ ಸ್ವರ್ಗದ ಹಕ್ಕುದಾರರಾಗುವರು. ಇಂತಹ ಸಮಗ್ರ ವ್ಯವಸ್ಥೆಯ ಕುರಿತು ಅಧ್ಯಯನ ನಡೆಸಿ, ಸಂಶೋಧನೆಗೂ ಒಳಪಡಿಸಿಕೊಂಡು ಸ್ವೀಕಾರಾರ್ಹವಾದರೆ ಅದನ್ನು ಪಾಲಿಸಬೇಕೆಂದು ವಿನಯಪೂರ್ವಕವಾಗಿ ವಿನಂತಿಸುತ್ತೇನೆ. ಇಲ್ಲಿ ಇಸ್ಲಾಮ್‌ನ ಸಮಗ್ರ ರೂಪವನ್ನು ಸಮರ್ಪಿಸಿಲ್ಲ, ಆದರೆ ಇಸ್ಲಾಮ್‌ನ ಕುರಿತು ಸಂಶೋಧನೆ ನಡೆಸಲು, ಕಲಿಯಲು, ಅರ್ಥೈಸಲು ಪ್ರೇರಣೆ ನೀಡುವ ಸಂಕ್ಷಿಪ್ತ ಚಿತ್ರಣವನ್ನು ಮಾತ್ರ ನೀಡಲಾಗಿದೆ. ಆಳವಾದ ಅಧ್ಯಯನ ನಡೆಸುವಿರೆಂದು, ನಿರೀಕ್ಷಿಸುತ್ತೇನೆ. ಅದಕ್ಕಾಗಿ ಸಿದ್ಧರಾಗಬೇಕೆಂದು ವಿನಂತಿಸುತ್ತೇನೆ.

*-ಶೇಖ್ ಮುಹಮ್ಮದ್ ಕಾರಕುನ್ನು*

## 1 ದೇವನು ನ್ಯಾಯವಂತನೇ?

'ದೇವನನ್ನು ನ್ಯಾಯಪಾಲಕನೆಂದು ಹೇಳಲಾಗುತ್ತದೆ. ಆದರೆ, ಮನುಷ್ಯರಲ್ಲಿ ಕೆಲವರು ಅಂಗವಿಕಲರೂ ಹಾಗೂ ಇನ್ನು ಕೆಲವರು ಮಂದ ಬುದ್ಧಿಯವರೂ ಇದ್ದಾರೆ. ಇದು ದೇವನು ತನ್ನ ಸೃಷ್ಟಿಯೊಂದಿಗೆ ಮಾಡಿದ ದೊಡ್ಡ ಅನ್ಯಾಯವಲ್ಲವೇ'?

ಇದು ಬಹಳ ಪ್ರಸಕ್ತವೂ ನ್ಯಾಯಪೂರ್ಣವಾದ ಪ್ರಶ್ನೆಯಾಗಿದೆ. ಆದರೆ ಸ್ವಲ್ಪ ಆಳವಾಗಿ ಚಿಂತಿಸಿದರೆ ಇದು ಅಪ್ರಸ್ತುತವೆಂಬ ಅರಿವಾಗುತ್ತದೆ. ಈ ಪ್ರಶ್ನೆಯನ್ನೇ ಸ್ವಲ್ಪ ದೀರ್ಘಗೊಳಿಸುವುದಾದರೆ ನಮ್ಮಲ್ಲಿ ಹಲವಾರು ಸಂಶಯಗಳಿವೆ. ನನ್ನನ್ನು ಆರು ಅಡಿ ಉದ್ದದ ವ್ಯಕ್ತಿಯನ್ನಾಗಿ ಏಕೆ ಮಾಡಲಿಲ್ಲವೆಂದು ಗಿಡ್ಡ ವ್ಯಕ್ತಿಯು ಕೇಳಬಹುದು. ಕಪ್ಪು ಮೈಬಣ್ಣದವನು ನಾನು ಯಾಕೆ ಬಿಳಿಯವನಾಗಿಲ್ಲವೆಂದು ಪ್ರಶ್ನಿಸಬಹುದು. ತನ್ನನ್ನು ಸುಂದರಗೊಳಿಸಿಲ್ಲವೇಕೆಂದು ಕುರೂಪಿಯೂ, ಪ್ರತಿಭಾವಂತನಾಗಿ ಮಾಡಲಿಲ್ಲವೆಂದು ಸಾಮಾನ್ಯ ಬುದ್ಧಿಯುಳ್ಳವನೂ ಕೇಳಬಹುದು. ಉತ್ತಮ ಹವಾಮಾನ ಇರುವ ಸ್ಥಳದಲ್ಲಿ ಹುಟ್ಟಿಸಲಿಲ್ಲವೇಕೆಂದು ಮರುಭೂಮಿಯ ನಿವಾಸಿಯೂ, ಶ್ರೀಮಂತ ಕುಟುಂಬದಲ್ಲಿ ಹುಟ್ಟಿಸಲಿಲ್ಲವೇಕೆಂದು ಬಡವನೂ, ರಾಜನಾಗಿ ಮಾಡಲಿಲ್ಲವೆಂದು ಜನಸಾಮಾನ್ಯನೂ, ಇಪ್ಪತ್ತೊಂದನೇ ಶತಮಾನದಲ್ಲಿ ಜೀವನ ಸಿಗಲಿಲ್ಲವೆಂದು ಹತ್ತನೇಯ ಶತಮಾನದವನ ಪ್ರಶ್ನೆಯೂ ಎಲ್ಲವೂ ಪ್ರಸಕ್ತ ಹಾಗೂ ನ್ಯಾಯಯುತವೇ ಆಗಿದೆ. ಇವುಗಳನ್ನು ಅವರವರ ದೃಷ್ಟಿಕೋನದಿಂದ ನೋಡುವಾಗ ಇದು ಬಹಳ ದೊಡ್ಡ ಅನ್ಯಾಯವಾಗಿದೆ. ಮಹಿಳೆಯರು ಹೀಗೆ ಪ್ರಶ್ನಿಸಬಹುದು- ನಾನೇ ಗರ್ಭಧರಿಸಿ ಕಷ್ಟಪಟ್ಟು, ನೋವನುಭವಿಸಿ ಹೆತ್ತು, ಮಗುವಿಗೆ ಸ್ತನಪಾನ ಮಾಡಿಸಬೇಕು. ನನ್ನ ಗಂಡನಿಗೆ ಅಂತಹ ಕಷ್ಟವೇನೂ ಇಲ್ಲವಲ್ಲ, ಆದ್ದರಿಂದ ತನ್ನನ್ನು ಗಂಡಾಗಿ ಸೃಷ್ಟಿಸಲಿಲ್ಲವೇಕೆಂದು ತಗಾದೆ ತಗೆಯಬಹುದು. ತನ್ನೊಂದಿಗೆ ಅನ್ಯಾಯವಾಗಿದೆಯೆಂದು ಸಮರ್ಥಿಸಬಹುದು. ಮನುಷ್ಯರ ನಡುವೆ ವ್ಯತ್ಯಾಸಗಳಿಲ್ಲದಿರುವುದೇ ನ್ಯಾಯವೆನ್ನುವುದಾದರೆ ಎಲ್ಲರೂ ಒಂದೇ ಭೂಪ್ರದೇಶದಲ್ಲಿ, ಒಂದೇ ಕಾಲ, ಕುಟುಂಬ, ಒಂದೇ ತಂದೆ-ತಾಯಿಗಳ ಮಕ್ಕಳಾಗಿ, ಸಮಾನ ಬುದ್ಧಿವಂತಿಕೆ, ಒಂದೇ ರೀತಿಯ ರೂಪ, ದೇಹ, ಲಿಂಗ ಅಥವಾ ಒಂದೇ ರೀತಿಯ ಆರೋಗ್ಯದಿಂದ ಹುಟ್ಟುವ ಮತ್ತು ಸಾಯುವ ಪರಿಸ್ಥಿತಿ ಇರುತ್ತಿತ್ತು. ಇದು ಅಸಾಧ್ಯ ಮತ್ತು ಅಪ್ರಾಯೋಗಿಕವೆಂದು ಎಲ್ಲರಿಗೂ ಅರ್ಥವಾಗುತ್ತದೆ. ಆದ್ದರಿಂದ ಎಲ್ಲದರಲ್ಲಿಯೂ ವೈವಿಧ್ಯತೆಯು ಮಾನವ ಕುಲದ ಅಸ್ತಿತ್ವಕ್ಕೆ ಅನಿವಾರ್ಯವಾಗಿದೆ.

ಮಾನವ ಜೀವನವು ಮರಣದೊಂದಿಗೆ ಕೊನೆಗೊಳ್ಳುವುದೆಂದಿದ್ದರೆ ಅನ್ಯಾಯದ ಕುರಿತಾದ ಪ್ರಶ್ನೆಗಳು ಸರಿಯಾಗಿದೆ. ಅಂತಾದರೆ ಜನನದಿಂದ ಮರಣದವರೆಗೆ ಜೀವನವು ಎಲ್ಲರಿಗೂ ಸಮಾನವಾಗಿ ಆಸ್ವದಿಸಲು ದೊರೆಯಬೇಕು. ಆದರೆ ನ್ಯಾಯವಂತನಾದ ದೇವನು ಮರಣದೊಂದಿಗೆ ನಮ್ಮ ಜೀವನವನ್ನು ಕೊನೆಗೊಳಿಸುವುದಿಲ್ಲ . ಇಹ ಲೋಕವು ಕರ್ಮಮಾಡುವ ಜೀವನವಾಗಿದೆ. ವಿಚಾರಣೆ, ವಿಧಿ, ಕರ್ಮಫಲ ಎಲ್ಲಾ ಮರಣದ ಬಳಿಕ ಪರಲೋಕದಲ್ಲಿ ಲಭಿಸುವುದು. ಪ್ರತಿಯೊಬ್ಬರಿಗೂ ಅವರಿಗೆ ನೀಡಲಾಗಿರುವ ಸಾಮರ್ಥ್ಯಕ್ಕೆ ಅನುಗುಣವಾಗಿ ಭೂಮಿಯಲ್ಲಿ ಕರ್ತವ್ಯ ನಿರ್ವಹಿಸಬೇಕಾಗಿದೆ. ಶ್ರೀಮಂತನಿಗಿರುವ ಜವಾಬ್ದಾರಿ ಬಡವನಿಗಿಲ್ಲ, ವಿದ್ವಾಂಸನ ಹೊಣೆಗಾರಿಕೆ ಸಾಮಾನ್ಯ ವ್ಯಕ್ತಿಗಿಲ್ಲ, ಪ್ರತಿಭಾನ್ವಿತ ವ್ಯಕ್ತಿಯ ಕರ್ತವ್ಯ ಸಾಮಾನ್ಯ ಬುದ್ಧಿವಂತನಿಗಿಲ್ಲ, ಮಂದ ಬುದ್ಧಿಯವನಿಗೆ ಸ್ವಲ್ಪವೂ ಹೊಣೆಗಾರಿಕೆಯಿಲ್ಲ, ಅಂಗವಿಕಲನಿಗೆ ಆರೋಗ್ಯವಂತನಿಗಿಂತ ಕಡಿಮೆ ಹೊಣೆಗಾರಿಕೆಯಿದೆ. ಈ ಹೊಣೆಗಾರಿಕೆಗಳ ನಿರ್ವಹಣೆಯು ಜೀವನದ ಸೋಲು-ಗೆಲುವಿನ ಮಾನದಂಡವಾಗಿದೆ. ಪ್ರತಿಯೊಬ್ಬರೂ ತಮ್ಮ ಸಾಮರ್ಥ್ಯಗಳನ್ನು ಹೇಗೆ ವಿನಿಯೋಗಿಸಿದರೆಂಬುದನ್ನು ಪರಿಗಣಿಸಲಾಗುವುದು. ನಂತರ, ಅದೇ ಆಧಾರದಲ್ಲಿ ಮರಣದ ಬಳಿಕ ಪುಣ್ಯ-ಶಿಕ್ಷೆಗಳು ನಿರ್ಧಾರವಾಗುತ್ತದೆ. ಆದ್ದರಿಂದ ಮರಣಾನಂತರ ಪರಲೋಕವಿಲ್ಲದಿದ್ದರೆ ಮಾತ್ರ ಭೂಮಿಯಲ್ಲಿ ಮಾನವನ ನಡುವಿನ ವ್ಯತ್ಯಾಸಗಳು ಅನ್ಯಾಯವೆನಿಸುತ್ತದೆ. ಶಾಶ್ವತವಾದ ಪರಲೋಕ ನಿಷೇಧಿಸಲಾಗದ ವಾಸ್ತವವಾದುದರಿಂದ ದೇವನು ಮಾಡಿರುವಂತಹ ವೈವಿಧ್ಯತೆಗಳು, ವ್ಯತ್ಯಾಸಗಳು ಖಂಡಿತ ನ್ಯಾಯಕ್ಕೆ ವಿರುದ್ಧವಾಗುವುದಿಲ್ಲ.

ತನಗೆ ದೇವನು ನೀಡಿದ ಅನುಗ್ರಹಗಳನ್ನು ಸ್ಮರಿಸಿ, ಅಂಗವಿಕಲರೊಂದಿಗೂ, ದರಿದ್ರರೊಂದಿಗೂ ಅನುಕಂಪ ತೋರಿ, ಪರಸ್ಪರ ಪ್ರೀತಿಸಿ, ಸಹಾಯ ಸಹಕಾರಗಳನ್ನು ನೀಡಿ, ಉದಾರತೆಯಿಂದ ವರ್ತಿಸಿದ್ದಾರೋ ಎಂಬ ಆಧಾರದಲ್ಲಿ ಮರಣದ ಬಳಿಕದ ಜೀವನದ ಶಿಕ್ಷೆ-ರಕ್ಷೆ-ಪ್ರತಿಫಲವು ದೊರೆಯುವುದು.

ಆದರೆ ದೇವನನ್ನು ಹಾಗೂ ಪರಲೋಕವನ್ನು ನಿಷೇಧಿಸುವ ನಾಸ್ತಿಕರು ಇಂತಹ ಪ್ರಶ್ನೆಗಳಿಗೆ ಉತ್ತರ ನೀಡುವುದು ಅಸಾಧ್ಯ. ಪ್ರಪಂಚಕ್ಕೆ ಸಮಗ್ರ ವ್ಯವಸ್ಥೆಯನ್ನು ಕಲ್ಪಿಸಿದ ಪ್ರಕೃತಿಯು ಮಾನವರೊಂದಿಗೆ ನ್ಯಾಯ ತೋರದಿರಲು ಕಾರಣವೇನು? ಪ್ರಕೃತಿಯಿಂದಾದ ಈ ಅನ್ಯಾಯಕ್ಕೆ ಯಾವ ಪರಿಹಾರವನ್ನು ಅವರು ಸೂಚಿಸುತ್ತಾರೆ. ಇವುಗಳಿಗೆ ನಾಸ್ತಿಕರು ಹಾಗೂ ಧರ್ಮಾಧಿಕ್ಕಾರಿಗಳು ಉತ್ತರಿಸಬೇಕು.

## 2 ದೇವನನ್ನು ಸೃಷ್ಟಿಸಿದವರು ಯಾರು?

**ಪ್ರಪಂಚದ ಸೃಷ್ಟಿಕರ್ತನು ಓರ್ವನೆಂದೂ, ಅವನೇ ಅದನ್ನು ಸೃಷ್ಟಿಸಿದನೆಂದೂ ಧರ್ಮ ವಿಶ್ವಾಸಿಗಳಾದ ನೀವು ಹೇಳುತ್ತೀರಿ. ಹಾಗಾದರೆ ನಿಮ್ಮ ದೇವನನ್ನು ಸೃಷ್ಟಿಸಿದವರು ಯಾರು? ದೇವ ಹಾಗೂ ಧರ್ಮವು ವಿಶ್ವಾಸಕಾರ್ಯವೆಂದೂ, ಅದರ ಹೊರತು ಬುದ್ಧಿಗೆ ಇದರಲ್ಲಿ ಪ್ರಾಮುಖ್ಯತೆ ಇಲ್ಲವೆಂಬ ವಾಡಿಕೆಯ ಉತ್ತರಕ್ಕಿಂತ ಬೇರೇನಾದರೂ ಹೇಳಲಿಕ್ಕಿದೆಯೇ?**

ವಿಶ್ವದ ಕುರಿತು ಎರಡು ರೀತಿಯ ದೃಷ್ಟಿಕೋನವಿರುವವರು ಇದ್ದಾರೆ. ಒಂದನೇಯದಾಗಿ ಧರ್ಮದಲ್ಲಿ ನಂಬಿಕೆ ಇರಿಸುವವರು. ಅವರು ನಂಬಿಕೆಯಂತೆ ಪ್ರಪಂಚವನ್ನು ಸೃಷ್ಟಿಸಲಾಗಿದೆ. ದೇವನು ಅದರ ಸೃಷ್ಟಿಕರ್ತ. ಎರಡನೇಯ ವರ್ಗವನ್ನು ನಾಸ್ತಿಕರು ಎನ್ನಲಾಗುತ್ತದೆ. ಅವರು ಈ ಪ್ರಪಂಚವು ಅನಾದಿಕಾಲದಿಂದಲೂ ಅಸ್ತಿತ್ವದಲ್ಲಿದೆ ಎನ್ನುತ್ತಾರೆ. ಅದನ್ನು ಯಾರೂ ಸೃಷ್ಟಿಸಿದ್ದಲ್ಲ, ಆದ್ದರಿಂದ ಅದಕ್ಕೆ, ಆದಿಯೂ ಅಂತ್ಯವೂ ಇಲ್ಲವೆಂದು ಅವರ ವಾದ.

ಸಾವಿರದ ಐನೂರು ಅಥವಾ ಎರಡು ಸಾವಿರ ಕೋಟಿ ವರ್ಷಗಳ ಹಿಂದೆ ಪ್ರಪಂಚವು ಅತಿ ಸಾಂದ್ರತೆಯಿರುವ ಒಂದು ವಸ್ತುವಾಗಿತ್ತು ಎಂದು ಲೌಕಿಕವಾದಿಗಳು ಹೇಳುತ್ತಾರೆ. ಅಂದು ಸಾಂದ್ರತೆ ಹಾಗೂ ಶಾಖ ಪರಾಕಾಷ್ಠೆಗೆ ತಲುಪಿದಾಗ ದೊಡ್ಡ ಸ್ಫೋಟವುಂಟಾಯಿತು. ಅದು ಅಸಂಖ್ಯಾತ ಸ್ಫೋಟಗಳಿಗೆ ಕಾರಣವಾಯಿತು. ಆದಿಪದಾರ್ಥದ ತಾಪ ಹಾಗೂ ಸಾಂದ್ರತೆಯು ಮಿತಿಮೀರಿದಾಗ ಉಂಟಾದ ಘನಸ್ಫೋಟವು ಊಹಿಸಲು ಅಸಾಧ್ಯವಾದಂತಹ ಶಬ್ದವಾಗಿತ್ತು. ಹೀಗೆ ಘನಸ್ಫೋಟಗೊಂಡ ಕ್ಷಣದಲ್ಲೇ ಮೂರು ಸಾವಿರ ಕೋಟಿ ಡಿಗ್ರಿ ತಾಪಮಾನದ ಪ್ರಪಂಚದ ಸೃಷ್ಟಿಯಾಯಿತು. ನಂತರ ಅದು ವಿಕಾಸಗೊಂಡಿತು. ವಿಶಾಲವಾದುದರಿಂದ ಭೂಮಿಯ ತಾಪಮಾನ ಕಡಿಮೆಯಾಗಲಾರಂಭಿಸಿತು. ಸ್ಫೋಟದ ನಾಲ್ಕು ನಿಮಿಷಗಳ ಬಳಿಕ ನ್ಯೂಟ್ರೋನ್ ಹಾಗೂ ಪ್ರೋಟಾನುಗಳು ಸೇರಿಕೊಂಡಿತು. ಆ ಸಂಗಮವೇ ನಕ್ಷತ್ರದಿಂದ ಮಾನವರ ವರೆಗಿನ ಎಲ್ಲಾ ಸೃಷ್ಟಿಗಳ ಜನ್ಮಕ್ಕೂ ನಾಂದಿಹಾಡಿತು.

ಪ್ರಪಂಚ ನಿರ್ಮಾಣಗೊಂಡ ಕುರಿತು ಈ ವಿಚಾರಗಳು ಹಲವಾರು ಸಂಶಯಗಳನ್ನು ಉಂಟುಮಾಡುತ್ತದೆ. ಆ ಮೂಲವಸ್ತುವಿನ ತಾಪಮಾನ ಹಾಗೂ ಸಾಂದ್ರತೆಯು ಯಾವಾಗ ಪರಾಕಾಷ್ಠೆಗೆ ತಲುಪಿತು? ಅದಕ್ಕಿಂತ ಮೊದಲೇ ಅದು ಸ್ಫೋಟಗೊಳ್ಳಲಿಲ್ಲವೇಕೆ? ಅಥವಾ ನಂತರ ಸ್ಫೋಟಗೊಳ್ಳಲಿಲ್ಲವೇಕೆ? ಮೊದಲೇ ಅದರ ಶಾಖ ಹಾಗೂ ಸಾಂದ್ರತೆ ಕಾವೇರಿದ್ದರೆ ಆಗಲೇ ಸ್ಫೋಟಗೊಳ್ಳಲಿಲ್ಲವೇಕೆ? ಅಥವಾ ಮೊದಲು ಅಷ್ಟೊಂದು ತಾಪಮಾನವಿಲ್ಲದಿದ್ದರೆ ನಂತರ

ಆ ಪರಿಸ್ಥಿತಿ ಹೇಗೆ ಬಂತು? ಹೊರಗಿನ ಯಾವುದಾದರೂ ಕ್ರಿಯೆ ಅದಕ್ಕೆ ಕಾರಣವಾಯಿತೇ? ಹಾಗಾದರೆ ಇಲ್ಲಿ ಮಧ್ಯಸ್ಥಿಕೆ ವಹಿಸಿದ್ದು ಯಾವುದು? ಇಲ್ಲದಿದ್ದರೆ ತಾಪಮಾನ ಏಕಾ ಏಕಿ ಏರಲು ಕಾರಣ ಬೇಕಲ್ಲವೇ? ಮೊದಲ ಸ್ಫೋಟ ನಡೆದದ್ದು ಯಾವಾಗ? ಒಂದೇ ಆಗಿದ್ದ ಸೂರ್ಯ ಹಾಗೂ ಚಂದ್ರ ಬೇರ್ಪಟ್ಟದ್ದು ಯಾವಾಗ? ಆ ಪ್ರಕ್ರಿಯ ನಿರ್ದಿಷ್ಟ ಸಮಯದಲ್ಲೇ ನಡೆಯಲು ಕಾರಣವೇನು? ಅದು ಮುಂಚೆಯೋ ಅಥವಾ ಮೊದಲೋ ಸಂಭವಿಸಬಹುದಾಗಿತ್ತಲ್ಲಾ? ಇಂತಹ ಪ್ರಶ್ನೆಗಳಿಗೆ ನಾಸ್ತಿಕರು ಇಂದಿಗೂ ಉತ್ತರಿಸಿಲ್ಲ, ಉತ್ತರಿಸಲು ಸಾಧ್ಯವೂ ಇಲ್ಲ.

ಈ ಪ್ರಪಂಚದ ಸೃಷ್ಟಿ ಬಹಳ ಸುವ್ಯವಸ್ಥಿತವಾಗಿದೆಯೆಂದು ಎಲ್ಲರೂ ಒಪ್ಪುತ್ತಾರೆ. ವಿಶ್ವ ವ್ಯವಸ್ಥೆಯನ್ನು ಗಮನಿಸುವಾಗ ಯುಕ್ತಿಪೂರ್ಣವಾಗಿ ಹಾಗೂ ಯೋಜನಾಬದ್ಧವಾಗಿ ನಿರ್ಮಾಣಗೊಂಡಿದೆಯೆಂದು ಮನವರಿಕೆಯಾಗುತ್ತದೆ. ನಾವು ಬದುಕುವ ಈ ಪ್ರಪಂಚದಲ್ಲಿ 600 ಕೋಟಿ ಮಾನವರಿದ್ದಾರೆ. ಅವರೆಲ್ಲರೂ ಉಸಿರಾಡುವ ಗಾಳಿಯು ಒಂದೇ. ಕುಡಿಯುವ ನೀರು ಒಂದೇ ರೀತಿ, ಆಹಾರಗಳಲ್ಲೂ ವಿಶೇಷ ವ್ಯತ್ಯಾಸವಿಲ್ಲ. ಹಾಗಿದ್ದರೂ 600 ಕೋಟಿ ಜನರಿಗೆ 600 ಕೋಟಿ ರೀತಿಯ ಮುಖವಿದೆ. ನಮ್ಮಂತಹ ಒಬ್ಬರನ್ನು ಈ ಭೂಮಿಯಲ್ಲಿ ಕಾಣಲು ಸಾಧ್ಯವಿಲ್ಲ. ನಮ್ಮ ಹೆಬ್ಬೆರಳು ಎಷ್ಟು ಸಣ್ಣ ಅಂಗವಲ್ಲವೇ? ಆದರೆ 600 ಕೋಟಿ ಜನರಲ್ಲಿ ಒಬ್ಬರಿಗೂ ನಮ್ಮಂತಹ ಕೈ ಬೆರಳುಗಳಿಲ್ಲ. ಮರಣ ಹೊಂದಿದ ಕೋಟ್ಯಂತರ ಮನುಷ್ಯರಿಗೂ ಇರಲಿಲ್ಲ. ಇನ್ನು ಜನಿಸಲಿರುವವರಿಗೂ ಇರುವುದಿಲ್ಲ. ನಮ್ಮಲ್ಲಿ ಪ್ರತಿಯೊಬ್ಬರ ತಲೆಯಲ್ಲಿ ಸಾವಿರಾರೂ ಕೂದಲುಗಳಿವೆ. ಆದರೆ ವಿಶ್ವದ 600 ಕೋಟಿ ತಲೆಯ ಕೋಟ್ಯಾಂತರ ಕೂದಲುಗಳಲ್ಲಿ ಒಂದು ಕೂದಲೂ ನಮ್ಮ ಕೂದಲಿನಂತಿಲ್ಲ. ಡಿ.ಎನ್.ಎ. ಪರೀಕ್ಷೆಯ ಮೂಲಕ ಅದನ್ನು ಗುರುತಿಸಲು ಸಾಧ್ಯವಿದೆ. ನಮ್ಮ ತಲೆಯಲ್ಲಿ ಸಾವಿರಾರೂ ರಕ್ತಕಣಗಳು ಹರಿಯುತ್ತಿರುತ್ತದೆ. ಆದರೆ ಪ್ರತಿಯೊಬ್ಬರದೂ ಭಿನ್ನವಾಗಿದೆ. ನಮ್ಮ ದೇಹದ ವಾಸನೆಯೂ ಭಿನ್ನ ಭಿನ್ನವಾಗಿದೆ. ಹೀಗೆ ಅತ್ಯದ್ಭುತವಾದ, ವ್ಯವಸ್ಥಿತ ಹಾಗೂ ಯೋಜನಾಬದ್ಧವಾಗಿ ಸೃಷ್ಟಿಸಲಾದ ಪ್ರಪಂಚವನ್ನು ಕೇವಲ ಕಾಕತಾಳೀಯವಾಗಿ, ಮೂಲವಸ್ತುಗಳ ಚಲನೆಯ ಪರಿಣಾಮದಿಂದ ಉಂಟಾಯಿತೆಂದು ಹೇಳವುದು ಖಂಡಿತ ಬುದ್ಧಿವಂತಿಕೆಯಲ್ಲ. 600 ಕೋಟಿ ಮನುಷ್ಯರಿಗೆ ವಿಭಿನ್ನ ಮುಖ ಚಹರೆ, ಕೈಬೆರಳು, ದೇಹದ ವಾಸನೆ, ತಲೆಗೂದಲು ಹಾಗೂ ರಕ್ತ ಕಣಗಳನ್ನು ನೀಡಿ ಸೃಷ್ಟಿಸಿದ ಮಹಾ ಶಕ್ತಿಯೊಂದಿದೆ. ಅವನು ಸರ್ವಶಕ್ತನೂ, ಸರ್ವಜ್ಞನೂ, ಯುಕ್ತಿವಂತನೂ ಆಗಿದ್ದಾನೆಂದು ಒಪ್ಪಿಕೊಳ್ಳವುದು ಬುದ್ಧಿವಂತಿಕೆಯ ಲಕ್ಷಣವಾಗಿದೆ. ಆ ಶಕ್ತಿಯೇ ಈ ಪ್ರಪಂಚದ ದೇವನಾಗಿದ್ದಾನೆ.

ಪ್ರಪಂಚದಲ್ಲಿ ಹೊಸತೇನೂ ಸೃಷ್ಟಿಯಾಗುವುದಿಲ್ಲವೆಂದು ವಿಚಾರವಾದಿಗಳು ಹೇಳುತ್ತಾರೆ. ಹೊಸತಾಗಿ ಏನಾದರೂ ಸೃಷ್ಟಿಯಾದರೆ ಅದನ್ನುಂಟು ಮಾಡಿದವರು ಯಾರೆಂಬ ಪ್ರಶ್ನೆ ಉದ್ಭವಿಸುತ್ತದೆಯಲ್ಲವೇ? ಇಂದು ಭೂಮಿಯಲ್ಲಿರುವ ಮನುಷ್ಯರಿಗೆ ಬುದ್ಧಿ, ಪ್ರಜ್ಞೆ ಹಾಗೂ ಜ್ಞಾನವೂ ಇದೆ. ಈ ಪ್ರಜ್ಞೆ, ಬುದ್ಧಿಶಕ್ತಿ ಎಲ್ಲಿತ್ತು? ಸ್ಫೋಟಗೊಂಡ ಮೂಲವಸ್ತುವು ಅವುಗಳನ್ನೆಲ್ಲಾ

ಒಳಗೊಂಡಿತ್ತಾ? ಹಾಗಿದ್ದರೆ ಆ ಮೂಲವಸ್ತುವಿನ ಜ್ಞಾನ, ಬುದ್ಧಿಶಕ್ತಿಗೆ ಮೇರೆಯೆಂಬುದೇ ಇರಲಿಕ್ಕಿಲ್ಲ ಹಾಗಿದ್ದರೆ ಅಚೇತನವಾದ ಒಂದು ಮೂಲವಸ್ತು ಹೀಗೆ ಸರ್ವಜ್ಞವೂ, ಯುಕ್ತಿಪೂರ್ಣವೂ ಆಗಿತ್ತೇ?

ಆದ್ದರಿಂದ 600 ಕೋಟಿ ಮನುಷ್ಯರಿಗೆ ಬುದ್ದಿವಂತಿಕೆ,ಅರಿವು ಹಾಗೂ ಜ್ಞಾನವನ್ನು ನೀಡಿದ್ದು ಸರ್ವಜ್ಞನೂ ಯುಕ್ತಿವಂತನೂ ಆದ ದೇವನೆಂದು ವಿಸ್ವಾಸವಿರಿಸುವುದು ನ್ಯಾಯ ಸಮ್ಮತವಾಗಿದೆ. ಸತ್ಯನಿಷ್ಠವಾದ ಹಾಗೂ ವಿವೇಕಯುತವಾದ ನಿಲುವು ಅದುವೇ ಆಗಿದೆ.

ಅನಾದಿಯಾದ ಒಂದು ಶಕ್ತಿಯಿದೆಯೆಂದು ಎಲ್ಲರೂ ಒಪ್ಪುತ್ತಾರೆ. ಅದು ನಿರ್ಜೀವವಾದ ಮೂಲ ವಸ್ತುವೆಂದು ನಾಸ್ತಿಕರೂ, ಸರ್ವಶಕ್ತನು ಸರ್ವಜ್ಞನಾದ ದೇವನೆಂದು ಧರ್ಮ ವಿಶ್ವಾಸಿಗಳೂ ಹೇಳುತ್ತಾರೆ. ಆದಿಯೂ, ಅಂತ್ಯವು ಇಲ್ಲದ ಒಂದು ಶಕ್ತಿಯ ಕುರಿತು ಅದನ್ನು ಯಾರು ಸೃಷ್ಟಿಸಿದರು? ಅದು ಹೇಗಾಯಿತು? ಎಂದು ಕೇಳುವುದಕ್ಕೆ ಅರ್ಥವಿಲ್ಲ, ಮೂಲವಸ್ತುವನ್ನು ಯಾರುಂಟು ಮಾಡಿದರೆಂಬ ಪ್ರಶ್ನೆಯು ಅಪ್ರಸ್ತುತವೆಂದು ಹೇಳುವವರೇ, ಅನಾದಿಯಾದ ದೇವನನ್ನು ಸೃಷ್ಟಿಸಿದ್ದು ಯಾರು? ಎಂದು ಪ್ರಶ್ನಿಸುವುದು ಅರ್ಥಶೂನ್ಯವೂ ಅಸಂಬದ್ಧವೂ ಆಗಿದೆ.

ಯಾವುದೇ ವಸ್ತವೂ ನಿರ್ಮಿಸುವವನಿಲ್ಲದೆ ಉಂಟಾಗುವುದಿಲ್ಲ ಆದ್ದರಿಂದ ಮೂಲವಸ್ತುವಿನಿಂದ ಉಂಟಾದ ಪ್ರಪಂಚಕ್ಕೆ ಸೃಷ್ಟಿಕರ್ತನಿರುವುದು ಅನಿವಾರ್ಯವಾಗಿದೆ. ಅದರೆ ಪದಾರ್ಥ(ಮೂಲವಸ್ತು)ದ ನಿಯಮವೂ ಅವಸ್ಥೆಯೂ ಪದಾರ್ಥವಿಲ್ಲದಿರುವುದನ್ನು ಬಾಧಿಸುವುದಿಲ್ಲ, ದೇವನುಮೂಲವಸ್ತುವಿಗೆಅತೀತನಾಗಿದ್ದಾನೆ. ಆದ್ದರಿಂದಮೂಲವಸ್ತುಗಳಿಂದ ಸೃಷ್ಟಿಸಲಾದ ಪ್ರಪಂಚದ ಮಾನದಂಡವನ್ನು ಆಧಾರವಾಗಿಸಿ, ಪದಾರ್ಥಗಳಿಂದ ಅತೀತನಾದ ದೇವನನ್ನು ಸೃಷ್ಟಿಸಿದವನಾರೆಂಬ ಪ್ರಶ್ನೆಯೇ ಅಪ್ರಸ್ತುತವಾಗಿದೆ.

ಅನಾದಿಯೂ, ಆರಂಭವಿಲ್ಲದ, ಎಂದೆಂದಿಗೂ ಶಾಶ್ವತವಾಗಿರುವ ಒಂದು ಶಕ್ತಿ ಇರಲೇಬೇಕೆಂಬುದು ನಿರಾಕರಿಸಲಾಗದ ಸರ್ವಸಮ್ಮತ ಸತ್ಯವಾಗಿದೆ. ಅವನೇ ಸರ್ವಶಕ್ತನೂ, ಸರ್ವಪ್ರಪಂಚಗಳ ಸಂರಕ್ಷಕನೂ ಆದ ದೇವನಾಗಿದ್ದಾನೆ.

# 3 ಇಸ್ಲಾಮ್ ಮತ್ತು ಪರೋಕ್ಷ ಜ್ಞಾನ

**ಲೋಕದಲ್ಲಿ ಯಾರಿಗೂ ತಮ್ಮ ಭಾವೀ ಜೀವನದ ಕುರಿತು ಜ್ಞಾನವಿಲ್ಲವೆಂದು ತಾವು ಪೀಠಿಕೆಯಲ್ಲಿ ತಿಳಿಸಿದ್ದೀರಿ. ಆದರೆ ಜನನ ವೇಳೆಯ ನಕ್ಷತ್ರಗಳ ಆಧಾರದಲ್ಲಿ ಜಾತಕ ಫಲಗಳನ್ನು ಹೇಳಲಾಗುತ್ತದೆ. ಪ್ರಮುಖ ಜೋತಿಷಿಗಳ ಜಾತಕಗಳು ಹಲವೊಮ್ಮೆ ಸತ್ಯವಾಗುತ್ತದೆ. ಇದರ ಕುರಿತು ನೀವೇನು ಹೇಳುವಿರಿ?**

ನಮ್ಮ ಜನ್ಮ ದಿನಾಂಕ, ವೇಳೆ, ರಾಶಿ ಹಾಗೂ ನಕ್ಷತ್ರಗಳ ಆಧಾರದಲ್ಲಿ ಭವಿಷ್ಯದ ವಿವರಗಳನ್ನು ತಿಳಿಯಬಹುದೆಂಬ ಭಾವನೆ ನಮ್ಮ ಸಮಾಜದಲ್ಲಿದೆ. ನಮ್ಮಲ್ಲಿ ದಿನಂಪ್ರತಿ ಸಾವಿರಾರು ಸಂಖ್ಯೆಗಳಲ್ಲಿ ಮಾರಾಟವಾಗುವ ಹಲವು ಪತ್ರಿಕೆಗಳು ಈ ವಾರ ನಮಗೇನು ಸಂಭವಿಸುತ್ತದೆ ಎಂದು ನಮಗೆ ತಿಳಿಸಿಕೊಡುತ್ತದೆಯಲ್ಲವೇ? ಪ್ರತಿ ವಾರದಲ್ಲಿ ಸಂಭವಿಸಲಿರುವ ಘಟನೆಗಳ ವಿವರಗಳು ಮೊದಲೇ ತಿಳಿಯುವುದಿದ್ದರೆ ಅದು ಒಂದು ಮಹತ್ವಪೂರ್ಣ ಸಾಧನೆಯಾಗಿದೆ. ಅನಾವಶ್ಯಕವಾದ ಭಯ, ಗೊಂದಲಗಳಿಂದ ದೂರವಿರಲು, ಈಡೇರದ ನಿರೀಕ್ಷಗಳನ್ನು ಬೆಂಬತ್ತದಿರಲು ಹಾಗೂ ಅತ್ಯಂತ ಯೋಜನಾಬದ್ಧವಾಗಿ ಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗುತ್ತಿತ್ತು. ಆದರೆ ನಕ್ಷತ್ರಫಲಗಳಿಂದ ಇವೆಲ್ಲಾ ಸಾಧ್ಯವಿಲ್ಲವೆಂಬುದು ಒಂದು ವಾಸ್ತವಿಕತೆಯಾಗಿದೆ. ನಮ್ಮ ಮಾಜಿ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರಿಗೆ ತಮ್ಮ ಜನ್ಮ ದಿನಾಂಕ, ಸಮಯ, ರಾಶಿ, ನಕ್ಷತ್ರಗಳ ಅರಿವಿತ್ತು. ಅವರು ಜ್ಯೋತಿಷಿಗಳನ್ನು ನಿರಂತರ ಭೇಟಿಯಾಗುತ್ತಿದ್ದರು. ಆದರೆ ಸ್ವಂತ ಅಂಗರಕ್ಷಕನಿಂದ ಅವರ ಹತ್ಯೆಯಾಗುತ್ತದೆಂದು ಯಾವ ಜೋತಿಷಿಯೂ ಅವರಲ್ಲಿ ಹೇಳಿರಲಿಲ್ಲ. ರಾಜೀವ್ ಗಾಂಧಿಯವರ ಹತ್ಯೆಯೂ ತಮಿಳ್ನಾಡಿನಲ್ಲಿ ಬಾಂಬ್‌ಸ್ಫೋಟದಿಂದ ಸಂಭವಿಸುತ್ತದೆಯೆಂದು ಯಾರೂ ಹೇಳಿರಲಿಲ್ಲ. ಲಾತೂರ್‌ನಲ್ಲಿ ಸಂಭವಿಸಿದ ಭೂಕಂಪಕ್ಕೆ ಗುರಿಯಾದ ಹಾಗೂ ಸುನಾಮಿಯಲ್ಲಿ ಕೊಚ್ಚಿಹೋದ ಜನರಲ್ಲಿ ತಮ್ಮ ಜನ್ಮ ದಿನಾಂಕ, ವೇಳೆ, ರಾಶಿ ನಕ್ಷತ್ರದ ಕುರಿತು ತಿಳಿದವರಿದ್ದರು. ಜಾತಕ ಸಿದ್ಧಪಡಿಸುವ ಜೋತಿಷಿಗಳೂ ಅಲ್ಲಿದ್ದರು. ಆದರೆ ಆ ಪ್ರಕೃತಿವಿಕೋಪಗಳ ಕುರಿತು ಯಾರಿಗು ತಿಳಿಯಲಿಲ್ಲ. ಜಾತಕದಿಂದ ಭವಿಷ್ಯದ ಅರಿವಾಗುತ್ತಿದ್ದರೆ ಇಂತಹ ದುರಂತ ಸಾವು ನೋವುಗಳು ಸಂಭವಿಸುತ್ತಿರಲಿಲ್ಲ.

ಪಿ.ಜೆ. ಎಸ್ ಶಿಯಾನಿ, ಪಿ.ಕೆ ಚಕ್ರವರ್ತಿ, ಜಗಜಿತ್ ಉಪ್ಪಳ, ರಾಮನ್ ದಕ್ಕಾರ್, ಮಾಲತಿ ಸಿಸೀಕ್ಕಾರ್ ಮೊದಲಾದ ಪ್ರಖ್ಯಾತ ಜೋತಿಷಿಗಳ ಭವಿಷ್ಯದ ಕುರಿತ ಹೇಳಿಕೆಗಳು

ಯಾವುದೂ ನಿಜವಾಗಿಲ್ಲ ಎಂಬುದಕ್ಕೆ ಅನುಭವವೇ ಸಾಕ್ಷಿಯಾಗಿದೆ. ಒಂಬತ್ತನೇ ಲೋಕಸಭಾ ಚುನಾವಣೆಯಲ್ಲಿ ರಾಜೀವ್‌ಗಾಂಧಿ ಅಧಿಕಾರಕ್ಕೇರುವರೆಂದು ಉಪ್ಪಳ ರ. ಭವಿಷ್ಯ ನಿಜವಾಗಿರಲಿಲ್ಲ. ಗಲ್ಫ್ ಯುದ್ಧದ ಒಂದು ದಿನ ಮೊದಲು ಯುದ್ಧ ಸದ್ಯಕ್ಕೆ ಸಂಭವಿಸದೆಂದು ಬಜನ್ ವಾಭರುಲ ಹೇಳಿದ್ದರು. ಇಂತಹ ಘಟನೆಗಳು ನಿರಂತರ ಸಂಭವಿಸುತ್ತಲೇ ಇರುತ್ತದೆ. ಆದರೆ ಹಾಗೆ ಸುಳ್ಳಾದ ಹೇಳಿಕೆಗಳನ್ನು ಎಲ್ಲರೂ ಮರೆತು ಬಿಡುತ್ತಾರೆ. ಅಲ್ಲದೆ ಕಾಕತಾಳೀಯವಾಗಿ ಅಥವಾ ವ್ಯಾಖ್ಯಾನಿಸಿ ಒಪ್ಪಿಸುವಂತಹ ಹೇಳಿಕೆಗಳಿಗೆ ವ್ಯಾಪಕ ಪ್ರಚಾರ ದೊರೆಯುತ್ತದೆ. ಭೋಪಾಲ ಅಣು ದುರಂತದ ಕುರಿತು, ಬಾಂಗ್ಲಾದ ಭೀಕರ ಬಿರುಗಾಳಿ ಹಾಗೂ ಇರಾನ್ ಭೂಕಂಪದ ಬಗ್ಗೆ ಮುನ್ನೆಚ್ಚರಿಕೆ ನೀಡಲು ಓರ್ವ ಜೋತಿಷಿಗೂ, ಭವಿಷ್ಯಗಾರನಿಗೂ, ಕಣಿ ಹೇಳುವವನಿಗೂ ಸಾಧ್ಯವಾಗಿರಲಿಲ್ಲವೆಂಬುದು ಇತಿಹಾಸ. ಇಂದಿಗೂ ಈ ಪರಿಸ್ಥಿತಿ ಮುಂದುವರಿದಿದೆ.

ಅಜ್ಞಾನ, ಮೂಢನಂಬಿಕೆ ಹಾಗೂ ಭವಿಷ್ಯದ ಬಗ್ಗೆ ತಿಳಿದುಕೊಳ್ಳುವ ಆತುರಗಳಿಂದ ಜನರು ಜೋತಿಷಿಗಳ ಮೊರೆ ಹೋಗುತ್ತಾರೆ. ಸುಶಿಕ್ಷಿತರು, ಬುದ್ಧಿ ಜೀವಿಗಳು, ವಿಜ್ಞಾನಿಗಳು, ಆಡಳಿತಗಾರರು ಹಾಗೂ ಸಾಮಾಜಿಕ ನೇತಾರರು ಇದರಿಂದ ಹೊರತಲ್ಲ. ಆದ್ದರಿಂದ ಜೋತಿಷಿಗಳಲ್ಲಿ ಪರೋಕ್ಷ ಜ್ಞಾನವಿದೆ, ಅವರು ಭವಿಷ್ಯದ ಕುರಿತು ತಿಳಿದಿದ್ದಾರೆ ಎಂಬ ನಂಬಿಕೆ ಬಲವಾಗಿದೆ. ಆದರೆ ಪ್ರಪಂಚದ ಸೃಷ್ಟಿಕರ್ತನ ಹೊರತು ಯಾರಿಗೂ ಪರೋಕ್ಷ ಜ್ಞಾನವಿಲ್ಲ, ಭವಿಷ್ಯದಲ್ಲಿ ಏನು ನಡೆಯುತ್ತದೆಂದು ಯಾರಿಗೂ ತಿಳಿಯಲು ಸಾಧ್ಯವಿಲ್ಲವೆಂದು ಇಸ್ಲಾಮ್ ಸ್ಪಷ್ಟಪಡಿಸುತ್ತದೆ. ದೂರದಲ್ಲಿರುವ ಅತ್ತಿಮರದಲ್ಲಿ ಹಣ್ಣು ಇಲ್ಲವೆಂದು ತಿಳಿಯಲು ಸಾಧ್ಯವಾಗದ್ದರಿಂದ ಏಸುಕ್ರಿಸ್ತರು ತನ್ನ ಅನುಚರರನ್ನು ಅದರ ಬಳಿಗೆ ಕರೆದೊಯ್ದರು. ಪ್ರವಾದಿ ಪತ್ನಿ ಆಯಿಶಾ(ರ)ರ ವಿರುದ್ಧ ವ್ಯಭಿಚಾರದ ಆರೋಪ ಉಂಟಾದಾಗ ಅದು ದೊಡ್ಡ ಸುಳ್ಳೆಂದು ಹೇಳಲು ಪ್ರವಾದಿ ಮುಹಮ್ಮದ್(ಸ)ರಿಗೆ ಸಾಧ್ಯವಾಗಲಿಲ್ಲ, ದೇವವಾಣಿ ಬಂದ ಬಳಿಕವೇ ಅದು ಸುಳ್ಳಾರೋಪವೆಂದು ಪ್ರವಾದಿಯವರಿಗೆ ಮನವರಿಕೆಯಾಯಿತು. ಶ್ರೀ ರಾಮನಿಗೆ ಕಾಡಿನಲ್ಲಿ ಹುಟ್ಟಿ ಬೆಳೆದ ತನ್ನ ಮಕ್ಕಳಾದ ಲವ-ಕುಶರು ಎದುರು ಬಂದು ರಾಮಚರಿತ ಪಠಿಸಿದರೂ ಗುರುತಿಸಲಾಗಲಿಲ್ಲ, ತನ್ನ ಪತ್ನಿ ಲಂಕಾದಲ್ಲಿರುವಾಗ ಪರೋಕ್ಷ ಜ್ಞಾನದಿಂದ ರಾಮನಿಗೆ ಅದನ್ನು ಕಂಡು ಹಿಡಿಯಲಾಗಲಿಲ್ಲ. ಪ್ರವಾದಿಗಳು, ಮಹಾಪುರುಷರಿಗೂ ಪರೋಕ್ಷ ಜ್ಞಾನವಿಲ್ಲವೆಂದು, ಭವಿಷ್ಯದ ಬಗ್ಗೆ ಅವರಿಗೇನೂ ತಿಳಿದಿರುವುದಿಲ್ಲವೆಂದು ಇಂತಹ ಘಟನೆಗಳೇ ಸಾಬೀತು ಪಡಿಸಿದೆ.

ಪರೋಕ್ಷ ಜ್ಞಾನವು ಸೃಷ್ಟಿಕರ್ತನಾದ ದೇವನಿಗೆ ಹೊರತು ಬೇರಾರಿಗೂ ಇಲ್ಲವೆಂಬುದು ಇಸ್ಲಾಮ್‌ನ ಮೂಲಭೂತ ವಿಶ್ವಾಸವಾಗಿದೆ. ಕುರ್‌ಆನ್ ಹೇಳುತ್ತದೆ: **'ಇವರೊಡನೆ ಹೇಳಿರಿ, ಭೂಮಿ ಆಕಾಶಗಳಲ್ಲಿ ಪರೋಕ್ಷ ಜ್ಞಾನವುಳ್ಳವರು ಅಲ್ಲಾಹನ ಹೊರತು ಯಾರೂ ಇಲ್ಲ.'**

**(ಪವಿತ್ರ ಕುರ್‌ಆನ್ 27:65)**

**''ಓ ಪೈಗಂಬರರೇ, ಇವರೊಡನೆ ಹೇಳಿರಿ ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ, ನಾನು ಪರೋಕ್ಷ ಜ್ಞಾನಿಯೂ ಅಲ್ಲ.''(ಕುರ್‌ಆನ್ 6:50)**

ನಮ್ಮ ಕಾಲದಲ್ಲಿ ವಿಶ್ವದ ಇತರೆಡೆಗಳಂತೆ ಮಹಾಪುರುಷರಿಗೆ ಪರೋಕ್ಷ ಜ್ಞಾನ ಲಭಿಸುತ್ತದೆಯೆಂಬ ಮೂಢನಂಬಿಕೆ ಜನರಲ್ಲಿ ನೆಲೆನಿಂತಿತ್ತು. ಆದ್ದರಿಂದ ಎಲ್ಲಾ ಪ್ರವಾದಿಗಳು ಜನರ ನಂಬಿಕೆಯನ್ನು ತಿದ್ದಿ, ಅಂಥ ವಿಶ್ವಾಸವನ್ನು ಕೊನೆಗೊಳಿಸಲು ಪ್ರಯತ್ನಿಸಿದ್ದರು. ದೇವ ಸಂದೇಶವಾಹಕರಾಗಿರುವ ನಾನೂ ಸೇರಿದಂತೆ ಯಾರಿಗೂ ಪರೋಕ್ಷ ಜ್ಞಾನವಿಲ್ಲವೆಂದು ಪ್ರವಾದಿಗಳು ಹೇಳುತ್ತಿದ್ದರು. ದೇವ ಸಂದೇಶ ವಾಹಕರಾದ ನೂಹ್(ಅ) ತನ್ನ ಜನತೆಯೊಡನೆ ಹೇಳಿದರು: **''ನನ್ನಲ್ಲಿ ಅಲ್ಲಾಹನ ಖಜಾನೆಗಳಿವೆಯೆಂದು ನಾನು ನಿಮ್ಮೊಡನೆ ಹೇಳುವುದಿಲ್ಲ, ನಾನು ಪರೋಕ್ಷ ಜ್ಞಾನಿಯೂ ಅಲ್ಲ.'' (ಪವಿತ್ರ ಕುರ್‌ಆನ್ 11:31)**

ಆದ್ದರಿಂದ ನಮ್ಮ ಅವಯವಗಳಿಗೆ ಅತೀತವಾದ ಪರೋಕ್ಷಜ್ಞಾನ ದೇವದೂತರಿಗೋ, ಸಂತರಿಗೋ, ಸ್ವಘೋಷಿತ ದೇವಮಾನವರಿಗೋ, ಜ್ಯೋತಿಷಿಗಳಿಗೋ, ಭವಿಷ್ಯ ಕಾರರಿಗೋ ಇಲ್ಲ. ಇದೆಯಂದು ವಾದಿಸುವುದು ಮಿಥ್ಯವಾದವಾಗಿದೆ. ನಕ್ಷತ್ರಫಲ, ಶಕುನ ನೋಡುವುದು, ಜ್ಯೋತಿಷ್ಯ ಎಲ್ಲವೂ ಮೂಢನಂಬಿಕೆಯಾಗಿದೆ.

ನಕ್ಷತ್ರ ಫಲವು ಸುಳ್ಳು ಮತ್ತು ಮಹಾವಂಚನೆಯೆಂದು ಸ್ವಾಮಿ ದಯಾನಂದ ಸರಸ್ವತಿ ಪ್ರತಿಪಾದಿಸಿದ್ದಾರೆ. ಸರಳವಾಗಿ ಪ್ರಶ್ನೋತ್ತರ ರೂಪದಲ್ಲಿ ಅವರು ವಿವರಿಸಿದ್ದಾರೆ.

ಪ್ರಶ್ನೆ: ರಾಜ ಹಾಗೂ ಪ್ರಜೆಗಳು ತುಂಬಿರುವ ಈ ಲೋಕದಲ್ಲಿ ಹಲವರು ಸುಖದ ಸುಪ್ಪತ್ತಿಗೆಯಲ್ಲೂ, ಇನ್ನು ಕೆಲವರು ದುಃಖಿತರಾಗಿಯೂ ಕಂಡುಬರುವುದಕ್ಕೆ ಅವರ ಗ್ರಹಗತಿಗಳು ಕಾರಣವಲ್ಲವೇ?

ಉತ್ತರ: ಖಂಡಿತಾ ಅಲ್ಲ, ಅದು ಅವರ ಪಾಪ ಮತ್ತು ಪುಣ್ಯದ ಫಲವಾಗಿದೆ

ಪ್ರಶ್ನೆ: ಜ್ಯೋತಿಷ್ಯ ಶಾಸ್ತ್ರದ ಕುರಿತು ಏನು ಹೇಳುವಿರಿ?

ಉತ್ತರ: ಆ ಶಾಸ್ತ್ರವು ಒಳಗೊಂಡಿರುವ ಅಂಕಗಣಿತ, ರೇಖಾಗಣಿತ, ಬೀಜಗಣಿತ ಮೊದಲಾದ ಗಣಿತಭಾಗಗಳೆಲ್ಲವೂ ಸರಿಯಾಗಿದೆ. ಆದರೆ ಅದರಿಂದ ದೊರಕುವ ಫಲವು ಮಾತ್ರ ದೊಡ್ಡ ಸುಳ್ಳು.

ಪ್ರಶ್ನೆ: ಜಾತಕವು ನಿಷ್ಪ್ರಯೋಜಕವೇ?

ಉತ್ತರ: ಅದಕ್ಕೆ ಜನ್ಮ ಜಾತಕ ಎಂದು ಹೇಳುವುದು ಸರಿಯಲ್ಲ, ಶೋಕ ಪತ್ರ ಎನ್ನಬೇಕಾಗಿದೆ. ಏಕೆಂದರೆ ಒಂದು ಮಗುವಿನ ಜನನವು ಎಲ್ಲರನ್ನೂ ಸಂತಸಪಡಿಸುತ್ತದೆ. ಆದರೆ ಆ ಸಂತೋಷ ಮಗುವಿನ ಜಾತಕ ಪರಿಶೀಲಿಸಿ ಗ್ರಹಗತಿ ಹಾಗೂ ಭವಿಷ್ಯವನ್ನು ತಿಳಿದುಕೊಳ್ಳುವವರೆಗೆ ಮಾತ್ರ ಉಳಿಯುವುದು. ಮಗುವಿನ ಜಾತಕವನ್ನು ಬರೆಯಬೇಕೆಂದು ಜ್ಯೋತಿಷಿಗಳು ಮಗುವಿನ ತಂದೆಯೊಡನೆ ಹೇಳುವಾಗ ತಂದೆಯು ಬಹಳ ವಿಶೇಷವಾದ ಜಾತಕವನ್ನು ಬರೆಯುವಂತೆ ವಿನಂತಿಸುತ್ತಾರೆ. ಮಗುವಿನ ಮನೆಯವರು ಶ್ರೀಮಂತರಾಗಿದ್ದರೆ ಕೆಂಪು ಹಾಗು ಹಳದಿ ಬಣ್ಣದ ಗೆರೆಗಳು,ಮತ್ತು ಚಿತ್ರಗಳಿಂದ ಅದನ್ನು ಆಕರ್ಷಕಗೊಳಿಸಲಾಗುತ್ತದೆ. ಬಡವರಾಗಿದ್ದರೆ ಸಾಮಾನ್ಯ ರೀತಿಯಲ್ಲಿ ಜಾತಕವನ್ನು ಬರೆದು ಓದಿ ಹೇಳಲಾಗುತ್ತದೆ. ಆಗ ಮಗುವಿನ ಹೆತ್ತವರು

ನಮ್ಮ ಮಗುವಿನ ಜಾತಕ ಉತ್ತಮವಾಗಿದೆಯಲ್ಲವೇ ಎಂದು ಜ್ಯೋತಿಷಿಯೊಡನೆ ಕೇಳುತ್ತಾರೆ. ಆಗ ಜ್ಯೋತಿಷಿಯು 'ಇರುವುದನ್ನೆಲ್ಲಾ ನಾನು ಓದಿ ಕೇಳಿಸುತ್ತೇನೆ. ಇದು ಇವನ ಜನ್ಮಗ್ರಹ. ಗ್ರಹಗಳು ಶುಭಕರವಾಗಿದೆ. ಇದರಿಂದ ಅವನು ಶ್ರೀಮಂತನಾಗುತ್ತಾನೆ. ಯಾವುದೇ ಸಭೆ ಸಮಾರಂಭಗಳಲ್ಲಿ ಅವನ ತೇಜಸ್ಸು ಇತರರಿಗಿಂತ ಮೇಲ್ಪಟ್ಟದ್ದಾಗಿರುತ್ತದೆ. ಆರೋಗ್ಯವಂತನೂ, ರಾಜಂದಿರಿಂದ ಗೌರವಿಸಲ್ಪಡುವವನೂ ಆಗುತ್ತಾನೆ ಎನ್ನುತ್ತಾರೆ. ಇದು ಕೇಳಿ ಮಗುವಿನ ತಂದೆ ಸಂತೋಷದಿಂದ 'ಖುಷಿಯಾಯಿತು ಜ್ಯೋತಿಷಿಗಳೆ ತುಂಬಾ ಧನ್ಯವಾಗಳು' ಎನ್ನುತ್ತಾನೆ. ಆದರೆ ಇದರಿಂದ ತನಗೇನೂ ಲಾಭವಿಲ್ಲವೆಂದು ಜ್ಯೋತಿಷಿಗೆ ತಿಳಿದಿದೆ. ಆದ್ದರಿಂದ ಜ್ಯೋತಿಷಿಯು ಪುನಃ ಮುಂದುವರಿಸತ್ತಾನೆ, ''ಹೇಳಿರುವ ಗ್ರಹಗಳೆಲ್ಲಾ ಬಹಳ ಶುಭಕರವಾಗಿದೆ. ಆದರೆ ಈ ಶುಭಗ್ರಹಗಳು ಕೆಲವು ಕಡೆಗಳಲ್ಲಿ ಕ್ಷುದ್ರಗ್ರಹದೊಂದಿಗೆ ಸೇರಿಕೊಂಡಿದೆ. ಆದ್ದರಿಂದ ಈ ಮಗುವಿಗೆ ಎರಡು ವರ್ಷದಲ್ಲಿ ಮೃತ್ಯುಯೋಗವಿದೆ.'' ಇದನ್ನು ಕೇಳಿದ ಹೆತ್ತವರ ಪುತ್ರ ಜನನದ ಸಂತೋಷ ಮಾಯವಾಗಿ ಶೋಕ ತಪ್ತವಾಗುತ್ತದೆ. ಗಾಬರಿಯಿಂದ ಇದಕ್ಕೇನಾದರೂ ಪರಿಹಾರವಿದೆಯೇ? ಎಂದು ಕೇಳುವಾಗ, ಅದಕ್ಕೆ ಪರಿಹಾರವಿದೆ. ನೀವು ದಾನ ಧರ್ಮಗಳನ್ನು ಮಾಡಬೇಕು, ಗೃಹ ಶಾಂತಿಗಾಗಿ ಮಂತ್ರಗಳನ್ನು ಜಪಿಸಬೇಕು. ದಿನಂಪ್ರತಿ ಬ್ರಾಹ್ಮಣರ ಕಾಲು ತೊಳೆದು ಹೊಟ್ಟೆ ತುಂಬಾ ಅನ್ನ ಬಡಿಸಬೇಕು. ಹೀಗೆ ಮಾಡಿದರೆ ನಿಮಗೆದುರಾಗಲಿರುವ ಸಂಕಷ್ಟ ಮಾಯವಾಗಬಹುದು ಎಂದು ಜ್ಯೋತಿಷಿಗಳು ಹೇಳುತ್ತಾರೆ.

ಇಲ್ಲಿ ಜ್ಯೋತಿಷಿಯು 'ಬಹುದು' ಎಂಬ ಶಬ್ಧವನ್ನು ಬಹಳ ಎಚ್ಚರಿಕೆಯಿಂದ ಬಳಸಿದ್ದಾನೆ. ಒಂದು ವೇಳೆ ಮಗು ತೀರಿಕೊಂಡರೆ ಹೀಗೆ ಹೇಳಬಹುದು, 'ನಮ್ಮಿಂದೇನು ಮಾಡಲು ಸಾಧ್ಯ? ಪರಮೇಶ್ವರನಿಗಿಂತ ದೊಡ್ಡವರು ಯಾರೂ ಇಲ್ಲ, ನಾವು ತುಂಬಾ ಪ್ರಯತ್ನಿಸಿದೆವು, ನೀವೂ ಪ್ರಯತ್ನ ಪಟ್ಟಿರಿ. ಆದರೆ ಅವನ ಕರ್ಮಫಲವೇ ಅಷ್ಟು, ಮಗು ಬದುಕುಳಿದರೆ ಹೀಗೂ ಹೇಳಬಹುದು- ನಮ್ಮ ಜಪತಪಗಳ, ದೇವರುಗಳ ಹಾಗೂ ಬ್ರಾಹ್ಮಣರ ಶಕ್ತಿ ಎಷ್ಟು ಅದ್ಭುತವಾಗಿದೆ, ಅದು ನಿಮ್ಮ ಮಗುವನ್ನು ರಕ್ಷಿಸಲಿಲ್ಲವೇ? ಫಲ ಉಂಟಾಗದಿದ್ದರೆ ನೀವು ಧೂರ್ತರಿಗೆ ನೀಡಿದ ಹಣದ ಇಮ್ಮಡಿ ಅಥವಾ ಅದಕ್ಕಿಂತ ಹೆಚ್ಚು ಹಣವನ್ನು ಮರಳಿ ಪಡೆಯಬೇಕು. ಮಗು ಜೀವಂತ ಇದ್ದರೂ ಮರಳಿ ಪಡೆಯಬೇಕು. ಏಕೆಂದರೆ ಜ್ಯೋತಿಷಿಗಳೇ ಹೇಳುವಂತೆ ಅದು ಅವರ ಕರ್ಮಫಲ. ದೇವರ ವಿಧಿನಿಯಮಗಳನ್ನು ಉಲ್ಲಂಘಿಸುವ ಶಕ್ತಿ ಯಾರಿಗೂ ಇರುವುದಿಲ್ಲ, ಒಟ್ಟನಲ್ಲಿ ಆತನ ಕರ್ಮಫಲ ಮತ್ತು ಈಶ್ವರನ ನಿಯಮವೇ ಅವನನ್ನು ರಕ್ಷಿಸಿದೆ. ನಿಮ್ಮ ಶೌರ್ಯಗಳಿಂದಲ್ಲ ಎಂದು ಯಜಮಾನನಿಗೆ ಜ್ಯೋತಿಷಿಯೊಡನೆ ಹೇಳಬಹುದಲ್ಲವೇ? ದಾನ ಧರ್ಮ ಮತ್ತು ಪುಣ್ಯಕರ್ಮಾದಿಗಳಿಂದ ಗ್ರಹಗತಿಗಳನ್ನು ಬದಲಿಸಿದ್ದೇವೆಂದು ಹೇಳಿಕೊಳ್ಳುವವರೊಡನೆ ಜ್ಯೋತಿಷಿಗೆ ಹೇಳಿದಂತೆ ಹೇಳಬೇಕು. (ಸತ್ಯಾರ್ಥ ಪ್ರಕಾಶ, ಆರ್ಯ ಪ್ರಾದೇಶಿಕ ಪ್ರತಿನಿಧಿ ಸಭೆ, ಪಂಜಾಬ್ ಪುಟ:45–47)

ಜ್ಯೋತಿಷಿಗಳ ವಂಚನೆಯನ್ನು ಸ್ಪಷ್ಟಪಡಿಸಲು ಸ್ವಾಮಿ ವಿವೇಕಾನಂದರು ಒಂದು ಕಥೆ ಹೇಳುತ್ತಾರೆ: ಜ್ಯೋತಿಷಿಯೊಬ್ಬರು ಓರ್ವ ರಾಜನಲ್ಲಿ ತಾವು ಆರು ತಿಂಗಳಲ್ಲಿ ಮರಣ ಹೊಂದುವಿರೆಂದು ಭವಿಷ್ಯ ನುಡಿದ. ಅದನ್ನು ಕೇಳಿ ರಾಜ ಆಗಲೇ ಸಾಯುವ ಸ್ಥಿತಿಗೆ ಬಂದು ತಲುಪಿದ. ರಾಜನ ಸ್ಥಿತಿಯನ್ನು ಕಂಡು ಮರುಕಗೊಂಡ ಮಂತ್ರಿಯು ಆ ಜ್ಯೋತಿಷಿಯ ಮಾತು ಶತ ಸುಳ್ಳು ಎಂದು ಸಮಜಾಯಿಸಲು ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ, ಮಂತ್ರಿಯು ಜ್ಯೋತಿಷಿಯೊಡನೆ ನೀವು ಈಗಲೂ ನಿಮ್ಮ ಭವಿಷ್ಯವಾಣಿಯಲ್ಲಿ ಸ್ಥಿರವಾಗಿದ್ದೀರಾ? ಎಂದು ಪ್ರಶ್ನಿಸುತ್ತಾನೆ. ಜೋತಿಷಿಯು ಪುನಃ ಜಾತಕ ನೋಡಿ ಕಳೆದು ಕೂಡಿಸಿ ತನ್ನ ಮೊದಲ ವಾದದಲ್ಲೇ ಸ್ಥಿರವಾಗುತ್ತಾನೆ. ಆಗ ಮಂತ್ರಿಯು ಜ್ಯೋತಿಷಿಯೊಡನೆ ನಿಮ್ಮ ಮರಣ ಯಾವಾಗ ಸಂಭವಿಸುವುದೆಂದು ಕೇಳುತ್ತಾನೆ. ಆಗ ಜ್ಯೋತಿಷಿಯು 12 ವರ್ಷದ ಬಳಿಕ ನನ್ನ ಮರಣ ಸಂಭವಿಸುತ್ತದೆ ಎನ್ನುತ್ತಾನೆ. ತಟ್ಟನೆ ಮಂತ್ರಿ ತನ್ನ ಒರೆಯಿಂದ ಕತ್ತಿ ತೆಗೆದು ಜ್ಯೋತಿಷಿಯ ನೇರಕ್ಕೆ ಬೀಸುತ್ತಾನೆ. ಜ್ಯೋತಿಷಿ ಕುಸಿದು ಬಿದ್ದಾಗ ಮಂತ್ರಿ ರಾಜನೊಡನೆ ಹೇಳುತ್ತಾನೆ. ''ಈಗ ನಿಮಗೆ ನಿಜಸಂಗತಿ ಅರ್ಥವಾಯಿತಲ್ಲವೇ? ಅವನು ಮಹಾ ಸುಳ್ಳುಗಾರನೆಂದು ತಿಳಿದಿರಲಿಲ್ಲವೇ? 12 ವರ್ಷ ಬದುಕುತ್ತೇನೆಂದು ಹೇಳಿದ ವ್ಯಕ್ತಿ ಈಗಲೇ ಸತ್ತು ಬಿದ್ದನಲ್ಲಾ'' (ವಿವೇಚನಾ ಕಾಂಡ, ಸಾಹಿತ್ಯ ಸಂಪದ ಭಾಗ-4 ಪುಟ-87)

ಸ್ವಾಮಿ ವಿವೇಕಾನಂದರು ಹೇಳುತ್ತಾರೆ: ವಿಧಿಯ ಕುರಿತು ಹೆಚ್ಚಾಗಿ ವಯಸ್ಸಾದವರು ಆತಂಕಪಡುತ್ತಾರೆ.ಯುವಜನಾಂಗವು ಜ್ಯೋತಿಷಿಗಳನ್ನು ಆಶ್ರಯಿಸುವುದು ಕಡಿಮೆ. ಗ್ರಹಗಳು ನಮ್ಮ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿರಬಹುದು. ಆದರೆ ನಾವು ಅದಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಬಾರದು. ಜ್ಯೋತಿರ್ಗಣಗಳು ಬಂದರೂ ಅದರಿಂದ ದೋಷವೇನು? ಒಂದು ನಕ್ಷತ್ರಕ್ಕೆ ನಮ್ಮ ಜೀವನವನ್ನು ಬುಡಮೇಲುಗೊಳಿಸಲು ಸಾಧ್ಯವಿದೆಯಂದಾದರೆ ನಮ್ಮ ಜೀವನಕ್ಕೆ ಕಿಂಚಿತ್ತೂ ಬೆಲೆ ಇಲ್ಲ, ಜೋತಿಷ್ಯ ಹಾಗೂ ಅದರಂತಹ ನಿಗೂಢ ವಿದ್ಯೆಗಳು ದುರ್ಬಲ ಮನದ ಚಿಹ್ನೆಗಳಾಗಿವೆಯಂದು ನಿಮಗೆ ತಿಳಿಯಬಹುದು. ದುರ್ಬಲ ಚಿಂತನೆಗಳು ಮನವನ್ನು ಕೊರೆಯಲಾರಂಭಿಸುವಾಗ ತಜ್ಞವೈದ್ಯರಿಂದ ಚಿಕಿತ್ಸೆ, ಉತ್ತಮ ಆಹಾರ ಸೇವನೆ ಹಾಗೂ ವಿಶ್ರಾಂತಿ ಪಡೆಯಬೇಕು (ವಿಮೋಚನಾ ಕಾಂಡ, ಸಾಹಿತ್ಯ ಸಂಪದ ಭಾಗ-4 ಪುಟ-86)

# 4 ದೇವರ ಅವತಾರ ಸತ್ಯವೊ ಮಿಥ್ಯವೊ?

**ದೇವರ ಅವತಾರ ಎಂಬುದನ್ನು ನೀವು ಒಪ್ಪುವುದಿಲ್ಲವೇ? ದೇವರು ವಿವಿಧ ರೂಪಗಳಲ್ಲಿ ಅವತಾರ ತಾಳುತ್ತಾನೆಂಬ ವಿಶ್ವಾಸ ಇಸ್ಲಾಮಿನಲ್ಲಿಲ್ಲವೇ.?**

ಇಸ್ಲಾಮೀ ದೃಷ್ಟಿಕೋನದಂತೆ ದೇವರು ಒಬ್ಬನೇ. ಅವನಿಗೆ ಆದಿಯೂ, ಅಂತ್ಯವೂ ಇಲ್ಲ, ಅವನು ಅದೃಶ್ಯನಾಗಿದ್ದಾನೆ. ನಿರಾಕಾರನೂ, ಸರ್ವಶಕ್ತನೂ, ಸರಿಸಾಟಿಯಿಲ್ಲದವನೂ ಜನನ ಹಾಗೂ ಮರಣಗಳು ಇಲ್ಲದವನೂ ಆಗಿದ್ದಾನೆ. ಆದರೆ ನೀವು 'ಅವತಾರ' ಎಂದು ವಾದಿಸುವ ಎಲ್ಲವುಗಳಿಗೂ ಜನನ, ಮರಣಗಳಿವೆ. ರೂಪವೂ ಇದೆ. ಸ್ಥಳ ಹಾಗೂ ಕಾಲದೊಂದಿಗೆ ಸಂಬಂಧವಿದೆ. ಮಿತಿ ಮೇರೆಗಳೂ ಇವೆ. ಆದರೆ ದೇವನು ಇವೆಲ್ಲವುಗಳಿಗೂ ಮೀರಿದವನು. ಆದ್ದರಿಂದ 'ಅವತಾರ' ಎಂಬ ನಂಬಿಕೆಯನ್ನು ಇಸ್ಲಾಮ್ ತೀವ್ರವಾಗಿ ವಿರೋಧಿಸುತ್ತದೆ.

ಆದರೆ ಇಸ್ಲಾಮ್ ಮಾತ್ರ ಈ ವಾದವನ್ನು ವಿರೋಧಿಸುವುದಲ್ಲ, ಹಿಂದೂ ಧರ್ಮದ ಸಿದ್ಧಾಂತವೂ 'ಅವತಾರ' ಎಂಬ ಕಲ್ಪನೆಗೆ ವಿರುದ್ಧವಾಗಿದೆ. ಅದು ಹಿಂದೂ ಧರ್ಮದ ವಿಶ್ವಾಸದ ಭಾಗವೇ ಅಲ್ಲ, ಕಾಲಕ್ರಮೇಣ ಸೇರಿಕೊಂಡ ವಿಚಾರಗಳಾಗಿವೆ. ದೇವರು ಮಾನವ ಶರೀರಕ್ಕೆ ರೂಪಗೊಳ್ಳುತ್ತದೆಂಬ ವಿಶ್ವಾಸವನ್ನು ಭಗವದ್ಗೀತೆ ಬಲವಾಗಿ ಖಂಡಿಸುತ್ತದೆ.

**ಅವಜಾನಂತಿ ಮಾಂ ಮೂಢಾ ಮಾನುಷಿಂ ತನುಮಾಶ್ರಿತಮ್।**
**ಪರಂ ಭಾವಮಜಾನಂತೋ ಮಮ ಭೂತ ಮಹೇಶ್ವರಮ್॥**
**ಮೋಘಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ।**
**ರಾಕ್ಷಸೀ ಮಾಸುರೀಂ ಚೈವ ಪ್ರಕೃತ್ತಿಂ ಮೋಹಿನೀಂ ಶ್ರೀತಾಃ**

(ಅಧ್ಯಾಯ-9. ರಾಜ ವಿದ್ಯಾರಾಜ ಗುಹ್ಯಯೋಗ : ಶ್ಲೋಕ: 11-12)

ಇಡೀ ಮಾನವ ಕೋಟಿಗೆ ಮಹೇಶ್ವರನಾದ ನನ್ನ ಪರಮಭಾವವನ್ನು ತಿಳಿಯದ ಮೂಢರು ಮನುಷ್ಯರೂಪವನ್ನು ಅರ್ಥಾತ್ ಮಾನವ ಶರೀರವನ್ನು ಧರಿಸಿರುವ ಪರಮಾತ್ಮನಾದ ನನ್ನನ್ನು ಕೀಳಾಗಿ ಕಾಣುತ್ತಾರೆ. (ಇನ್ನೊಂದೆಡೆಯೂ ಇದೇ ಶ್ಲೋಕ ಪುನರಾವರ್ತನೆಯಾಗಿದೆ )

ನಮ್ಮ ದೇಶದಲ್ಲಿ ದೇವರ ಅವತಾರವೆಂದು ಭಾವಿಸಿ ಆರಾಧಿಸಲಾಗುತ್ತಿರುವ ಬ್ರಹ್ಮ, ವಿಷ್ಣು, ಶಿವ, ಶ್ರೀ ರಾಮ, ಶ್ರೀ ಕೃಷ್ಣರ ಕುರಿತು ಪ್ರಮುಖ ವೇದ ಪಂಡಿತರಾದ ವಾಗ್ಬಟಾನಂದ ಗುರು ಹೇಳುತ್ತಾರೆ,

**'ಸೃಷ್ಟಿಸಿತ್ಯಂತಕರಣೀಂ ಬ್ರಹ್ಮ ವಿಷ್ಣು ಶಿವಾತ್ಮಿಕಾಂ**
**ಸ ಸಂಜ್ಞಾಯಾತಿ ಭಗವಾನೇಕ ಏವ ಮಹೇಶ್ವರ.'** (ವಿಷ್ಣುಪುರಾಣ: 1-2-66)

ಅರ್ಥ: ಸೃಷ್ಟಿ, ಸ್ಥಿತಿ, ಸಂಹಾರಗಳು ನಡೆಸುವುದರಿಂದ ಏಕನಾದ ದೇವನನ್ನು ಬ್ರಹ್ಮನೆಂದೂ, ವಿಷ್ಣುವೆಂದೂ, ಶಿವನೆಂದೂ ಕರೆಯಲಾಗುತ್ತದೆ.

ಇದರಿಂದ ಪೌರಾಣಿಕರ ನಡುವೆಯೂ ಏಕದೇವ ವಿಶ್ವಾಸವಿರುವುದೆಂದು ಅನಾಯಾಸ ವಾಗಿ ಗ್ರಹಿಸಬೇಕು. ಸತ್ಯ ಸಂಗತಿ ಹೀಗಿದ್ದರೂ ಪ್ರಾಚೀನ ಕಾಲದಿಂದಲೂ ಬಹುಸಂಖ್ಯಾತ ಜನರು ಬ್ರಹ್ಮ, ವಿಷ್ಣು, ಮಹೇಶ್ವರನನ್ನು ಬೇರೆ ಬೇರೆ ದೇವರೆಂದು ನಂಬುತ್ತಿದ್ದಾರಲ್ಲವೇ? ಇದಕ್ಕೆ ಕಾರಣವೇನಾದರೂ ಇದೆಯಾ? ಎಂದು ಕೇಳಲಾಗುತ್ತದೆ. ನಾನು ಅದಕ್ಕೆ ಸ್ವಲ್ಪ ಸ್ಪಷ್ಟೀಕರಣ ನೀಡ ಬಯಸುತ್ತೇನೆ. ಹಿಂದೆ ಬ್ರಹ್ಮ, ವಿಷ್ಣು, ಶಿವ ಹಾಗೂ ಇನ್ನಿತರ ಕೆಲವು ವ್ಯಕ್ತಿಗಳಿದ್ದರು. ಅವರೆಲ್ಲರೂ ಧಾರ್ಮಿಕ ವಿಶ್ವಾಸವುಳ್ಳವರಾಗಿದ್ದು, ಬೌದ್ಧ ಧರ್ಮದ ಪ್ರಚಾರದಿಂದ ನೆಲಕಚ್ಚಿದ್ದ ಪುರೋಹಿತಶಾಹಿ ವ್ಯವಸ್ಥೆಯನ್ನು ಪುನಃ ಪ್ರತಿಷ್ಠಾಪಿಸುವ ಉದ್ದೇಶದಿಂದ ಎದ್ದು ನಿಂತ ವೀರರಾಗಿದ್ದರು. ಇದರಲ್ಲಿ ಬ್ರಹ್ಮ ಉತ್ತಮ ಮನೋಭಾವವಿರುವ ವ್ಯಕ್ತಿಯಾಗಿದ್ದ, ಆತ ತನ್ನ ಧರ್ಮಪ್ರಚಾರಕ್ಕೆ ಆಯುಧವನ್ನು ಉಪಯೋಗಿಸಲಿಲ್ಲ ಎಂಬುದು ಅವನ ವೈಶಿಷ್ಟ್ಯವಾಗಿತ್ತು. ಇನ್ನು ವಿಷ್ಣು, ಶಿವ ಮೊದಲಾದವರು ತಮ್ಮ ಧರ್ಮ ಪ್ರಚಾರಕ್ಕೆ ತ್ರಿಶೂಲ, ಗದೆ, ಖಡ್ಗಗಳನ್ನು ವ್ಯಾಪಕವಾಗಿ ಬಳಸಿದರು. ಅದರಿಂದ ಅವರ ಧರ್ಮ ಭಾರತದಲ್ಲಿ ಪ್ರಬಲವಾಯಿತು. ವಿಷ್ಣುವು ವೀಕುಂಠ ಎಂಬ ಸ್ತ್ರೀಯ ಮಗನಾದ್ದರಿಂದ ವೈಕುಂಠ ಎಂದು ಪ್ರಸಿದ್ಧನಾಗುತ್ತಾನೆ. ಆತ ಆರ್ಯ ವರ್ಗಕ್ಕೆ ಸೇರಿದ್ದನೆಂದು ಹೇಳಿದರೂ ತಪ್ಪಾಗಲಿಕ್ಕಿಲ್ಲ, ಭಿಕ್ಷೆ ಬೇಡುವವನಾಗಿ ಸಂಚರಿಸುತ್ತಿದ್ದುದರಿಂದ ಸರ್ಪ ವಶೀಕರಣದಲ್ಲಿ ಆಸಕ್ತನಾದ್ದರಿಂದ ನಂಗಿ ಎಂಬ ಕುರುಬ ಸ್ತ್ರೀಯ ತಂದೆಯಾಗಿದ್ದು, ಮದ್ಯಪಾನಿಯೂ ಆಗಿದ್ದರಿಂದ ಅವನು ಓರ್ವ ಕುರುಬನೆಂದು ಊಹಿಸಲು ಸಾಧ್ಯವಿದೆ. ಏನಿದ್ದರೂ ಶಿವನ ನೈವೇದ್ಯವನ್ನು ಬ್ರಾಹ್ಮಣರು ಇಂದಿಗೂ ಸೇವಿಸದಿರುವುದು ಆತ ಕೆಳ ಜಾತಿಗೆ ಸೇರಿದವನೆಂಬ ಕಾರಣಕ್ಕಾಗಿ ಎಂದು ದಿಟ್ಟವಾಗುತ್ತದೆ. ಬ್ರಹ್ಮನ ಕತ್ತು ಕೊಯ್ದ ಕಾರಣ ಬ್ರಾಹ್ಮಣರು ಶಿವ ನೈವೇದ್ಯವನ್ನು ತಿನ್ನುವುದಿಲ್ಲವೆಂದು ಹೇಳುತ್ತಾರಾದರೂ ಅದು ಸ್ವೀಕಾರಾರ್ಹವಲ್ಲ, ಏಕೆಂದರೆ ಸಾವಿರಾರು ಜನರ ಕಂಠನಾಳವನ್ನು ಕೊಯ್ದು 'ಜನಾರ್ದನ' ಎಂಬ ಹೆಸರು ಸಂಪಾದಿಸಿದ್ದಲ್ಲದೇ, ಮಾತೃಹತ್ಯೆಯಂತಹ ಮಹಾ ಪಾಪ ಕೃತ್ಯವೆಸಗಿದ ವಿಷ್ಣುವಿನ ನೈವೇದ್ಯವನ್ನು ಮೇಲ್ವರ್ಗದವರು ಸೇವಿಸುವುದಾದರೂ ಹೇಗೆ? ಈ ವಿಷ್ಣು ಮತ್ತು ಶಿವನು ಪರಮ ದ್ರೋಹಿಗಳು ಮಾತ್ರವಲ್ಲ ಪರಸ್ಪರ ಸ್ಪರ್ಧಿಗಳೂ ಆಗಿದ್ದರು. ಶಿವನು ಬ್ರಹ್ಮ ಮತದಲ್ಲಿ ಸುಲಭದಲ್ಲೇ ಬಿರುಕನ್ನು ಉಂಟುಮಾಡಿದ್ದ, ಬ್ರಹ್ಮನ ಶಿರವು ಛೇದವಾಯಿತು ಎಂಬ ಐತಿಹ್ಯದ ಮೂಲವೇ ಇದು. ಬ್ರಹ್ಮ ಧರ್ಮವು ಛಿದ್ರವಾದುದರಿಂದ ಬ್ರಹ್ಮನನ್ನು ಆರಾಧಿಸಲು ಹಾಗೂ ಪೂಜಿಸಲು ಹೆಚ್ಚಿನ ಜನರಿರಲಿಲ್ಲ, ಆದ್ದರಿಂದ ಆತನ ಆರಾಧನೆ ಬೇಕಿಲ್ಲವೆಂದು ಗುರುತಿಸಲಾಯಿತು. ವೈಷ್ಣವರು ಮತ್ತು ಶೈವರು ಹೆಚ್ಚಿರುವುದರಿಂದ ಶಿವ ಮತ್ತು

ವಿಷ್ಣುವಿನ ಮರಣಾನಂತರವೂ ಪೂಜಿಸಲಾಯಿತು. ಭಾರತದಲ್ಲಿ ಶಿವನ ಕ್ಷೇತ್ರಗಳು ಮತ್ತು ವಿಷ್ಣುವಿನ ಕ್ಷೇತ್ರಗಳು ಹೆಚ್ಚಾಗಲು ಇದುವೇ ಕಾರಣ. ಆಯುಧಗಳ ಮೂಲಕ ಅಕ್ರಮಗಳು ನಡೆಸಿದ್ದರಿಂದ ಹಾಗೂ ಇತರ ಹಲವು ಕಾರಣಗಳಿಂದ ಶಿವ ಮತ್ತು ವಿಷ್ಣುವಿನ ಮನೋಭಾವವು ಉತ್ಕೃಷ್ಟವಾಗಿರಲಿಲ್ಲವೆಂದು ಸುಲಭದಲ್ಲಿ ಊಹಿಸಬಹುದು. ಶಿವನ ಮನೋಭಾವದ ಮೇಲೆ ಬೆಳಕು ಚೆಲ್ಲಲು ಆತ ಏರ್ಪಡಿಸಿದ ಶಾಕ್ತೇಯದಲ್ಲಿರುವ ವಾಮ ತಂತ್ರವನ್ನು ಓದಿ ನೋಡಿದರೆ ಸಾಕು. ಮನುಷ್ಯರನ್ನು ನಿರ್ದಾಕ್ಷಿಣ್ಯವಾಗಿ ನರಕಕ್ಕೆ ತಳ್ಳುವ ಭಯಾನಕವೂ, ಬೀಭತ್ಸವೂ ಆದ ವಿಚಾರಗಳನ್ನು ಅದರಲ್ಲಿ ಪ್ರತಿಪಾದಿಸಲಾಗಿದೆ. ವೈಷ್ಣವ ಮತವನ್ನು ಪ್ರಚಾರ ಪಡಿಸಿದವರನ್ನು ವಿಷ್ಣುವಿನ ಅವತಾರ ಪುರುಷರಾಗಿಯೂ, ಶೈವ ಧರ್ಮವನ್ನು ಪ್ರಬಲಗೊಳಿಸಿದವರನ್ನು ಶಿವನ ಪುತ್ರರೆಂದೂ ವರ್ಣಿಸುವುದನ್ನು ಕಾಣಬಹುದು. ಶ್ರೀ ರಾಮ, ಶ್ರೀಕೃಷ್ಣ ಹಾಗೂ ಇತರ ಕೆಲವರು ಅವತಾರ ಪುರುಷರಾದದ್ದೂ, ಗಣಪತಿ, ಸುಬ್ರಹ್ಮಣ್ಯ ಶಿವಸುತರಾದದ್ದೂ ಕೂಡಾ ಇದೇ ರೀತಿ ಆಗಿದೆ. (ವಾಗ್ಭಟಾನಂದರ ಸಂಪೂರ್ಣ ಕೃತಿಗಳು, ಮಾತೃಭೂಮಿ ಪ್ರಿಂಟಿಂಗ್ ಆ್ಯಂಡ್ ಪಬ್ಲಿಶಿಂಗ್ ಕಂಪೆನಿ ಲಿಮಿಟೆಡ್ ಕೋಯಿಕೋಡ್, 1998 ಪುಟ 751–752)

ವಾಗ್ಭಟಾನಂ ಗುರು ಈ ವಿಷಯವನ್ನು ಸಂಭಾಷಣೆಯ ರೂಪದಲ್ಲಿ ಹೀಗೆ ಸ್ಪಷ್ಟಪಡಿಸಿದ್ದಾರೆ.

ಶ್ರೀರಾಮ: ಗೆಳೆಯಾ, ನೀನು ದೇವವಿಶ್ವಾಸವಿಲ್ಲದೆ ಬದುಕುವುದು ನನಗೆ ದುಃಖ ಉಂಟು ಮಾಡುತ್ತದೆ.

ಶ್ರೀ ಕೃಷ್ಣ: ನನಗೆ ದೇವವಿಶ್ವಾಸವಿಲ್ಲವೆಂದು ನಿನಗೆ ಹೇಳಿದವರು ಯಾರು.?

ಶ್ರೀ ರಾಮ: ಅದನ್ನು ಯಾರಾದರೂ ತಿಳಿಸಿ ಕೊಡಬೇಕೇ? ಶಿವ, ವಿಷ್ಣು, ಬ್ರಹ್ಮ ಮೊದಲಾದ ಸಕಾರ ಮೂರ್ತಿಗಳನ್ನು ನಿರಾಕರಿಸಿ ಉಪನ್ಯಾಸಗಳನ್ನು ನೀಡಿರುವ ತಾವು ನಾಸ್ತಿಕವಾದಿಯಲ್ಲವೇ.?

ಶ್ರೀ ಕೃಷ್ಣ: ಗೆಳೆಯಾ, ರೂಪಾಲಂಕಾರವಿರುವ ಶಿವನೂ, ವಿಷ್ಣುವೂ ಹಾಗೂ ಇತರರು ದೇವರ ಸ್ಥಾನದಲ್ಲಿ ವಿರಾಜಮಾನರಾಗುವುದಕ್ಕೆ ಅನರ್ಹರೆಂದೂ, ಶಿವ ಹಾಗೂ ಇತರರನ್ನು ಸೃಷ್ಟಿಸಿದ ಸರ್ವಶಕ್ತನೇ ದೇವನೆಂದೂ ವಿಶ್ವಾಸವಿರಿಸುವ ನಾನು ನೈಜ ವಿಶ್ವಾಸಿಯಲ್ಲವೇ? ನಶ್ವರ ಹಾಗೂ ಸೃಷ್ಟಿಗಳೂ ಆದ ಸಕಾರ ವಸ್ತುಗಳನ್ನು ದೇವರೆಂದು ನಂಬಿ ಅವರನ್ನು ಆರಾಧಿಸುತ್ತಿರುವ ನೀವೇ ನಾಸ್ತಿಕ ವಾದಿಗಳು.

ಶ್ರೀ ರಾಮ: ಅಯ್ಯೋ, ಆಶ್ಚರ್ಯ! ಸಕಾರ ಮೂರ್ತಿಗಳಾದ ಶಿವ, ವಿಷ್ಣುಗಳು ನಶ್ವರರೇ? ಇದೆಂತಹ ಅಧಿಕಪ್ರಸಂಗ. ನಾನಿದನ್ನು ಕೇಳಲಾರೆ.

ಶ್ರೀ ಕೃಷ್ಣ: ಗೆಳೆಯಾ, ಆಕಾರವಿರುವ ಎಲ್ಲಾ ಪದಾರ್ಥಗಳೂ ನಶ್ವರವಾಗಿವೆ. ಇದಕ್ಕೆ ಉದಾಹರಣೆಯಾಗಿ ನಾವು ಪರಿಶೀಲಿಸಿದರೆ ಸಾಕು. ಅದಕ್ಕೆ ಆಕಾರವಿದೆ. ಅದು ನಾಶವೂ

ಆಗುತ್ತದೆ. ಇದನ್ನು ವಿಜ್ಞಾನಿಗಳು ಒಪ್ಪದಿರಲಿಕ್ಕಿಲ್ಲ, ಏಕೆಂದರೆ ಈ ನಿಯಮ ಎಲ್ಲೆಡೆಗೂ ಅನ್ವಯಿಸುತ್ತದೆ. ಆದರೆ ಆಕಾರವಿರುವುದಕ್ಕೆ ಒಂದು ನಿರ್ಮಾತೃ ಬೇಕು. ಇಲ್ಲದಿದ್ದರೆ ಅದು ಉಂಟಾಗಲು ಸಾಧ್ಯವಿಲ್ಲ, ಅದರಂತೆ ಶಿವ ಹಾಗೂ ಇತರರು ಆಕಾರವಿರುವವರಾದರೆ ಅವರು ನಾಶವಾಗುವುದರಲ್ಲಿ ಸಂಶಯವಿಲ್ಲ, ಅವರ ಸೃಷ್ಟಿಗೆ ಒಂದು ಸೃಷ್ಟಿಕರ್ತನಿರುವುದು ಖಂಡಿತ. ಅವನೇ ನಮ್ಮೆಲ್ಲರ ಸೃಷ್ಟಿಕರ್ತ ಎಂದು ಇತರ ವೇದಗ್ರಂಥಗಳೂ ಹೇಳುತ್ತದೆ. ಅದೃಶ್ಯನಾಗಿರುವ ದೇವನ ಮೇಲೆ ವಿಶ್ವಾಸವಿರಿಸಿ, ಹುಟ್ಟಿ ಸಾವನ್ನಪ್ಪಿದ ಶಿವಾದಿಗಳನ್ನು ದೇವರೆಂದು ಒಪ್ಪಿಕೊಳ್ಳಲಾಗದು. ಅದುವೇ ಸತ್ಯ. ಮೂಢನಂಬಿಕೆಗಳನ್ನು ಆಕ್ಷೇಪಿಸುವವರನ್ನು ಅಧಿಕಪ್ರಸಂಗಿಗಳೆಂದು ಹೇಳುವುದು ಸಜ್ಜನರಿಗೆ ಭೂಷಣವಲ್ಲ.

ಶ್ರೀ ರಾಮ: ವಿಚಿತ್ರ! ಶಿವಾದಿಗಳು ಈ ಭೂಮಿಯಲ್ಲಿ ಜನಿಸಿ, ಮರಣ ಹೊಂದಿರುವರೋ? ಎಂತಹ ಧಿಕ್ಕಾರದ ಮಾತಿದು.

ಕೃಷ್ಣ: ಗೆಳೆಯಾ, ಶಿವಾದಿಗಳು ಹುಟ್ಟಿದವರೆಂದಾದರೆ ಸಾಯುವುದಿಲ್ಲವೇ? ಅವರು ಮರಣ ಹೊಂದಿರದಿದ್ದರೆ ಈಗ ನಾವು ಕಾಣಬೇಕಾಗಿತ್ತು. ಆಕಾರವಿರುವ ಅವರು ಎಲ್ಲಿದ್ದಾರೆ. ನಮಗೆ ಏಕೆ ಕಾಣುತ್ತಿಲ್ಲ.?

ಶ್ರೀ ರಾಮ: ಶಿವ, ಶಿವಾ! ಅವರನ್ನು ನಾವು ಕಾಣುವುದೆಂತು? ಪಾಪಿಗಳಾದ ನಮಗೆ ಅಂತಹ ಸೌಭಾಗ್ಯವಿದೆಯೇ? ಪುಣ್ಯವಂತರಿಗೆ ಮಾತ್ರ ಅವರ ದರ್ಶನ ಭಾಗ್ಯ ಲಭಿಸಲಿದೆ.

ಶ್ರೀ ಕೃಷ್ಣ: ರಾವಣನಂತಹ ರಾಕ್ಷಸರುಗಳಿಗಿಂತಲೂ ನಾವು ಪಾಪಿಗಳಾಗಿದ್ದೇವೆಯೇ?

ಶ್ರೀ ರಾಮ: ಹಾಗಲ್ಲ, ರಾವಣರಂತಹ ರಾಕ್ಷಸರು ನರಹತ್ಯೆ, ಬ್ರಹ್ಮ ಹತ್ಯೆ ಹಾಗೂ ದೇವರನ್ನು ಹೊಡೆದೋಡಿಸುವ ಘೋರ ಕೃತ್ಯಗಳನ್ನೆಸಗಿದ ಪಾತಕಿಗಳಾಗಿದ್ದಾರೆ. ಅಂತಹ ಪಾಪಗಳನ್ನು ನಾವು ಮಾಡಿಲ್ಲ, ಮಾಡುವುದೂ ಇಲ್ಲ, ರಾವಣರಂತ ಅಸುರರಿಗಿಂತ ನಾವು ಸಜ್ಜನರೆಂದು ಬೇರೆ ಹೇಳಬೇಕೇ?

ಶ್ರೀ ಕೃಷ್ಣ: ರಾವಣ ಹಾಗೂ ಇತರರು ಶಿವ ಹಾಗೂ ಇತರರನ್ನು ಹಲವೊಮ್ಮೆ ಕಾಣುತ್ತಿದ್ದಾರಲ್ಲ, ಮಾತ್ರವಲ್ಲ, ಶಿವನು ಬಾನಾಸುರನ ಕೋಟೆಯಲ್ಲಿ ಕೆಲಸಮಯ ಕಾವಲುಗಾರನಾಗಿರಲಿಲ್ಲವೇ? ಮೊದಲ ಪತ್ನಿ ತೀರಿಕೊಂಡಾಗ ಪಾರ್ವತಿ ಎಂಬ ಕೆಳಜಾತಿಯ ಹೆಣ್ಣನ್ನು ಆತ ವಿವಾಹವಾಗಲಿಲ್ಲವೇ? ಮಹಾ ಪಾಪಿಗಳಾದ ರಾಕ್ಷಸರಿಗೂ ಶಿವನನ್ನು ಕಾಣಲು ಮಾತ್ರವಲ್ಲ, ಗೆಳೆಯನಾಗಿ ಸ್ವೀಕರಿಸಲು ಸಾಧ್ಯವಾಗಿದ್ದರೆ ಮತ್ತು ಮಲಯ ಹೆಣ್ಣಿಗೆ ಪತಿಯಾಗಿ ಪಡೆಯಲು ಸಾಧ್ಯವಾಗಿರುವಾಗ ನಮ್ಮ ಪಾಪಭಾರದಿಂದ ಅವನನ್ನು ನೋಡಲು ಸಾಧ್ಯವಿಲ್ಲವೆಂದು ಹೇಳುವುದು ಕಟ್ಟುಕಥೆಯಲ್ಲವೇ.?

ಶ್ರೀ ರಾಮ: ಏನು? ಶಿವನು ಎರಡನೇ ಬಾರಿ ಆದಿವಾಸಿ (ಮಲಯ) ಹೆಣ್ಣನ್ನು ವಿವಾಹವಾದದ್ದೇ? ಏನು ಹೇಳುತ್ತಿರುವಿ. ಅಸಂಬದ್ಧ ಮಾತುಗಳಿಗೆ ನನ್ನ ಮೈ ಉರಿಯುತ್ತಿದೆ. ಬೇಡ, ಇನ್ನು ಮಾತಾಡಬೇಡ.

ಶ್ರೀ ಕೃಷ್ಣ: ನಾನು ಅಸಂಬದ್ಧ ಮಾತು ಹೇಳುತ್ತಿಲ್ಲ, ಅತ್ಯಗತ್ಯ ಮಾತನ್ನಷ್ಟೇ ನುಡಿಯುತ್ತಿದ್ದೇನೆ. ಪಾರ್ವತಿಯನ್ನು ಶಿವನು ವಿವಾಹವಾಗಿದ್ದನೆಂಬ ವಿಷಯ ನಿನಗೆ ತಿಳಿದಿದೆಯೇ.?

ಶ್ರೀ ರಾಮ: ಹೌದು, ಕೇಳಿದ್ದೇನೆ.

ಶ್ರೀ ಕೃಷ್ಣ: ಪಾರ್ವತಿಯೆಂದರೆ ನೀವು ಯಾರೆಂದು ಭಾವಿಸಿದ್ದೀರಿ.? ಪರ್ವತ ಗುಡ್ಡೆಯಾಗಿದ್ದರೆ ಪಾರ್ವತಿ ಆದಿವಾಸಿಯಲ್ಲವೇ? ಸಂಸ್ಕೃತದಲ್ಲಿ ಊಹಿಸದೇ ಅದರ ಅರ್ಥವನ್ನು ಗ್ರಹಿಸಿ ನೋಡು. ಮಾತಂಗನ್ ಎಂಬ ಮಲೆಕುಡಿಯನ ಮಗಳಾದ ಪಾರ್ವತಿಯ ಕುರಿತು ಬೇರೆಯೇ ಭಾವನೆ ಇದ್ದರೆ ಅದು ಖಂಡಿತ ಸರಿಯಲ್ಲ, ಮದುವೆಯಾಗಿ ಮಕ್ಕಳೊಡನೆ ಬದುಕಿ, ಸತ್ತು ಮಣ್ಣಿನಲ್ಲಿ ಲೀನವಾದವರ ಮೇಲಿನ ವಿಶ್ವಾಸದಿಂದ ದೂರವಾಗಬೇಕು.

ಶಾಶ್ವತನೂ, ನಿರಾಕಾರನೂ ಆದ ದೇವನ ಮೇಲೆ ವಿಶ್ವಾಸವಿರಿಸಿ ಒಳ್ಳೆಯ ಮನುಷ್ಯನಾಗಿ ಬದುಕಲು ನೋಡು. ನಮಗೆ ಉಪದೇಶ ಮಾಡುವ ಕೆಲಸ ನಂತರ ನಡೆಯಲಿ.

(ವಾಗ್ಭಟಾನಂದರ ಸಂಪೂರ್ಣ ಕೃತಿಗಳು ಪುಟ 357–359)

ಶ್ರೀ ಸ್ವಾಮಿ ದಯಾನಂದ ಸರಸ್ವತಿಯವರು ಈ ವಿಷಯವನ್ನು ಪ್ರಶ್ನೋತ್ತರ ರೂಪದಲ್ಲಿ ಚಿತ್ರೀಕರಿಸಿದ್ದಾರೆ.

ಪ್ರಶ್ನೆ: ಈಶ್ವರನು ಅವತಾರ ತಾಳುತ್ತಾನೋ, ಇಲ್ಲವೋ?

ಉತ್ತರ: ಇಲ್ಲ, ಏಕೆಂದರೆ ಅಜ ಏಕ ಪಾದ್ (35–53)

'ಸ ಪರ್ಯಗಾತ್ ಶುಕ್ರ ಮಕಾಯಂ' (40–8) ಎಂದು ಆರಂಭವಾಗುವ ಯಜುರ್ವೇದ ವಚನಗಳಿಂದ ಪರಮೇಶ್ವರನು ಜನ್ಮ ತಾಳಿಲ್ಲವೆಂದು ಅರ್ಥವಾಗುತ್ತದೆ.

ಪ್ರಶ್ನೆ: ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತೀ ಭಾರತ।

ಅಭ್ಯೋಥಾನಮ ಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ।

(ಭಗವದ್ಗೀತೆ: ಅ. 4, ಶ್ಲೋಕ 7)

ಧರ್ಮಕ್ಕೆ ದೋಷ ಉಂಟಾಗುವಾಗ ನಾನು ಶರೀರ ರೂಪ ಧರಿಸುತ್ತೇನೆಂದು ಶ್ರೀ ಕೃಷ್ಣನು ಹೇಳುತ್ತಾನಲ್ಲವೇ?

ಉತ್ತರ: ವೇದಗಳಿಗೆ ವಿರುದ್ಧವಾದುದರಿಂದ ಇದು ಪ್ರಮಾಣವಾಗುವುದಿಲ್ಲ, ಧರ್ಮಾತ್ಮನು, ಧರ್ಮವನ್ನು ರಕ್ಷಿಸಬಯಸುವ ಶ್ರೀ ಕೃಷ್ಣನು ನಾನು ಯುಗ ಯುಗಾಂತರಗಳವರೆಗೆ ಜೀವದಿಂದ ಸಜ್ಜನರನ್ನು ಪರಿಪಾಲಿಸಿ, ದುಷ್ಟ ಜನರ ಸಂಹಾರ ನಡೆಸುತ್ತೇನೆ ಎಂದೆಲ್ಲಾ ಬಯಸಿರಬಹುದು. ಹಾಗೆ ಹೇಳುವುದರಲ್ಲಿ ತಪ್ಪಿಲ್ಲ, ಏಕೆಂದರೆ 'ಪರೋತಕಾರಾಯಿ ಸತಾಂ ವಿಭೂತಯಃ' ಸಜ್ಜನರ ಶರೀರ, ಮನಸ್ಸು, ಸಂಪತ್ತೆಲ್ಲವೂ ಪರೋಪಕಾರಕ್ಕಾಗಿ ಮೀಸಲಿರುತ್ತದೆ. ಆದರೂ ಶ್ರೀ ಕೃಷ್ಣನನ್ನು ದೇವರೆಂದು ಹೇಳಲು ಸಾಧ್ಯವಿಲ್ಲ,

ಪ್ರಶ್ನೆ: ಹೀಗಾದರೆ ಲೋಕದಲ್ಲಿ ದೇವರ 24 ಅವತಾರಗಳಿವೆಯೆಂದು ಹೇಳುವುದನ್ನು ಒಪ್ಪಿಕೊಳ್ಳುವುದು ಹೇಗೆ?

ಉತ್ತರ: ವೇದ ಗ್ರಂಥಗಳ ಅರ್ಥ ತಿಳಿಯಲು ಅಸಾಧ್ಯವಾದುದರಿಂದ, ಅಜ್ಞಾನ ಹಾಗೂ ಸಂಪ್ರದಾಯವಾದಿಗಳ ವಂಚನೆಗೆ ಆಕರ್ಷಿತರಾದ್ದರಿಂದ ಇಂತಹ ಆಧಾರ ರಹಿತ ಮಾತುಗಳನ್ನು ಹೇಳುತ್ತಾರಲ್ಲದೆ ಅದಕ್ಕೆ ಗೌರವವನ್ನು ಕೊಡುತ್ತಾರೆ.

ಪ್ರಶ್ನೆ: ದೇವನು ಅವತಾರ ತಾಳುವುದಿಲ್ಲವೆಂದಾದರೆ ಕಂಸ, ರಾವಣರಂತಹ ದುಷ್ಟ ಶಕ್ತಿಗಳನ್ನು ಸಂಹರಿಸಲು ಹೇಗೆ ಸಾಧ್ಯ.?

ಉತ್ತರ: ಮೊದಲನೆಯದಾಗಿ ಜನಿಸಿದವರೆಲ್ಲ ಮರಣ ಹೊಂದಿಯೇ ತೀರುತ್ತಾರೆ. ಮಾತ್ರವಲ್ಲ, ಶರೀರ, ಕೈಗಳಿಂದ ಅವತಾರ ತಾಳದೆ ಜಗದ ಸೃಷ್ಟಿ, ಪರಿಸ್ಥಿತಿ, ಸಂಹಾರಗಳನ್ನು ನಡೆಸುವ ದೇವನ ಮುಂದೆ ಕಂಸ, ರಾವಣನಂತಹವರನ್ನು ಒಂದು ಕ್ರಿಮಿಗೆ ಹೋಲಿಸಿದರೆ ತಪ್ಪಾಗಲಾರದು. ಆತ ಸರ್ವವ್ಯಾಪಿಯಾಗಿರುವುದರಿಂದ ಕಂಸ, ರಾವಣರ ಶರೀರದಲ್ಲೂ ತುಂಬಿದ್ದಾನೆ. ತಾನು ಬಯಸಿದ ಕ್ಷಣವೇ ಅವರ ಎದೆಯನ್ನು ಬಗೆದು, ಕೊಂದು ಮುಗಿಸಲು ಆತನಿಗೆ ಸಾಧ್ಯವಿದೆ. ಅಸಂಖ್ಯಾತ ಗುಣ ವೈಶಿಷ್ಟ್ಯಗಳಿಂದ ತುಂಬಿರುವ ದೇವನು ಒಂದು ಕ್ಷುದ್ರ ಜೀವಿಯನ್ನು ಕೊಲ್ಲಲು ಜನನ, ಮರಣವುಳ್ಳವನಾಗಿದ್ದಾನೆಂದು ಹೇಳುವವರನ್ನು ಮೂರ್ಖರ ಹೊರತು ಯಾರೊಂದಿಗೆ ಹೋಲಿಸಬಹುದು.? ಅಲ್ಲದೆ ದೇವನು ಜನ್ಮತಾಳುತ್ತಾನೆಂಬುದು ಯುಕ್ತಿಗೂ ನಿಲುಕದ ವಿಚಾರವಾಗಿದೆ. ಗಡಿರೇಖೆಗಳಿಲ್ಲದ ಈ ಆಕಾಶವು ಗರ್ಭದಲ್ಲಿ ಅಡಗಿದೆಯೆಂದೂ, ಅಂಗೈಯಲ್ಲಿ ಹುದುಗಿದೆಯೆಂದೂ ಯಾರಾದರೂ ಹೇಳಿದರೆ ಒಪ್ಪಲು ಸಾಧ್ಯವಿಲ್ಲ, ಏಕೆಂದರೆ ಆಕಾಶವು ವಿಶಾಲವಾಗಿದ್ದು ಎಲ್ಲಾ ಕಡೆಯೂ ಹಬ್ಬಿದೆ. ಆದ್ದರಿಂದ ಅದು ಒಳಗೆ ಪ್ರವೇಶಿಸುವ ಅಥವಾ ಹೊರ ಹೋಗುವ ಪ್ರಶ್ನೆಯೇ ಇಲ್ಲ. ಅದೇ ರೀತಿ ಪರಮಾತ್ಮನು ಅನಂತನೂ ಸರ್ವವ್ಯಾಪ್ತಿಯೂ ಆಗಿರುವುದರಿಂದ ಆತನಿಗೆ ಆಗಮನ, ನಿರ್ಗಮನಗಳು ಸರಿ ಹೊಂದುವುದಿಲ್ಲ. ಒಂದು ವಸ್ತು ಎಲ್ಲಿ ಇಲ್ಲವೋ ಅಲ್ಲಿ ಮಾತ್ರ ಪ್ರಕ್ರಿಯೆಗಳು ಉಂಟಾಗಲು ಸಾಧ್ಯ. ಪರಮಾತ್ಮನು ಎಲ್ಲಿಂದಲೋ ಬಂದವನೆಂದು ಹೇಳಲು ಅವನು ಗರ್ಭದಲ್ಲಿ ಇರಲಿಲ್ಲವೆಂದೇ? ಅಥವಾ ಹೊರಗೆ ಎಲ್ಲೂ ಉಂಟಾಗಲಿಲ್ಲವೆಂದೇ? ಹಾಗಿದ್ದರೆ ಅವನು ಹೇಗೆ ನಿರ್ಗಮಿಸಿದ್ದನೆಂದು ಹೇಳುವಿರಿ.? ತಿಳುವಳಿಕೆ ಇಲ್ಲದವರ ಹೊರತು ಯಾರಾದರೂ ದಿವ್ಯ ಶಕ್ತಿಯ ಬಗ್ಗೆ ಹೀಗೆ ಹೇಳಬಹುದೇ? ಆದ್ದರಿಂದ ದೇವನಿಗೆ ಆಗು ಹೋಗುಗಳು, ಜನನ, ಮರಣಗಳು ಇದೆಯೆಂದು ಸಾಧಿಸುವುದು ಅಸಾಧ್ಯ. ಏಸು ಮೊದಲಾದವರೂ ಪರಮಾತ್ಮನ ಅವತಾರವಲ್ಲವೆಂದು ತಿಳಿದುಕೊಳ್ಳಬೇಕು. ಏಕೆಂದರೆ ಕೋಪ ತಾಪಗಳು, ಭಯಾಶಂಕೆಗಳೂ, ಸುಖ, ದುಃಖ, ಜನನ, ಮರಣ ಮೊದಲಾದ ಗುಣಗಳು ಅವರಲ್ಲಿದ್ದುದರಿಂದ ಅವರು ಮನುಷ್ಯರೇ ಆಗಿದ್ದರು. (ಸತ್ಯಾರ್ಥ ಪ್ರಕಾಶ, ಪುಟ 304–306)

ಆದ್ದರಿಂದ ದೇವನಿಗೆ ಅವತಾರವಿಲ್ಲವೆಂದೂ, ಅವತಾರ ತಾಳುವುದಿಲ್ಲವೆಂದೂ, ಇಸ್ಲಾಮಿನಂತೆ ಹಿಂದೂ ಧರ್ಮವೂ ಅಂಗೀಕರಿಸುತ್ತದೆ. ಪ್ರಪಂಚದಲ್ಲಿರುವುದೆಲ್ಲಾ ದೇವನ ಸೃಷ್ಟಿಗಳು. ಏಸು, ಜೋಸೆಫ್, ಮುಹಮ್ಮದ್, ಬ್ರಹ್ಮ, ವಿಷ್ಣು, ಶಿವ, ರಾಮ, ಶ್ರೀ ಕೃಷ್ಣರೂ ಇದರಿಂದ

ಹೊರತಲ್ಲ, ಅವರು ದೇವರುಗಳೋ, ದೇವರ ಅವತಾರಗಳೋ ಅಲ್ಲ, ಬದಲಾಗಿ ಪರಮಾತ್ಮನ ಸೃಷ್ಟಿಗಳು. ಆದ್ದರಿಂದ ಅವರನ್ನು ಪ್ರಾರ್ಥಿಸಬಾರದು, ಅವರಿಗೆ ಹರಕೆ, ನೈವೇದ್ಯಗಳನ್ನು ಅರ್ಪಿಸಬಾರದು. ಅವರೆಲ್ಲರ ಸೃಷ್ಟಿಕರ್ತನಾದ ದೇವನನ್ನು ಮಾತ್ರ ಆರಾಧಿಸಬೇಕು. ಇದರ ಹೊರತಾಗಿ ಎಲ್ಲವೂ ಅಂಧ ವಿಶ್ವಾಸ ಹಾಗೂ ಅಜ್ಞಾನವಾಗಿದೆ. ಇದು ಮಹಾ ಪಾಪವೂ ಹೌದು.

## 5 ಸಾಯಿಬಾಬ ಮತ್ತು ಮುಸ್ಲಿಮ್ ಬಾಬಾಗಳು

**ದೇವನು ಮಾನವ ರೂಪದಲ್ಲಿ ಅವತರಿಸುವುದಿಲ್ಲವೆಂದು ನೀವು ಹೇಳುತ್ತೀರಿ? ಹಾಗಾದರೆ ಭಗವಾನ್ ಸಾಯಿಬಾಬ ದೇವರ ಅವತಾರವಲ್ಲವೇ? ಬಾಬಾರ ಅದ್ಭುತ ಪವಾಡಕ್ಕೆ ಸಾವಿರಾರು ಮುಸ್ಲಿಮರೂ ಮಾರು ಹೋಗಿದ್ದಾರಲ್ಲಾ? ಅವರ ಕುರಿತು ನೀವೇನು ಹೇಳುವಿರಿ?**

ದೇವರಿಗೆ ಅವತಾರವಿಲ್ಲವೆಂದು ನಾನು ಮಾತ್ರವಲ್ಲ ಪ್ರಖ್ಯಾತ ಹಿಂದೂ ವಿದ್ವಾಂಸರೂ ಆಧಾರ ಸಹಿತವಾಗಿ ಸಮರ್ಥಿಸಿದ್ದಾರೆ. ಮೊದಲೇ ಈ ಪ್ರಶ್ನೆಗೆ ಬಹಳ ವಿವರವಾಗಿ ವಿವರಿಸಿದ್ದೇನೆ. ಸತ್ಯ ಸಾಯಿಬಾಬ ಕೇವಲ ಓರ್ವ ಮನುಷ್ಯ ಮಾತ್ರ. 1926 ನವೆಂಬರ್ 23ಕ್ಕೆ ಅವರು ಜನಿಸಿದರು. ಅವರ ತಂದೆ ಪೆದ್ದವೆಂಕಪ್ಪ ರಾಜ, ತಾಯಿ ಈಶ್ವರಾಂಬ. ಆಂಧ್ರದ ಗೋಪಾಲಪಳ್ಳಿ ಗ್ರಾಮದಲ್ಲಿ ಜನನ. ಅದೇ ಪುಟ್ಟಪರ್ತಿಯೆಂದು ಪ್ರಸಿದ್ಧವಾಗಿದೆ. ಸಾಯಿ ಬಾಬರು ಮರಣ ಹೊಂದಿದ್ದಾರೆ. ಮಣ್ಣಿನಲ್ಲಿ ಅವರ ದೇಹ ಲೀನವಾಗಿದೆ. ಆದರೆ ನಿರಾಕಾರನೂ, ಆಶ್ರಯದಾತನೂ, ಅನಾದಿಯೂ, ಅವಿಭಾಜ್ಯನೂ ಆದ ದೇವನು ಈ ಎಲ್ಲಾ ದೌರ್ಬಲ್ಯಗಳಿಂದ ಮುಕ್ತನಾಗಿದ್ದಾನೆ.

ಸಾಯಿ ಬಾಬಾರಿಗೆ ಚತುರ ಜಾದೂಗಾರನಿಗೆ ಹೊರತಾದ ಸಾಮರ್ಥ್ಯವೋ, ಅದ್ಭುತ ಶಕ್ತಿಯೋ ಇರಲಿಲ್ಲವೆಂದು ಜನಸಾಮಾನ್ಯರಿಗೆ ತಿಳಿಯುವಂತಹ ಘಟನೆಯನ್ನು ಅವರ ಜೀವನ ದಿಂದಲೇ ಹೆಕ್ಕಿ ತೆಗೆಯಬಹುದು. ಕೆಲವನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ.

1. ಪುಟ್ಟಪರ್ತಿ ಆಶ್ರಮದಲ್ಲಿ ಸಾಯಿಬಾಬಾರನ್ನು ಕೊಲ್ಲುವ ವಿಫಲ ಯತ್ನ ನಡೆಯಿತು. ಆಕ್ರಮಿಗಳ ಇರಿತದಿಂದ ಇಬ್ಬರು ಅಂಗರಕ್ಷಕರು ಹತರಾದರು. ಅನೇಕರಿಗೆ ಗಾಯವಾಯಿತು. ಘಟನೆ ತಿಳಿದು ಸ್ಥಳಕ್ಕೆ ಆಗಮಿಸಿದ ಪೊಲೀಸರ ಗುಂಡಿಗೆ ನಾಲ್ವರು ಹಂತಕರ ಬಲಿಯಾಯಿತು. ಆದರೆ ಈ ಗೂಢಾಲೋಚನೆಯ ರಹಸ್ಯಗಳನ್ನು ಅರಿಯಲು ಸಾಯಿಬಾಬಾರಿಗೆ ಸಾಧ್ಯವಾಗಲಿಲ್ಲ, ಅಪರಾಧಿಗಳನ್ನು ಪತ್ತೆಹಚ್ಚಲು ಪೊಲೀಸರು ಬರಬೇಕಾಯಿತು. ಅದೂ ಸಾಲದೇ ಪೊಲೀಸ್ ನಾಯಿಗಳನ್ನೂ ಕರೆಸಬೇಕಾಯಿತು. ಸಾಯಿಬಾಬಾಗೆ ಪರೋಕ್ಷ ಜ್ಞಾನವೆಂಬುದು ಇದ್ದಿದ್ದರೆ ಅಕ್ರಮಿಗಳು ಆಶ್ರಮ ನಿವಾಸಿಗಳಾಗಿ ಸೇರಿಕೊಳ್ಳುತ್ತಿರಲಿಲ್ಲ, ಅಪರಾಧಿಗಳ ಪತ್ತೆಗೆ ಪೊಲೀಸರು, ಪೊಲೀಸ್ ನಾಯಿಗಳ ಅಗತ್ಯ ತಲೆದೋರುತ್ತಿರಲಿಲ್ಲ, ಘಟನೆಯ ಬಳಿಕ ಸಾಯಿಬಾಬರ ವಸತಿ ಕೇಂದ್ರಕ್ಕೆ ಪೊಲೀಸ್ ಭದ್ರತೆ ಅಗತ್ಯವಿರಲಿಲ್ಲ, ಅವರಿಗೆ ಅಮಾನುಷ ಶಕ್ತಿಯಿದ್ದರೆ ಪುಟ್ಟಪರ್ತಿ ಹಾಗೂ ಇತರೆಡೆ 500ಕ್ಕಿಂತಲೂ ಅಧಿಕ ಪೊಲೀಸ್ ಕಾವಲು ಅಗತ್ಯವಿರಲಿಲ್ಲ,

ಪುಟ್ಟಪರ್ತಿಯ ಆಶ್ರಮ ನಿವಾಸಿಗಳಿಗೆ ಅವರ ದೈವಿಕ ಶಕ್ತಿಯಲ್ಲಿ ನಂಬಿಕೆಯಿಲ್ಲದ್ದರಿಂದಲೇ ಅವರನ್ನು ಕೊಲ್ಲಲು ಯತ್ನಿಸಿದ್ದರು.

2. 1993ರಲ್ಲಿ ಹೈದರಾಬಾದ್‌ನಲ್ಲಿ ಸಾಯಿಬಾಬಾ ಟ್ರಸ್ಟ್‌ನ ಒಂದು ಕಲ್ಯಾಣ ಮಂಟಪವನ್ನು ಪ್ರಧಾನ ಮಂತ್ರಿಯವರು ಉದ್ಘಾಟಿಸಿದರು. ಸಮಾರಂಭದಲ್ಲಿ ಅಂದಿನ ಗೃಹಸಚಿವ ಎಸ್.ಬಿ. ಚೌಹಾಣ್, ಕೃಷಿ ಸಚಿವ ಬಲ್‌ರಾಂದಾಕರ್, ಆಂಧ್ರ ಹಾಗೂ ಕರ್ನಾಟಕದ ಮುಖ್ಯಮಂತ್ರಿಗಳಾದ ವಿಜಯ ಭಾಸ್ಕರ ರೆಡ್ಡಿ, ಬಂಗಾರಪ್ಪ ಮೊದಲಾದ ಹಲವಾರು ಗಣ್ಯರು ಭಾಗವಹಿಸಿದ್ದರು. ಸಮಾರಂಭದಲ್ಲಿ ಸಾಯಿಬಾಬಾರು ಗಾಳಿಯಿಂದ ಚಿನ್ನದ ಸರ ತೆಗೆದು ಕಲ್ಯಾಣ ಮಂಟಪ ನಿರ್ಮಿಸಿದ ಶಿಲ್ಪಿಗೆ ಉಡುಗೊರೆಯಾಗಿ ನೀಡುತ್ತಾರೆ. ಆ ಸಮಾರಂಭವನ್ನು ದೂರದರ್ಶನ ನೇರ ಪ್ರಸಾರ ಮಾಡಿತ್ತು. ಇದು ಸಾಯಿಬಾಬಾರ ಪವಾಡದ ರಹಸ್ಯವನ್ನು ಬಯಲಿಗೆಳೆಯಲು ಸಾಧ್ಯವಾಯಿತು.

ಸಾಯಿಬಾಬಾ ತನ್ನ ನಿಕಟವರ್ತಿಯಿಂದ ಉಪಾಯದಿಂದ ಚಿನ್ನದ ಸರವನ್ನು ಪಡೆದುಕೊಂಡು, ಬಹಳ ಚಾಣಾಕ್ಷತನದಿಂದ ಕೈಯೊಳಗೆ ಇರಿಸಿದ್ದನ್ನು ಅದರಲ್ಲಿ ಸ್ಪಷ್ಟವಾಗಿ ಕಾಣಬಹುದು. ಕೋಟ್ಯಂತರ ಮನುಷ್ಯರನ್ನು ಹಾದಿತಪ್ಪಿಸುವ ಬಾಬಾರ ದಿವ್ಯಪವಾಡದ ನಿಜಸ್ಥಿತಿ ಮನವರಿಕೆಯಾಗುವ ಆ ಕಾರ್ಯಕ್ರಮವನ್ನು ದೂರದರ್ಶನ ಪ್ರಸಾರ ಮಾಡಲಿಲ್ಲ. ಆದರೆ ಈ ಉದ್ಘಾಟನಾ ಸಮಾರಂಭದ ವೀಡಿಯೋ ದೃಶ್ಯವನ್ನು ಪವಾಡ ಪುರುಷರ ಬಣ್ಣ ಬಯಲು ಮಾಡುವ ಅಂತಾರಾಷ್ಟ್ರೀಯ ಸಮಿತಿಯ ಭಾರತೀಯ ಸಂಯೋಜಕ ಸಿ. ಪ್ರೇಮಾನಂದ್ ಉಪಾಯದಿಂದ ಪಡೆದುಕೊಂಡರು. ಅದನ್ನು ವಿವಿಧೆಡೆ ಪ್ರದರ್ಶಿಸಲಾಯಿತು. ಸಾಯಿಬಾಬ ಹಾಗೂ ಅನುಯಾಯಿಗಳಿಗೆ ತೃಪ್ತಿಕರ ಉತ್ತರ ನೀಡಲು ಸಾಧ್ಯವಾಗಲಿಲ್ಲ.

3. ಶೂನ್ಯದಿಂದ ಭಸ್ಮ ಹಾಗೂ ಚಿನ್ನದ ಸರಗಳನ್ನು ತೆಗೆಯಲು ಸಾಧ್ಯವಾಗಿದ್ದರೆ ಔಷಧಿ ಹಾಗೂ ಇನ್ನಿತರ ವಸ್ತುಗಳನ್ನು ಮಾಡಲು ಸಾಧ್ಯವಾಗಬೇಕಿತ್ತಲ್ಲವೇ.? ಆದರೆ ಪುಟ್ಟಪರ್ತಿಯ ಆಸ್ಪತ್ರೆಗಳಿಗೆ ಸ್ವದೇಶದಿಂದ ಮಾತ್ರವಲ್ಲ, ವಿದೇಶದಿಂದಲೂ ಔಷಧಗಳನ್ನು ತರಲಾಗುತ್ತಿತ್ತು. ಸಾಯಿಬಾಬಾರಿಗೆ ದಿವ್ಯ ಪವಾಡವಿದ್ದರೆ ರೋಗಿಗಳಿಗೆ ಸಾಂತ್ವನ ನೀಡಲು ಅತ್ಯಾಧುನಿಕ ತಂತ್ರಜ್ಞಾನದ ಆಸ್ಪತ್ರೆಗಳ ಅಗತ್ಯವಿರಲಿಲ್ಲ. ಪುಟ್ಟಪರ್ತಿಯಲ್ಲಿಯೂ ಕೂಡಾ ಇತರ ಆಸ್ಪತ್ರೆಗಳಂತೆ ರೋಗಿಗಳಿಗೆ ಶಸ್ತ್ರಕ್ರಿಯೆ ನಡೆಸಿ ಔಷಧಿಗಳನ್ನು ನೀಡಲಾಗುತ್ತಿತ್ತು. ಆದ್ದರಿಂದ ಪವಾಡವೆಂಬುದು ಎಲ್ಲಿಯೂ ಕಂಡು ಬಂದಿಲ್ಲ.

ಅವತಾರ ಪುರುಷರೆಂದು ಘೋಷಿಸಿಕೊಂಡವರು ಹಾಗೂ ಅವರ ಅನುಯಾಯಿಗಳು ಪವಾಡಗಳ ಕುರಿತು ಹಸಿ ಸುಳ್ಳನ್ನು ಹೇಳಲು ಹಿಂಜರಿಯುವುದಿಲ್ಲ. ಉದಾಹರಣೆಗೆ ಒಂದು ಘಟನೆಯನ್ನು ವಿವರಿಸುತ್ತೇನೆ.

ವಿಶ್ವಪ್ರಸಿದ್ಧ ಸೈಕೋ ವಾಚ್ ಕಂಪೆನಿಯ ಮಾಲಕರು ಹೊಸ ಮಾದರಿಯ ಒಂದು ವಾಚ್ ನಿರ್ಮಿಸಿದರು. ಅದನ್ನು ಹೆಚ್ಚಿನ ಪರಿಶೀಲನೆಗಾಗಿ ತನ್ನ ಕಪಾಟಿನಲ್ಲಿ ಭದ್ರವಾಗಿರಿಸಿದರು.

ಅವರು ಬಿಡುವಿನ ವೇಳೆಯಲ್ಲಿ ಭಾರತಕ್ಕೆ ಬಂದಿದ್ದಾಗ ಪುಟ್ಟಪರ್ತಿಯನ್ನು ಸಂದರ್ಶಿಸಿದರು. ತನ್ನ ಭಕ್ತವೃಂದದ ನಡುವೆ ಜಪಾನ್ ದೇಶದ ವ್ಯಕ್ತಿಯನ್ನು ಕಂಡ ಸಾಯಿಬಾಬ ಅವರನ್ನು ಬಳಿಗೆ ಕರೆದರು. ಗಾಳಿಯಿಂದ ಒಂದು ಕಟ್ಟನ್ನು ತೆಗೆದು ಆತನಿಗೆ ನೀಡಿದರು. ಅದನ್ನು ಬಿಚ್ಚಿ ನೋಡಿ ಆ ವಾಚ್ ನಿರ್ಮಿಸಿದ ವ್ಯಕ್ತಿಗೆ ಆಶ್ಚರ್ಯವಾಯಿತು. ಅದು ಟೋಕಿಯೋದ ತನ್ನ ಕಪಾಟಿನಲ್ಲಿ ಜೋಪಾನವಾಗಿರಿಸಿದ ಹೊಸ ಮಾದರಿಯ ವಾಚ್ ಆಗಿತ್ತು. ಅದರ ಹೆಸರು, ಬೆಲೆ, ಬರೆದಿಟ್ಟ ಲೇಬಲ್ ಅಥವಾ ಅದನ್ನು ಕಟ್ಟಿದ್ದ ಸಿಲ್ಕ್ ರಿಬ್ಬನ್‌ನಲ್ಲೂ ಸ್ವಲ್ಪವೂ ವ್ಯತ್ಯಾಸವಿರಲಿಲ್ಲ. ಇದರೊಂದಿಗೆ ಸೈಕೋ ಕಂಪೆನಿಯ ಮಾಲಕನಿಗೆ ಸತ್ಯ ಸಾಯಿಬಾಬಾರ ದೈವಿಕ ಪವಾಡ ಕುರಿತ ಸಂಶಯಗಳೆಲ್ಲಾ ಮಾಯವಾಯಿತು. ಆತ ಸಾಯಿಬಾಬಾರ ಪಾದಗಳಿಗೆ ನಮಸ್ಕರಿಸಿ ಅವರ ಆರಾಧಕನಾಗಿ ಬಿಟ್ಟನು.

ಟೋಕಿಯೋಕ್ಕೆ ಮರಳಿದ ಬಳಿಕ ತಾನು ಲಾಕರ್‌ನಲ್ಲಿರಿಸಿದ ಕೈಗಡಿಯಾರ ಕಾಣೆಯಾಗಿದ್ದು ಕಂಡು ಸೈಕೋ ಕಂಪೆನಿಯ ಮಾಲಕ ದಿಗ್ಭ್ರಮೆಗೊಂಡರು. ತನ್ನ ಖಾಸಗಿ ಕಾರ್ಯದರ್ಶಿಯೊಂದಿಗೆ ವಿಷಯ ತಿಳಿಸಿದಾಗ, ಆತ ತುಂಬಾ ತಲೆಕೂದಲಿರುವ ದೇವಸಂಭೂತನಂತೆ ತೋರುವ ವ್ಯಕ್ತಿಯೊಬ್ಬರು ಒಂದು ದಿನ ಕಛೇರಿಗೆ ಬಂದು ಲಾಕರ್ ತೆರೆದು ವಾಚ್‌ನೊಂದಿಗೆ ಮರಳಿದ ವಿಷಯ ತಿಳಿಸಿದಾಗ ಆಶ್ಚರ್ಯ ಇಮ್ಮಡಿಯಾಯಿತು. ಭಾರತ ಸರ್ಕಾರದ ಮಾಜಿ ವಿಜ್ಞಾನ ಸಲಹಗಾರರಾಗಿದ್ದ ಡಾ। ಎಸ್. ಭಾಗವತ್ ಎಂ.ಎಸ್.ಸಿ, ಡಿ.ಎ.ಎಸ್.ಸಿ, ಪಿ.ಎಚ್.ಡಿ 1973ರಲ್ಲಿ ಎಸ್. ಕೆ. ನಾಯರ್‌ರ ಸಂಪಾದಕತ್ವದ ಮಲಯಾಳ ವಾರಪತ್ರಿಕೆಯಲ್ಲಿ ಬರೆದ ಲೇಖನದಲ್ಲಿ ಈ ಘಟನೆಯನ್ನು ವಿವರಿಸಲಾಗಿತ್ತು.

ಪ್ರಸಿದ್ಧ ವಿಚಾರವಾದಿಯಾಗಿದ್ದ ದಿವಂಗತ ಎ.ಟಿ. ಕೋವೂರ್ ಈ ಘಟನೆಯ ನಿಜಸ್ಥಿತಿಯನ್ನು ಪರೀಕ್ಷಿಸಲು ತೀರ್ಮಾನಿಸಿದರು. ಅದಕ್ಕಾಗಿ ಪುಟ್ಟಪರ್ತಿಗೆ ಭೇಟಿ ನೀಡಿದ ಜಪಾನ್ ದೇಶದ ವ್ಯಕ್ತಿಯ ಹೆಸರು ಮತ್ತು ವಿಳಾಸ ತಿಳಿಸಬೇಕೆಂದು ಕೋವೂರ್ 1973 ಸೆಪ್ಟಂಬರ್ 11ರಂದು ಡಾ। ಭಾಗವತ್‌ರಿಗೆ ಪತ್ರ ಬರೆದರು. ಎರಡು ತಿಂಗಳು ಕಳೆದರೂ ಭಾಗವತ್‌ರಿಂದ ಪ್ರತಿಕ್ರಿಯೆ ಇಲ್ಲ, ಆದ್ದರಿಂದ ಕೋವೂರ್ ಶ್ರೀಲಂಕಾದ ಜಪಾನ್ ರಾಯಭಾರ ಕಛೇರಿಯಿಂದ ಸೈಕೋ ವಾಚ್ ನಿರ್ಮಾಪಕರ ವಿಳಾಸವನ್ನು ಪಡೆದರು. ನಂತರ 1973 ಅಕ್ಟೋಬರ್ 30ಕ್ಕೆ ಸೈಕೋ ವಾಚ್ ಕಂಪೆನಿಯ ಹಟೋರಿ ಆ್ಯಂಡ್ ಕಂಪನಿ ಲಿಮಿಟೆಡ್‌ನ ಅಧ್ಯಕ್ಷರಾದ ಶೋಜಿ ಹಟೋರಿಗೆ ಒಂದು ಪತ್ರವನ್ನು ಬರೆದರು. ಅದರಲ್ಲಿ ಡಾ। ಭಾಗವತ್ ರವರು ವಿವರಿಸಿದ ಘಟನೆಯನ್ನು ಸೇರಿಸಿದ ಬಳಿಕ ನಾಲ್ಕು ಪ್ರಶ್ನೆಯನ್ನು ಕೇಳಲಾಯಿತು.

1. ನೀವು ಅಥವಾ ನಿಮ್ಮ ಪಾಲುದಾರರು ಯಾವಾಗಲಾದರೂ ಭಾರತದಲ್ಲಿ ಸಾಯಿಬಾಬಾರನ್ನು ಸಂದರ್ಶಿಸಿದ್ದೀರಾ.?

2. ನಿಮಗೆ ಅಥವಾ ನಿಮ್ಮ ಯಾವುದೇ ಪಾಲುದಾರರಿಗೆ ಸಾಯಿಬಾಬಾರು ಶೂನ್ಯದಿಂದ ಕೈ ಗಡಿಯಾರ ಉಡುಗೊರೆಯಾಗಿ ನೀಡಿದ್ದಾರಾ.?

3. ನಿಮ್ಮ ಅಥವಾ ನಿಮ್ಮ ಯಾವುದೇ ಪಾಲುದಾರರೊಂದಿಗೆ ಖಾಸಗಿ ಕಾರ್ಯದರ್ಶಿಯವರು ಓರ್ವ ಅಪರಿಚಿತ ವ್ಯಕ್ತಿ ಬಂದು ಲಾಕರ್‌ನಿಂದ ವಾಚ್ ತೆಗೆದುಕೊಂಡು ಹೋಗಿದ್ದಾರೆಂದು ತಿಳಿಸಿದ್ದಾರಾ.?

4. ನಿಮ್ಮ ಪೈಕಿ ಯಾರಾದರೂ ಸಾಯಿಬಾಬಾರ ಭಕ್ತರಾಗಿದ್ದೀರಾ.?

ಸೈಕೋ ಕಂಪೆನಿಯ ಮಾಲಕ ಶೋಜಿ ಹಟೋರಿ 1973 ನವೆಂಬರ್ 8ಕ್ಕೆ ಕೋವೂರ್‌ರ ಪತ್ರಕ್ಕೆ ಉತ್ತರ ಕಳುಹಿಸಿದರು. ಅದರಲ್ಲಿ ಕೋವೋರ್‌ರ 4 ಪ್ರಶ್ನೆಗಳಿಗೂ 'ಇಲ್ಲ' ಎಂಬ ನಕಾರಾತ್ಮಕ ಉತ್ತರ ಬಂತು.

ಎ.ಟಿ. ಕೋವೂರ್ ಪ್ರಸ್ತುತ ಉತ್ತರದ ಫೋಟೋ ಕಾಪಿಯನ್ನು ಡಾ। ಭಾಗವತ್‌ರಿಗೆ ಕಳುಹಿಸಿದರು. ಅದರಲ್ಲಿ ಶೋಜಿ ಹಟೋರಿ ಅಥವಾ ಅವರ ಪಾಲುದಾರರಲ್ಲದ ಯಾರಾದರೂ ವ್ಯಕ್ತಿಗಳು ಮಲಯಾಳಂ ಲೇಖನದಲ್ಲಿ ವಿವರಿಸಿದ ಘಟನೆಯ ಕಥಾಪಾತ್ರರೆಂದಾದರೆ ಅವರ ಹೆಸರು ವಿಳಾಸ ಕಳುಹಿಸಿ ಕೊಡುವಂತೆ ವಿನಂತಿಸಿದರು. ಆದರೆ ಪ್ರತಿಕ್ರಿಯೆಯೇ ಇರಲಿಲ್ಲ. ಆದ್ದರಿಂದ ಎ.ಟಿ. ಕೋವೂರ್ ಈ ಘಟನೆಯನ್ನೆಲ್ಲಾ ವಿವರಿಸಿ 1976 ಸೆಪ್ಟಂಬರ್ 12ರ ಟೈಮ್ಸ್ ಆಫ್ ಇಂಡಿಯಾದಲ್ಲಿ ಲೇಖನ ಬರೆದರು. ಆಗ ಡಾ। ಭಾಗವತ್ ಆಖಾಡಕ್ಕೆ ಇಳಿದರು. 1976 ನವೆಂಬರ್ 29ರಂದು ಟೈಮ್ಸ್ ಆಫ್ ಇಂಡಿಯಾದಲ್ಲಿ ಒಂದು ಸ್ಪಷ್ಟೀಕರಣ ನೀಡಿದರು. ಅದರಲ್ಲಿ ತನಗೆ ಅಂತಹ ಘಟನೆಯ ಕುರಿತು ತಿಳಿದೇ ಇಲ್ಲವೆಂದೂ, ತಾನು ಅಂತಹ ಲೇಖನ ಯಾವುದೇ ಭಾಷೆಯಲ್ಲೂ ಬರೆದೇ ಇಲ್ಲವೆಂದೂ ಸಮರ್ಥಿಸಲು ಪ್ರಯತ್ನಿಸಿದರು.

ಮಲಯಾಳ ವಾರ ಪತ್ರಿಕೆಯು ಸಾಯಿಬಾಬಾರ ದೈವಿಕ ಶಕ್ತಿಗೆ ಉದಾಹರಣೆಯಾಗಿ ಉದ್ಧರಿಸಿದ ಸೈಕೋ ವಾಚ್‌ನ ಘಟನೆಯು ಮಹಾ ಸುಳ್ಳು ಹಾಗೂ ಉದ್ದೇಶಪೂರ್ವಕವಾಗಿ ಆ ಕಟ್ಟು ಕಥೆಯನ್ನು ರಚಿಸಲಾಗಿದೆಯೆಂದು ಎಲ್ಲರಿಗೂ ಸ್ಪಷ್ಟವಾಯಿತು.

(ವಿವರಣೆಗಾಗಿ Saibaba's Miracles: An overview Edited By Dale Beyer Stein, Page 89-98 ನೋಡಿರಿ.)

ವಾಸ್ತವದಲ್ಲಿ ಪ್ರಪಂಚ ಸೃಷ್ಟಿಕರ್ತನಿಗಲ್ಲದೆ ಬೇರೆ ಯಾರಿಗೂ ಅಡಗಿಸಿಟ್ಟದ್ದನ್ನು ಹೊರತೆಗೆಯಲು, ಲೋಕದಲ್ಲಿರುವ ಪದಾರ್ಥಗಳಿಂದ ಅವುಗಳ ರೂಪಗಳನ್ನು ಬದಲಾಯಿಸಲು ಸಾಧ್ಯವೇ ಹೊರತು ಶೂನ್ಯದಿಂದ ಯಾವುದನ್ನೂ ಸೃಷ್ಟಿಸಲು ಸಾಧ್ಯವಿಲ್ಲ. ಅವರಿಗೆ ಪರೋಕ್ಷ ಹಾಗೂ ಭವಿಷ್ಯದ ಕುರಿತು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ದೇವಮಾನವರೆಂದೂ, ದೇವನ ಅವತಾರವೆಂದು ಘೋಷಿಸುವವರು ಮಹಾ ವಂಚಕರು. ಅವರಲ್ಲಿ ವಿಶ್ವಾಸವಿರಿಸುವವರು ಅರಬಿ ಹೆಸರಿನವರಾದರೂ ಅಲ್ಲದಿದ್ದರೂ ಅವರು ಮೂಢನಂಬಿಕೆಯ ದಾಸರು. ದೇವನಲ್ಲಿ ಮಾತ್ರವಿರುವ ವಿಶೇಷತೆಗಳನ್ನು ಇತರರಿಗಿದೆಯೆಂದು ಹೇಳಿ ಸೃಷ್ಟಿಗಳನ್ನು ಪಾಲುದಾರಗೊಳಿಸುವುದು ಅಕ್ಷಮ್ಯ ಅಪರಾಧವಾಗಿದೆ.

## ಹಾಗಾದರೆ ದಿವ್ಯಶಕ್ತಿ ಇದೆ ಎಂದು ಹೇಳುವ ಮುಸ್ಲಿಮ್ ಬಾಬಾಗಳು?

ಅವರು ಕೂಡಾ ಮಹಾ ವಂಚಕರು. ದೇವನಿಗಲ್ಲದೆ ಬೇರ್ಯಾರಿಗೂ ಅಗೋಚರ ಶಕ್ತಿ ಸಾಮರ್ಥ್ಯ ಇಲ್ಲ, ಅಲೌಕಿಕ ದಾರಿಯ ಮೂಲಕ ಯಾರಿಗೂ ತಲೆನೋವು, ಹೊಟ್ಟೆನೋವು ಅಥವಾ ಮಾನಸಿಕ ರೋಗವನ್ನು ಬರಿಸಲು ಸಾಧ್ಯವಿಲ್ಲ, ಸಾಧ್ಯವಿದ್ದಿದ್ದರೆ ಎಲ್ಲರೂ ತಮ್ಮ ಶತ್ರುಗಳ ವಿರುದ್ಧ ಅದನ್ನು ಕಾರ್ಯರೂಪಕ್ಕೆ ತರುತ್ತಿದ್ದರು. ಬಾಬಾ, ಔಲಿಯಾಗಳು ಹಾಗೂ ಮಾಂತ್ರಿಕರೆಂದು ಮೆರೆಯುವವರು ಮುಗ್ಧ ಜನರ ಮಾರಣ ಹೋಮಗೈಯುವ ಆಡಳಿತಗಾರರಿಗೆ ಗುಣವಾಗದ ತಲೆ ನೋವನ್ನೋ ಅಥವಾ ಹೊಟ್ಟೆ ನೋವನ್ನೋ ನೀಡಲಿ. ಆದರೆ ಅದು ಖಂಡಿತಾ ಅಸಾಧ್ಯದ ಮಾತು. ಆದರೆ ಅದೆಷ್ಟೋ ಉದಾಹರಣೆಗಳು ನಮ್ಮ ಮುಂದೆಯೇ ಗೋಚರಿಸಿದರೂ ಅಂಧವಿಶ್ವಾಸದ ಕೆಸರಲ್ಲಿ ಹೊರಳಾಡುತ್ತಿರುವವರಿಗೆ ನಿಜ ಸ್ಥಿತಿಯ ಅರಿವಾಗುವುದೇ ಇಲ್ಲ.

ಅವರು ಮಹಾವಂತರು. ದೇವನ ಹೊರತು ಯಾರಿಗೂ ಅಗೋಚರ ಶಕ್ತಿ ಸಾಮರ್ಥ್ಯವಿಲ್ಲ, ಅಗೋಚರ ರೀತಿಯಲ್ಲಿ ಶತ್ರುಗಳಿಗೆ ತಲೆನೋವು, ಹೊಟ್ಟೆನೋವು ಅಥವಾ ಮಾನಸಿಕ ರೋಗವನ್ನು ಬರಿಸಲು ಸಾಧ್ಯವಿಲ್ಲ, ಸಾಧ್ಯವಿರುತ್ತಿದ್ದರೆ ಕ್ಲಿಂಟನ್‌ರು ಮೋಸಿಕಾ ಹಾಗೂ ಸದ್ದಾಂ ಹುಸೈನರಿಗೆ ಲೋಕದೆಲ್ಲಡೆಯಿರುವ ಎಲ್ಲಾ ಭಗವಾನ್‌ಗಳನ್ನೂ, 'ಅಮ್ಮ'ಂದಿರನ್ನೂ, ಪುಣ್ಯಪುರುಷರನ್ನೂ, ಜಾಲಿಯಾಗಳನ್ನೂ ಸೇರಿಸಿ ಆ ಪ್ರಯತ್ನ ಮಾಡುತ್ತಿದ್ದರು. ಪವಾಡ ಪುರುಷರೆಂದು ಘೋಷಿಸಿಕೊಂಡು ಜಾಲಿಯಾಗಳೆಂದು ಹೊಗಳಲ್ಪಡುವವರಿಗೆ ಅಂತಹ ಸಾಮರ್ಥ್ಯವಿದ್ದರೆ ಫೆಲಸ್ತೀನ್ ಜನತೆಯನ್ನು ಕ್ರೂರವಾಗಿ ಹಿಂಸಿಸುತ್ತಿರುವ ಇಸ್ರೇಲಿ ಆಡಳಿತಗಾರರಿಗೆ ಗುಣಪಡಿಸಲಾಗದಂತಹ ತಲೆನೋವೋ ಅಥವಾ ಹೊಟ್ಟೆನೋವೋ ಬರುವಂತೆ ಮಾಡಲಿ. ಇದು ಖಂಡಿತಾ ಸಾಧ್ಯವಿಲ್ಲ, ಅತಿ ಮಾನುಷ ಸಾಮರ್ಥ್ಯವಿದೆಯೆಂದು ಹೇಳಿಕೊಳ್ಳುವವರಿಗೆ ಸವತಃ ತಮ್ಮನ್ನೇ ರಕ್ಷಸಲು ಸಾಧ್ಯವಾಗುವುದಿಲ್ಲ, ಇತ್ತೀಚೆಗೆ ವಧಿಸಲ್ಪಟ್ಟ ಹಾಗೂ ಮಾಂತ್ರಿಕನಾಗಿ ಮೆರೆದಿದ್ದ ತಿರುವಿಲಾ ಮಲೆಯ ಫಕೀರ್ ಉಪಾಪ್ಪರ ಅನುಭವವೇ ಇದಕ್ಕೆ ಸಾಕ್ಷಿ, ಮೂಢನಂಬಿಕೆಯ ದಾಸರು ಇದನ್ನು ಅರ್ಥಮಾಡಿಕೊಂಡಿಲ್ಲವೆಂಬುವುದೇ ವಾಸ್ತವಿಕತೆಯಾಗಿದೆ.

## 6 ವಿಗ್ರಹಾರಾಧನೆಯನ್ನು ವಿರೋಧಿಸುವುದೇಕೆ?

ಮುಸ್ಲಿಮರು ಭಾವಿಸುವಂತೆ ನಾವು ಬಹುದೇವ ವಿಶ್ವಾಸಿಗಳೋ ಅಥವಾ ಬಹು ದೇವಾರಾಧಕರೋ ಅಲ್ಲ, ದೇವನು ಒಬ್ಬನೆಂದು ವಿಶ್ವಾಸವಿರಿಸಿ ಆತನನ್ನು ಆರಾಧಿಸುತ್ತಿದ್ದೇವೆ. ವಿಗ್ರಹಗಳನ್ನು ದೇವರನ್ನು ನೆನಪಿಸಲು ಹಾಗೂ ದೇವರಲ್ಲಿ ಶ್ರದ್ಧೆ ಮೂಡಲು ಪ್ರತಿಷ್ಠಾಪಿಸುತ್ತೇವೆ. ಹಾಗಿದ್ದರೂ ನೀವು ವಿಗ್ರಹಾರಾಧನೆಯನ್ನು ವಿರೋಧಿಸುವುದೇಕೆ.?

ಇಸ್ಲಾಮ್ ಏಕದೇವತ್ವವನ್ನು ಪ್ರಬಲವಾಗಿ ಪ್ರತಿಪಾದಿಸುತ್ತದೆ. ಅವನನ್ನು ಮಾತ್ರ ಆರಾಧಿಸಲು, ಪ್ರಾರ್ಥಿಸಲು ತಾಕೀತು ಮಾಡುತ್ತದೆ. ದೇವನ ಗುಣ ವಿಶೇಷಗಳು ಹಾಗೂ ಅಧಿಕಾರದಲ್ಲಿ ಸಾರ್ವಭೌಮತೆಯಲ್ಲಿ ಭಾಗಿಗಳನ್ನು ಮಾಡುವುದು ಅಕ್ಷಮ್ಯ ಅಪರಾಧವೆಂದು ಪರಿಗಣಿಸುತ್ತದೆ. ಆದ್ದರಿಂದಲೇ ವಿವಿಧ ಕಾರಣಗಳಿಂದ ವಿಗ್ರಹಾರಾಧನೆಯನ್ನು ವಿರೋಧಿಸಬೇಕಾಗುತ್ತದೆ.

1. ದೇವನು ನಿರಾಕಾರನೆಂದೂ, ಅಗೋಚರನೆಂದೂ ಹಿಂದೂ ಧರ್ಮವೂ ಸೇರಿದಂತೆ ಎಲ್ಲಾ ಧರ್ಮಗಳು ಸಾರುತ್ತದೆ.

ಕೇನೋಪನಿಷತ್‌ನಲ್ಲಿ ಹೀಗೆ ಕಾಣಬಹುದು,

''ಯನ್ಮನಸಾನ ಮನುತೇ ಯೆನಾಹುರ್ಮನೋ ಮತಂ
ತದೇವ ಬ್ರಹ್ಮತ್ವಂ ವಿದ್ದಿ ತೇದಂ ಯದಿರಮುಪಾಸತೆ'' (1:6)

ಮನಸ್ಸಿಗೆ ಅರ್ಥವಾಗಲು ಸಾಧ್ಯವಾಗದ, ಆದರೆ ಮನಸ್ಸಿಗೆ ಅರ್ಥ ಮಾಡುವ ಸಾಮರ್ಥ್ಯವನ್ನು ನೀಡುವ ಶಕ್ತಿಯೇ ಬ್ರಹ್ಮನೆಂದು ತಿಳಿಯಿರಿ. ಇದುವೇ 'ಬ್ರಹ್ಮ' ಎಂದು ಭಾವಿಸಿ ಉಪಾಸನೆ ಮಾಡುವುದು ಯಾವುದೂ ಬ್ರಹ್ಮನಲ್ಲ.

''ಯಚ್ಚಸ್ಥಕ್ಷುಷಾ ನ ಪಶ್ಯತಿ ಯೇ ಚಕ್ಷುಂಷಿ ಪಶ್ಯತಿ
ತ ದೇವ ಬ್ರಹ್ಮ ತ್ತಂ ವಿದ್ದಿ ನೇದಂ ಯದಿದ ಮುಪಾಸತೆ'' (1:7)

ಕಣ್ಣಿನಿಂದ ಕಾಣಲು ಸಾಧ್ಯವಾಗದ, ಕಣ್ಣಿನಿಂದ ಗ್ರಹಿಸಲು ಹೇತುವಾಗಿರುವುದು ಯಾವುದೋ ಅದು ಬ್ರಹ್ಮನೆಂದು ತಿಳಿಯಿರಿ. ಇದು ಬ್ರಹ್ಮನೆಂದು ತಿಳಿದು ಉಪಾಸನೆ ನಡೆಸಲ್ಪಡುವುದು ಬ್ರಹ್ಮನಲ್ಲ.

''ಯದ್ ಶ್ರೋತೇನ ನ ಶ್ಯನೋತಿ ಯೇನ ಶ್ರೋತ್ರ ಮಿದಂ ಶ್ರುತಂ
ತದೇವ ಬ್ರಹ್ಮ ತ್ವಂ ವಿದ್ದಿ ನೇದಂ ಯದಿದಮುಪಾಸತೇ'' (1:8)

ಕಿವಿಯಿಂದ ಕೇಳಲು ಸಾಧ್ಯವಿಲ್ಲದ್ದು, ಆದರೆ ಕಿವಿಗೆ ಕೇಳುವ ಸಾಮರ್ಥ್ಯವನ್ನು ನೀಡುವುದು ಯಾವುದೋ ಅದೇ ಬ್ರಹ್ಮನೆಂದು ತಿಳಿಯಿರಿ. ಅದುವೇ ಇದೆಂದು ಭಾವಿಸಿ ಆರಾಧನೆ ನಡೆಸುತ್ತಿರುವುದು ಬ್ರಹ್ಮನಲ್ಲ.

ದೇವನು ನಿರಾಕಾರನೆಂದು ಹಿಂದೂ ಧರ್ಮವು ಸ್ಪಷ್ಟಪಡಿಸುತ್ತದೆ.

ಉಪನಿಷತ್ತು ದೇವನನ್ನು 'ನಿರ್ಗತ ಆಕಾರಾತ್ಸ ನಿರಾಕಾರ': 'ಯಾರಿಗೆ ಆಕಾರವಿಲ್ಲವೋ ಅವನು' ಎಂದು ತಿಳಿಸಿದೆ. (ಸ್ವಾಮಿ ವಾಗ್ಬಟಾನಂದ ಸರಸ್ವತಿ, ಸತ್ಯಾರ್ಥ ಪ್ರಕಾಶ, ಆರ್ಯ ಪ್ರಾದೇಶಿಕ ಪ್ರತಿನಿಧಿ ಸಭೆ ಪಂಜಾಬ್ ಪುಟ 38)

ಸ್ವಾಮಿ ದಯಾನಂದ ಸರಸ್ವತಿ ಬರೆಯುತ್ತಾರೆ: 'ಈಶ್ವರನು ನಿರಾಕಾರನಾಗಿದ್ದಾನೆ. ಅವನಿಗೆ ರೂಪವಿದ್ದರೆ ಆತ ಸರ್ವವ್ಯಾಪಿಯಾಗುತ್ತಿರಲಿಲ್ಲ. ಸರ್ವವ್ಯಾಪಿಯಲ್ಲದಿದ್ದರೆ ಸರ್ವಜ್ಞನಂತಹ ಗುಣ ಇರಲಾರದು. ಏಕೆಂದರೆ ಅತ್ಯಪೂರ್ವ ವಸ್ತುವಿನಲ್ಲಿರುವ ಗುಣ-ಕರ್ಮ-ಸ್ವಭಾವವೂ ಅಪೂರ್ವವಾಗಿರಬೇಕು. ಮಾತ್ರವಲ್ಲ ದೇವನಿಗೆ ಆಕಾರವಿದೆಯೆಂದಾದರೆ ಶೀತ, ಉಷ್ಣ ರೋಗಗಳು, ಸಮಸ್ಯೆಗಳು, ಅಗಲುವಿಕೆ ಮೊದಲಾದ ಕ್ರಿಯೆಗಳು ಆಗದಿರಲು ಸಾಧ್ಯವಿಲ್ಲ. ಆದ್ದರಿಂದ ದೇವನು ನಿರಾಕಾರನೆಂದೇ ತೀರ್ಮಾನಿಸಬೇಕಾಗಿದೆ.

(ಸತ್ಯಾರ್ಥ ಪ್ರಕಾಶ ಪುಟ 288)

ಪವಿತ್ರ ಕುರ್‌ಆನ್ ಹೇಳುತ್ತದೆ: **ಅಲ್ಲಾಹನು ಸರ್ವವನ್ನೂ ಸೃಷ್ಟಿಸಿದನು ಮತ್ತು ಸಕಲ ವಸ್ತುಗಳ ಜ್ಞಾನವುಳ್ಳವನು. ಅವನೇ ಅಲ್ಲಾಹ್, ನಿಮ್ಮ ಪ್ರಭು. ಅವನ ಹೊರತು ಅನ್ಯ ಆರಾಧ್ಯನಿಲ್ಲ. ಸಕಲ ವಸ್ತುಗಳ ಕರ್ತೃ. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನು ಮಾಡಿರಿ. ಅವನು ಸಕಲ ವಸ್ತುಗಳ ಹೊಣೆಗಾರನು. ದೃಷ್ಟಿಗಳು ಅವನನ್ನು ಕಾಣಲಾರವು. ಆದರೆ ಅವನು ದೃಷ್ಟಿಗಳನ್ನು ಕಾಣುತ್ತಾನೆ. ಅವನು ಅತ್ಯಂತ ಸೂಕ್ಷ್ಮದರ್ಶಿಯೂ, ಸೂಕ್ಷ್ಮಜ್ಞನೂ ಆಗಿರುತ್ತಾನೆ.**

(ಪವಿತ್ರ ಕುರ್‌ಆನ್ 6: 101-103)

ನಿರಾಕಾರನೂ, ಅಗೋಚರನೂ ಆಗಿರುವ ದೇವನಿಗೆ ರೂಪವನ್ನು ಕಲ್ಪಿಸುವುದು ಕೃತಕವಾಗಿದೆ. ಮಿಥ್ಯವನ್ನು ಸತ್ಯದೊಂದಿಗೆ ಕಲಬೆರಕೆ ಮಾಡಿದಂತಾಗುತ್ತದೆ. ಇದು ದೇವರ ಕುರಿತು ತಪ್ಪುಕಲ್ಪನೆಯನ್ನು ವಿಶ್ವಾಸಿಗಳಲ್ಲಿ ಮೂಡಿಸುತ್ತದೆ. ಇದು ನಾವು ದೇವನಿಗೆ ಮಾಡುವ ಮಹಾ ಅನ್ಯಾಯವಾಗಿದೆ.

ಈ ಕುರಿತು ಬ್ರಹ್ಮಾನಂದ ಸ್ವಾಮಿ ಶಿವಯೋಗಿ ಬರೆಯುತ್ತಾರೆ: ನಾವು ನಮ್ಮ ತಂದೆ ಅಥವಾ ಗುರುಗಳ ಛಾಯಾಚಿತ್ರವನ್ನು ತೆಗೆಯುತ್ತೇವೆ. ಅವರ ಅನುಪಸ್ಥಿತಿಯಲ್ಲಿ ಅದನ್ನು ನೋಡಿ ಸಂತೋಷಪಡುತ್ತೇವೆ. ವಂದಿಸುತ್ತೇವೆ. ಅದೇ ರೀತಿ ದೇವಾಲಯಗಳಲ್ಲಿ ದೇವರ ಮೂರ್ತಿಯನ್ನಿಟ್ಟು ಸಂತೋಷಪಡುತ್ತೇವೆ, ಪೂಜಿಸುತ್ತೇವೆ. ಹೀಗೆ ಮಾಡದಿದ್ದರೆ ಅಲ್ಪ ಬುದ್ಧಿಯವರಿಗೆ ದೇವರು ಇದ್ದಾರೆಂದು ತಿಳಿಯುವುದಾದರೂ ಹೇಗೆ? ಎಂದು ಕಾರ್ಮನ್ ಮಾರ್ ವಾದಿಸುತ್ತಾರೆ. ಇದು ನಿಜವಾಗಿ ಅಸಂಬದ್ಧವಾಗಿದೆ. ತಂದೆ ಯಾ ಗುರುವನ್ನು

ಕಂಡು ಫೋಟೋವನ್ನು ತೆಗೆಯುತ್ತೇವೆ. ಆ ಫೋಟೋದಲ್ಲಿ ಅವರ ರೂಪವಿದೆ. ಆದರೆ ದೇವನಿಗೆ ಆಕಾರವಿಲ್ಲ, ಮತ್ತೆ ಚಿತ್ರ ತೆಗೆದದ್ದಾದರೂ ಹೇಗೆ? ತೆಗೆದವರು ಯಾರು? ಶಿಲ್ಪಿಗಳು ಕಲ್ಲು ಅಥವಾ ಇತರ ವಸ್ತುಗಳಿಂದ ಕೆತ್ತುವುದು ದೇವರ ಚಿತ್ರವೇ? ಹೀಗೆ ನಾನಾ ವಿಗ್ರಹಗಳ ರೂಪದಿಂದ ದೇವಸ್ವರೂಪವನ್ನೂ, ಆರಾಧನಾ ಕ್ರಮವನ್ನೂ ತಪ್ಪುದಾರಿಗೆಳೆಯುವುದು ದೊಡ್ಡ ಮೂರ್ಖತನವಾಗಿದೆ.

2. ಶ್ರದ್ಧೆಯನ್ನು ಕೇಂದ್ರೀಕರಿಸಲು ಅಥವಾ ನೆನಪು ಉಳಿಯಲು ನಮ್ಮಲ್ಲಿ ಮಂಗ ಅಥವಾ ನಾಯಿಗಳ ಚಿತ್ರಗಳು, ಪ್ರತಿಮೆಗಳನ್ನು ಯಾರೂ ನಿರ್ಮಿಸುವುದಿಲ್ಲ, ಅದನ್ನು ನಾವು ಇಷ್ಟಪಡುವುದೂ ಇಲ್ಲ. ಏಕೆಂದರೆ ಮಂಗಗಳು ಮತ್ತು ನಾಯಿಗಳು ನಮಗಿಂತ ನಿಕೃಷ್ಟ ದರ್ಜೆಯವು ಎಂದು ನಾವು ಭಾವಿಸುತ್ತೇವೆ. ಅದೇ ರೀತಿ ಪ್ರಪಂಚದ ಎಲ್ಲಾ ವಸ್ತುಗಳೂ, ಸೃಷ್ಟಿಗಳೂ ದೇವನೊಂದಿಗೆ ಹೋಲಿಕೆ ಮಾಡಲು ಸಾಧ್ಯವಿಲ್ಲದಂತೆ ನಿಕೃಷ್ಟವಾಗಿದೆ. ಅವುಗಳಲ್ಲಿ ಯಾವುದಾದರೂ ಒಂದನ್ನು ದೇವರನ್ನು ನೆನಪಿಸಲು, ಅವನಲ್ಲಿ ಶ್ರದ್ಧೆ ಕೇಂದ್ರೀಕರಿಸಲು ಪ್ರತಿಷ್ಠಾಪಿಸುವುದು ಸೃಷ್ಟಿಕರ್ತನಿಗೆ ನಾವು ಮಾಡುವ ದ್ರೋಹವಾಗಿದೆ. ಆದ್ದರಿಂದ ಇದು ಅಕ್ಷಮ್ಯ ಅಪರಾಧವಾಗಿದೆ.

3. ದೇವನನ್ನು ಆರಾಧಿಸುವ ರೀತಿಯನ್ನು ತಿಳಿಸಬೇಕಾದುದು ಅವನೇ ಆಗಿದ್ದಾನೆ. ವಿಗ್ರಹ, ಪ್ರತಿಮೆಗಳನ್ನು ಸಿದ್ಧಪಡಿಸಿ ತನ್ನನ್ನು ಆರಾಧಿಸಬೇಕೆಂದು ದೇವನು ಹೇಳಿಲ್ಲ, ಅಂತಹ ಆರಾಧನಾ ಕ್ರಮವನ್ನು ಕಲಿಸಲೂ ಇಲ್ಲ. ಮಾತ್ರವಲ್ಲ ವಿಗ್ರಹಗಳನ್ನು ಪ್ರತಿಷ್ಠಾಪಿಸಿ ಆರಾಧಿಸಕೂಡದೆಂದು ಬಹಳ ಕಠಿಣವಾಗಿ ಆದೇಶಿಸಿದ್ದಾರೆ.

4. ಸಾಕ್ಷಾತ್ ದೇವನ ಹೊರತು ಇತರರನ್ನು ಕರೆದು ಪ್ರಾರ್ಥಿಸಬಾರದೆಂದು ಇಸ್ಲಾಮ್ ಧರ್ಮದಂತೆ ಹಿಂದೂ ಧರ್ಮವೂ ಕಲಿಸಿದೆ. ವಿಗ್ರಹಾರಾಧನೆಯು ಬಹುದೇವಾರಾಧನೆಯಲ್ಲ ವೆಂದಾದರೆ ಅನ್ಯ ಆರಾಧ್ಯರೆಂದು ವಿಮರ್ಶಿಸಬೇಕಾಗಿಲ್ಲವಲ್ಲಾ, ಛಂದೋಪನಿಷತ್‌ನಲ್ಲಿ ಹೀಗೆ ಹೇಳಲಾಗಿದೆ, ''ಓಮಿತ್ಯೇ ತದಕ್ಷರ ಮುದ್ಗಿಥಮುಪಾಸೀತ'' (ಓಂಕಾರವೆಂಬುದು ಓರ್ವನ ನಾಮಧೇಯವೇ? ಒಮ್ಮೆಯೂ ನಾಶವಾಗದವನನ್ನು ಉಪಾಸನೆ ನಡೆಸಬೇಕು. ಬೇರೆಯವನನ್ನಲ್ಲ.)ಪ್ರಸಿದ್ಧ ಹಿಂದೂ ಸ್ತೋತ್ರವೊಂದರಲ್ಲಿ ಕಾಣಬಹುದು,

ತ್ವಮೇಕಂ ವರಣ್ಯಂ ತ್ವಮೇಕಂ ಶರಣ್ಯಂ
ತ್ವಮೇಕಂ ಜಗದ್ ಕಾರಣಂ ವಿಶ್ವರೂಪಂ

(ನಿನ್ನನ್ನು ಮಾತ್ರ ನಾವು ಆರಾಧಿಸುತ್ತೇವೆ, ನಿನಗೆ ಮಾತ್ರ ಶರಣಾಗಿದ್ದೇವೆ. ವಿಶ್ವ ಸೃಷ್ಟಿಗೆ ನೀನೇ ಕಾರಣ, ನೀನು ವಿಶ್ವಸ್ವರೂಪಿ.)

ಶ್ವೇ ತಾಶ್ರತರೋಪನಿಷತ್ತಿನಲ್ಲಿ ಹೀಗೆ ಕಾಣಬಹುದು,

''ತಮೀಶ್ವರಾಣಾಂ ಪರಮಂ ಮಹೇಶ್ವರಂ
ತಂ ದೇವತಾನಾಂ ಪರಮಂ ಚ ದೈವತಂ

**ಪತಿಂ ಪತೀನಾಂ ಪರಮಂ ಪರಸ್ತಾತ್**

**ವಿದಾಮ ದೇವಂ ಭೂವನೇಶಮೀಡ್ಯಂ'' (6-7)**

ಅದು ಎಲ್ಲಾ ಈಶ್ವರರ ಮಹಾನನಾದ ಅಜ್ಞಾಧಿಪತಿಯೂ, ಸರ್ವ ದೇವರುಗಳಿಗೆ ಪರಮ ಆರಾಧ್ಯನೂ, ಸರ್ವ ಸಂರಕ್ಷಕರ ಸಂರಕ್ಷಕನೂ, ಸಮಸ್ತ ಬ್ರಹ್ಮಾಂಡ ನಾಯಕನೂ ಆಗಿದ್ದಾನೆ. ಸುತ್ಯರ್ಹನೂ ಪ್ರಕಾಶ ಸ್ವರೂಪಿಯೂ ಆಗಿದ್ದು ಎಲ್ಲವುಗಳಿಗಿಂತಲೂ ಅತೀತನೆಂದು ನಾವು ತಿಳಿಯುತ್ತೇವೆ.

ಗೀತೆಯಲ್ಲಿ ಹೀಗಿದೆ:

**'ಯಾಂತಿ ದೇವವ್ರತಾ ದೇವಾನ್ ಪಿತೃನ್ ಯಾಂದಿ ಪಿತೃ ವೃತಾ: ಭೂತಾನಿ ಯಾಂದಿ ಭೂತೇ ಜ್ಯಾಯಾಂತಿ ಮದ್‌ಯಾಜಿನೋ ಹಮಾಂ'** ದೇವರ ಉಪಾಸನೆ ಮಾಡುವವರು ದೇವರನ್ನು ಒಲಿಸಿಕೊಳ್ಳುತ್ತಾರೆ. ಪಿತೃರನ್ನು ಆರಾಧಿಸುವವರು ಅವರನ್ನು ಧರಿಸುತ್ತಾರೆ. ಭೂತಗಳನ್ನು ಉಪಾಸನೆ ಮಾಡುವವರು ಭೂತಗಳಿಗೆ ತಲುಪುತ್ತಾರೆ. ಆದರೆ ನನ್ನ ಉಪಾಸನೆ ಮಾಡುವವರು ನನ್ನನ್ನು ಪಡೆಯುತ್ತಾರೆ. (ಉದ್ಧರಣೆ: ವಿದ್ಯಾವಾ ಚಸ್ಪತಿ, ವಿ. ಪನೋಳಿ ಶ್ರೀ ಶಂಕರ ದರ್ಶನಂ ಪುಟ-91)

ಸ್ವಾಮಿ ದಯಾನಂದ ಸರಸ್ವತಿ ಬರೆಯುತ್ತಾರೆ, ''ಸ್ತುತಿ, ಪ್ರಾರ್ಥನೆ ಹಾಗೂ ಉಪಾಸನೆಗಳನ್ನು ಶ್ರೇಷ್ಠನಾದವನಿಗೆ ಮಾತ್ರ ಮಾಡಬೇಕು. ಗುಣ, ಕರ್ಮ, ಸ್ವಭಾವ, ಪ್ರಾಮಾಣಿಕತೆ ಎಂಬ ವಿಷಯಗಳಲ್ಲಿ ಎಲ್ಲರಿಗಿಂತಲೂ ಉತ್ಕೃಷ್ಟನಾಗಿರುವವನೇ ಶ್ರೇಷ್ಠ ಎಂದು ಹೇಳಬೇಕಾಗಿದೆ. ಯಾರು ಶ್ರೇಷ್ಠರಲ್ಲಿ ಶ್ರೇಷ್ಠನೋ, ಅವನೇ ಪರಮೇಶ್ವರ. ಅವನಿಗಿಂತ ಮಿಗಿಲಾಗಿ ಈ ಮೊದಲು ಯಾರೂ ಉಂಟಾಗಿಲ್ಲ, ಉಂಟಾಗಲು ಸಾಧ್ಯವೂ ಇಲ್ಲ, ಹೀಗಿರುವಾಗ ಅವನಿಗಿಂತ ಶ್ರೇಷ್ಠನು ಇರುವುದು ಹೇಗೆ ಸಾಧ್ಯ.? ಸತ್ಯ, ದಯೆ, ನ್ಯಾಯ, ಶಕ್ತಿ ಸಾಮರ್ಥ್ಯ ಹಾಗೂ ಸರ್ವಜ್ಞನಂತಹ ಅಸಂಖ್ಯಾತ ವಿಶಿಷ್ಠ ಗುಣಗಳು ಇತರ ಜಡವಸ್ತುಗಳಿಗೋ, ಜೀವಾತ್ಮಕ್ಕೋ ಇಲ್ಲ, ಸತ್ಯಸ್ವರೂಪಿಯಾದ, ಪ್ರಕಾಶಿಸುವ ವಸ್ತುವಿನ ಗುಣಕರ್ಮಗಳೂ, ಸ್ವಭಾವಗಳೂ ಸತ್ಯವೇ ಆಗಿರುತ್ತದೆ. ಆದ್ದರಿಂದ ಮನುಷ್ಯರೆಲ್ಲ ಪರಮೇಶ್ವರನಿಗೆ ಸ್ತುತಿ, ಪ್ರಾರ್ಥನೆ, ಆರಾಧನೆಯನು ಮಾಡಬೇಕಾಗಿದೆ. ಬೇರೆ ಯಾರನ್ನೂ ಮಾಡುವಂತಿಲ್ಲ, ಬ್ರಹ್ಮ, ವಿಷ್ಣು, ಶಿವ ಎಂಬ ಪುರಾತನ ವಿದ್ವಾಂಸರು, ದೈತ್ಯರು, ದಾನವರಂತಹ ನಿಕೃಷ್ಟ ಮನುಷ್ಯರು ಹಾಗೂ ಸಾಮಾನ್ಯ ಮಾನವರೂ ದೇವನನ್ನೇ ಆರಾಧಿಸಿದ್ದರು. ಅವನ ಉಪಾಸನೆ ಹಾಗೂ ಪ್ರಾರ್ಥನೆಯನ್ನು ನಿರ್ವಹಿಸಿದ್ದರು ಬೇರೆ ಯಾರನ್ನೂ ಪ್ರಾರ್ಥಿಸಿರಲಿಲ್ಲ, ಆದ್ದರಿಂದ ನಾವೆಲ್ಲರೂ ಅದೇ ರೀತಿ ಮಾಡಬೇಕು.

(ಸತ್ಯಪ್ರಕಾಶ ಪುಟ 12-13)

ಬ್ರಹ್ಮ, ವಿಷ್ಣು, ಶಿವ ಎಂಬವರ ಸ್ತುತಿಗಾನ, ಪ್ರಾರ್ಥನೆ, ಉಪಾಸನೆ ಮಾಡಬಾರದೆಂಬುದು ಇದರ ಅರ್ಥ. ಇದೇ ವಿಷಯವನ್ನು ವಾಗ್ಭಟಾನಂದರು ಬಹಳ ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾರೆ (ವಾಗ್ಭಟಾನಂದರ ಸಂಪೂರ್ಣ ಕೃತಿಗಳು- ಒಂದನೇ ಆವೃತ್ತಿ- ಮಾತೃಭೂಮಿ ಪ್ರಿಂಟಿಂಗ ಆಂಡ್ ಪಬ್ಲಿಷಿಂಗ್ ಕಂಪೆನಿ ಲಿಮಿಟೆಡ್. ಪುಟ 357-359)

ಬ್ರಹ್ಮಾನಂದ ಸ್ವಾಮಿ ಶಿವಯೋಗಿ ವರಿಷ್ಠರಿಂದ ಉಲ್ಲೇಖಿಸುತ್ತಾರೆ:

**'ನಟ್ಟಕಲ್ಲೈತ್ತೈವಮೆನ್ನು ನಾಲು ಪುಷ್ಪಂ ಚಾರ್ತೂರಿರ್**

**ಚುತ್ತಿವಂದು ಮೊಂಟು ಚೊಲ್ಲುಮಂದಿರ ಮೆ ತ ಕ್ಕಡೋ**

**ನಟ್ಟಕಲ್ಲು ಪೆಯುಮೋ ನಾದ ತುಳ್ಳಿರುಕ್ಕಯಿಲ್**

**ಚುಟ್ಟ ಚುಟ್ಟಿ ಚಟ್ಟುಗಂ ಕರಿಚ್ಚುಷ್ಪೈಯರಿಯುಮೋ**

ಒಂದು ಕಲ್ಲನ್ನು ಪ್ರತಿಷ್ಠಾಪಿಸಿ ದೇವರೆಂದು ವಿಶ್ವಾಸದಿಂದ ಪೂಜಿಸಲಾಗುತ್ತದೆ. ಅದಕ್ಕೆ ಪ್ರದಕ್ಷಿಣೆ ಮಾಡಲಾಗುತ್ತದೆ. ಮಂತ್ರ ಜಪಿಸಲಾಗುತ್ತದೆ. ಆದರೆ ಆ ಪ್ರತಿಷ್ಠಾಪಿಸಿದ ಕಲ್ಲಿಗೆ ಅದು ಕೇಳುತ್ತದೆಯೇ? ಪದಾರ್ಥ ಮಾಡುವ ಪಾತ್ರೆ. ಅದಕ್ಕೆ ಹಾಕುವ ಸೌಟು ಪದಾರ್ಥದ ರುಚಿಯನ್ನು ತಿಳಿಯುತ್ತದೆಯೇ? (ವಿಗ್ರಹಾರಾಧನ ಖಂಡನಂ ಪುಟ-7)

5. ಜನಸಾಮಾನ್ಯರಿಗೆ ಆರಾಧಿಸಲು ವಿಗ್ರಹಗಳು ಅಗತ್ಯವೆಂಬ ವಾದವನ್ನು ಬ್ರಹ್ಮಾನಂದ ಸ್ವಾಮಿ ಶಿವಯೋಗಿಯವರು ಹೀಗೆ ಖಂಡಿಸುತ್ತಾರೆ: ''ಮಕ್ಕಳಿಗೆ ಧರಿಸಲು ಸಣ್ಣ ವಸ್ತ್ರವೇ ಬೇಕು, ದೊಡ್ಡ ವಸ್ತ್ರ ಸಾಧ್ಯವಿಲ್ಲ, ಅದೇ ರೀತಿ ಅಲ್ಪಜ್ಞಾನಿಗಳಿಗೆ ವಿಗ್ರಹಾರಾಧನೆ ಬೇಕು. ಬ್ರಹ್ಮ ಧ್ಯಾನ ಸಾಧ್ಯವಾಗುವುದಿಲ್ಲ'' ಎಂದು ವಾದಿಸುತ್ತಾರೆ. 'ಮಕ್ಕಳಿಗೆ ನೋಡಲು ಸಣ್ಣ ಸೂರ್ಯ ಬೇಕು, ದೊಡ್ಡ ಸೂರ್ಯನ ಬೆಳಕಿನಲ್ಲಿ ನೋಡಿದರೆ ಕಾಣುವುದಿಲ್ಲ' ಎಂದು ಹೇಳುವಂತೆ ಅಸಂಬದ್ಧವಾಗಿದೆ. (ವಿಗ್ರಹಾರಾಧನೆ ಖಂಡನಂ)

6. ವಿಗ್ರಹಾರಾಧಕರಾದ ಬಹುಸಂಖ್ಯಾತ ಜನರು ವಿಗ್ರಹಕ್ಕೆ ವಿಶೇಷವಾದ ಪಾವಿತ್ರ್ಯ ಹಾಗೂ ದಿವ್ಯತ್ವವನ್ನು ಕಲ್ಪಿಸುತ್ತಾರೆ. ಯಾರನ್ನು ಪ್ರತಿಷ್ಠಾಪಿಸಲಾಗಿದೆಯೋ ಅವರ ಚೈತನ್ಯ ಅದರಲ್ಲಿ ಪ್ರವಹಿಸುತ್ತದೆಂದು ವಿಗ್ರಹಾರಾಧಕರ ವಿಶ್ವಾಸ. ಬದಲಾಗಿ ಶ್ರದ್ಧೆ ಕೇಂದ್ರೀಕರಿಸುವ ಉದ್ದೇಶ ಮಾತ್ರವೆಂದಾದರೆ ಎದುರುಗಡೆ ಏನಾದರೂ ಇಟ್ಟರೂ ಸಾಕಾಗುತ್ತದೆಯಲ್ಲವೇ? ಮಾತ್ರವಲ್ಲ ವಿಗ್ರಹವನ್ನು ಬದಲಾಯಿಸಿದರೂ ವಿರೋಧಿಸಬೇಕಾಗಿಲ್ಲ. ಆದರೆ ತಾವು ಆರಾಧಿಸುವ ವಿಗ್ರಹಗಳನ್ನು ಬದಲಾಯಿಸುವುದನ್ನು ವಿಶ್ವಾಸಿಗಳಿಗೆ ಊಹಿಸಲೂ ಸಾಧ್ಯವಿಲ್ಲ. ಆದ್ದರಿಂದ ವಿಗ್ರಹಗಳು ದೇವನನ್ನು ನೆನಪಿಸಲು ಹಾಗೂ ಶ್ರದ್ಧೆ ಮೂಡಿಸಲು ಎಂಬ ವಾದ ವಾಸ್ತವವಲ್ಲ. ಅದು ಬಹುದೇವಾರಾಧನೆಯೇ ಆಗಿದೆ. ಆದ್ದರಿಂದ ಛಂದೋಗ್ಯೋಪನಿಷತ್ತು ಮತ್ತು ಸ್ವಾಮಿ ದಯಾನಂದ ಸರಸ್ವತಿ ಹಾಗೂ ವಾಗ್ಭಟಾನಂದ ಗುರುವಿಗೆ ಅನ್ಯದೇವಾರಾಧನೆಯನ್ನು ಎದುರಿಸಬೇಕಾಗಿ ಬಂತು.

8. ಆರಾಧ್ಯನನ್ನು ಅತ್ಯಂತ ಗೌರವಾದರಗಳಿಂದ, ಭಯಭಕ್ತಿಯಿಂದ ಪೂಜಿಸುವ ಕರ್ಮವೇ ಆರಾಧನೆ. ಸೃಷ್ಟಿಗಳಲ್ಲಿ ಶ್ರೇಷ್ಠನಾದ ಮಾನವ ಅದನ್ನು ತನ್ನಂತಹ ಅಥವಾ ತನಗಿಂತ ಕೆಳದರ್ಜೆಯವರಿಗೆ ಅರ್ಪಿಸುವುದು ಆತನ ಗೌರವಕ್ಕೂ ಪ್ರತಿಷ್ಠೆಗೂ ನಿಲುಕುವಂತಹದಲ್ಲ. ಆದ್ದರಿಂದ ದೇವೇತರರ ಆರಾಧನೆ ಸ್ವಂತಕ್ಕೆ ಮಾಡುವ ಅತಿಕ್ರಮವೆಂದು ಇಸ್ಲಾಮ್ ಭಾವಿಸುತ್ತದೆ. ಒಟ್ಟಿನಲ್ಲಿ ಸ್ವಾಮಿ ದಯಾನಂದ ಸರಸ್ವತಿ ಸ್ಪಷ್ಟಪಡಿಸಿದಂತೆ ನಮ್ಮ ಗೌರವ, ಅಭಿಮಾನವನ್ನು ಅದಕ್ಕೆ ಅರ್ಹತೆಯಿರುವವರಿಗೆ ಮಾತ್ರ ಅರ್ಪಿಸಬೇಕು. ಶ್ರೇಷ್ಠತೆ, ಮಹಾನತೆ, ಜ್ಞಾನಶಕ್ತಿ ಎಲ್ಲದರಲ್ಲೂ

ಘನತೆಯುಳ್ಳವನು ದೇವನು ಮಾತ್ರ. ಆದ್ದರಿಂದ ಅವನನ್ನು ಮಾತ್ರ ಆರಾಧಿಸಬೇಕು. ಅದರ ಹಕ್ಕು ಅವನಿಗೆ ಮಾತ್ರ ಮೀಸಲು. ದೇವನ ಹಕ್ಕನ್ನು ಇತರರಿಗೆ ನೀಡುವುದು ದೇವಧಿಕ್ಕಾರವೂ, ಇತರರನ್ನು ದೇವತ್ವಕ್ಕೆ ಏರಿಸಿದಂತೆಯೂ ಆಗುತ್ತದೆ. ವಿಗ್ರಹಾರಾಧನೆಯನ್ನು ಮಹಾ ಪಾಪ ಎಂದು ಹೇಳಲು ಇದೇ ಕಾರಣವಾಗಿದೆ.

# ಕಅಬಾದ ಕಪ್ಪುಕಲ್ಲು ಮತ್ತು ಶಿಲಾ ಪೂಜೆ

ವಿಗ್ರಹಾರಾಧನೆಯನ್ನು ಪ್ರಬಲವಾಗಿ ಇಸ್ಲಾಮ್ ಧರ್ಮವು ಖಂಡಿಸುತ್ತದೆ. ಹೀಗಿರುವಾಗ ಕಅಬಾದಲ್ಲಿ ಒಂದು ಕಪ್ಪು ಕಲ್ಲನ್ನು ಪ್ರತಿಷ್ಠಾಪಿಸಲು ಕಾರಣವೇನು? ಎಲ್ಲಾ ವಿಗ್ರಹಗಳನ್ನು ಅಲ್ಲಿಂದ ತೆರವುಗೊಳಿಸಿದಾಗಲೂ ಅದೊಂದನ್ನು ಮಾತ್ರ ಉಳಿಸಲಾಯಿತು. ಇದು ಶಿಲಾಪೂಜೆ ಇಸ್ಲಾಮ್‌ನಲ್ಲಿದೆಯೆಂಬುದನ್ನು ಸೂಚಿಸುತ್ತದೆಯಲ್ಲವೇ?

ಈ ಪ್ರಶ್ನೆಯು ಸಮಾಜದಲ್ಲಿ ವ್ಯಾಪಕವಾಗಿರುವ ತಪ್ಪುಕಲ್ಪನೆಯ ಕಡೆಗೆ ಬೆರಳು ತೋರಿಸುತ್ತದೆ. ಆದ್ದರಿಂದ ಕೆಲವು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ.

1. ಕಅಬಾದ ಕಪ್ಪುಶಿಲೆ (ಹಜರುಲ್ ಅಸ್ವದ್) ಇತಿಹಾಸದಲ್ಲಿ ಒಮ್ಮೆಯೂ ಯಾರಿಂದಲೂ ಆರಾಧಿಸಲ್ಪಟ್ಟಿಲ್ಲ. 360ಕ್ಕಿಂತಲೂ ಹೆಚ್ಚು ವಿಗ್ರಹಗಳು ಪೂಜಿಸಲ್ಪಟ್ಟಾಗಲೂ ಯಾರೂ ಆ ಶಿಲೆಯನ್ನು ಪೂಜಿಸಿರಲಿಲ್ಲ. ಪವಿತ್ರ ಕಅಬಾ ಹಾಗೂ ಪರಿಸರದಲ್ಲಿ ಪ್ರವಾದಿತ್ವಕ್ಕಿಂತ ಮೊದಲು ವಿಗ್ರಹಾರಾಧನೆಯ ಕಾಲದಲ್ಲೂ ಹಜರುಲ್ ಅಸ್ವದ್ ಆರಾಧ್ಯವಸ್ತುವಾಗಿರಲಿಲ್ಲ ಎಂಬುದು ವಾಸ್ತವ.

2.ವಿಶ್ವದ ಯಾವುದೇ ಪೂಜನೀಯ ವಸ್ತುವೂ ಅದರ ಸ್ವಂತ ಹೆಸರಿನಿಂದ ಕರೆಯಲ್ಪಡುವುದಿಲ್ಲ. ಉದಾಹರಣೆಗೆ, ಬ್ರಹ್ಮ, ವಿಷ್ಣು, ಶಿವ, ಕೃಷ್ಣ ಗುರುವಾಯೂರಪ್ಪರ ವಿಗ್ರಹಗಳು ಅದರ ಹೆಸರಿನಿಂದ ಕರೆಯಲ್ಪಡುತ್ತದೆ. ಅಲ್ಲದೆ ಕಲ್ಲಿನ ತುಂಡು, ಮರದಕಾಂಡ, ಹಂಚಿನ ತುಂಡು, ಮಣ್ಣಿನ ಮುದ್ದೆ ಎಂಬ ಹೆಸರಿನಲ್ಲಿ ಕರೆಯಲ್ಪಡುವುದಿಲ್ಲ. ಯಾವುದರಿಂದ ಅದನ್ನು ನಿರ್ಮಿಸಲಾಗಿದೆಯೊ ಅದರ ಹೆಸರಿನಲ್ಲಿ ಕರೆಯಲಾಗುವುದಿಲ್ಲ. ಆದರೆ ಕಅಬಾದ ಕಪ್ಪು ಕಲ್ಲು ಅದೇ ಹೆಸರಿನಿಂದ ಕರೆಯಲ್ಪಡುತ್ತದೆ. ಕಪ್ಪು ಕಲ್ಲು ಎಂಬುದರ ಅರಬಿ ಪದವೇ ಹಜರುಲ್ ಅಸ್ವದ್. ಅದು ಪ್ರತಿಷ್ಠೆಯೋ, ಪೂಜಾವಸ್ತುವೋ, ವಿಗ್ರಹವೋ ಅಲ್ಲವೆಂಬುದಕ್ಕೆ ಅದರ ಹೆಸರೇ ಪುರಾವೆಯಾಗಿದೆ.

3. ನೂರು, ಐನೂರು, ಸಾವಿರ ಮಿಟರ್ ಓಟದ ಸ್ಪರ್ಧೆ ನಡೆಯುವಾಗ ಓಟ ಆರಂಭಿಸುವ ಸ್ಥಳದಲ್ಲಿ ಒಂದು ಗುರುತನ್ನು ಇರಿಸಲಾಗುತ್ತದೆ. ಅದೇ ರೀತಿ ಪವಿತ್ರ ಕಅಬಾದ ಸುತ್ತಲೂ ಪ್ರದಕ್ಷಿಣೆ ಹಾಕುವಾಗ ಅದನ್ನು ಆರಂಭಿಸುವ ಒಂದು ಗುರುತಾಗಿದೆ ಹಜರುತ್ ಅಸ್ವದ್. ಅದರ ಹೊರತು ಅದಕ್ಕೆ ವಿಶೇಷವಾದ ಪುಣ್ಯವನ್ನೋ, ದೇವತ್ವವನ್ನೋ ಕಲ್ಪಿಸಬಾರದೆಂದು ಇಸ್ಲಾಮ್ ಹೇಳುತ್ತದೆ. ಪ್ರವಾದಿಯ ನಿಕಟ ಅನುಯಾಯಿಯೂ ಎರಡನೇ ಖಲೀಫರೂ ಆಗಿದ್ದ ಉಮರುಲ್ ಫಾರುಕ್ ಈ ವಿಷಯವನ್ನು ಬಹಳ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಆ ಕಲ್ಲಿಗೆ ಯಾರೂ ವಿಶೇಷ ಪಾವಿತ್ರ್ಯತೆಯನ್ನು ಕಲ್ಪಿಸದಿರಲಿಕ್ಕಾಗಿ ಖಲೀಫ ಉಮರ್ ಹೇಳಿದರು.

''ನೀನು ಕೇವಲ ಒಂದು ಕಲ್ಲಾಗಿರುವೆ. ಪ್ರವಾದಿವರ್ಯರು(ಸ) ನಿನ್ನನ್ನು ಚುಂಬಿಸದಿರುತ್ತಿದ್ದರೆ ನಾನೆಂದೂ ನಿನ್ನನ್ನು ಚುಂಬಿಸುತ್ತಿರಲಿಲ್ಲ.''

ಕಅಬಾದ ಪ್ರದಕ್ಷಿಣೆಗೆ ಪ್ರಾರಂಭ ಸೂಚನಾ ಫಲಕವಾಗಿ ಕಲ್ಲನ್ನೇ ಇರಿಸಬೇಕಾಗಿತ್ತೇ?

ಇದಕ್ಕೆ ಒಂದು ಐತಿಹಾಸಿಕ ಕಾರಣವಿದೆ. ಅಲ್ಲಾಹನ ಆರಾಧನೆಗಾಗಿ ಪ್ರಥಮವಾಗಿ ನಿರ್ಮಿಸಲ್ಪಟ್ಟ ಭವನವೇ ಕಅಬಾ. ದೇವನು ನಿಶ್ಚಯಿಸಿದ ಸ್ಥಳದಲ್ಲಿ ಪ್ರವಾದಿ ಇಬ್ರಾಹೀಮ್ ಮತ್ತು ಮಗನಾದ ಇಸ್ಮಾಯೀಲ್ (ಅ) ಸೇರಿ ಕಅಬಾ ನಿರ್ಮಿಸಿದರು. ಅಸ್ವದ್ ಎಂಬುದು ಆ ಪವಿತ್ರ ಮಂದಿರದ ಭಾಗವಾಗಿದೆ. ಆದ್ದರಿಂದ ಪ್ರವಾದಿಗಳು ನಿರ್ಮಿಸಿದ ಮಂದಿರದ ಭಾಗವೆಂಬ ಐತಿಹಾಸಿಕ ಪ್ರಾಧಾನ್ಯತೆ ಆ ಕಪ್ಪು ಕಲ್ಲಿಗೆ ಇದೆ.

ಆ ಕಲ್ಲಿಗೆ ದಿವ್ಯತೆಯೋ ಅಥವಾ ಆರಾಧ್ಯವಸ್ತುವಿನ ಸ್ಥಾನವೂ ಇಲ್ಲವೆಂದಾದರೆ ಅದಕ್ಕೆ ಚುಂಬಿಸಲು ಕಾರಣವೇನು? ಮನುಷ್ಯರು ಸಾಮಾನ್ಯವಾಗಿ ಆರಾಧ್ಯ ವಸ್ತುಗಳನ್ನು ಚುಂಬಿಸುವುದಿಲ್ಲ, ತಮ್ಮ ಪ್ರೀತಿಪಾತ್ರರನ್ನು ಚುಂಬಿಸುತ್ತಾರೆ. ತಮ್ಮ ಪೂರ್ವಿಕರಾದ ಇಬ್ರಾಹೀಮ್, ಇಸ್ಮಾಯೀಲರು ನಿರ್ಮಿಸಿದ ದೇವಭವನದ ಭಾಗವೆಂಬ ಕಾರಣದಿಂದ ಪ್ರವಾದಿ ಮುಹಮ್ಮದ್(ಸ)ರು ಅದನ್ನು ಪ್ರೀತಿಸಿದರು, ಗೌರವಿಸಿದರು. ತನ್ನ ವಿದಾಯ ಹಜ್ಜ್‌ನ ಸಂದರ್ಭದಲ್ಲಿ ಅದನ್ನು ಚುಂಬಿಸಿದರು. ಆದ್ದರಿಂದ ನಂತರದ ಕಾಲದಲ್ಲಿ ಯಾತ್ರಿಕರು ಅದನ್ನು ಚುಂಬಿಸುತ್ತಿದ್ದಾರೆ. ತನ್ನ ಹಿಂದೆ ಬರುವ ವಿಶ್ವಾಸಿಗಳು ತನ್ನ ಮಾದರಿಯನ್ನು ಹಿಂಬಾಲಿಸುತ್ತಾರೆಂಬುದು ಪ್ರವಾದಿಯವರಿಗೆ ತಿಳಿದ ವಿಚಾರವೇ ಆಗಿತ್ತು. ಹಾಗಿದ್ದರೂ ಪ್ರವಾದಿಗಳು ಅದನ್ನು ಚುಂಬಿಸಿದರು. ತನ್ನ ಹಿಂಗಾಮಿಗಳ ತುಟಿಗಳು ತನ್ನ ಚುಂಬನದ ಸ್ಮರಣೆಗಾಗಿ ಕಪ್ಪು ಕಲ್ಲಿನ ಮೇಲೆ ಒತ್ತಲ್ಪಡಬಹುದೆಂಬುದು ಅವರಿಗೆ ತಿಳಿದಿತ್ತು. ಆದ್ದರಿಂದ ಇದು ಉಪಕಾರ ಹಾಗೂ ಉಪದ್ರವ ಮಾಡದ ಒಂದು ಕಲ್ಲು ಮಾತ್ರವೆಂದು ಒತ್ತಿ ಹೇಳಲಾಯಿತು.

ಹಜರುಲ್ ಅಸ್ವದ್‌ನ ಚುಂಬನ ಪ್ರವಾದಿಯೊಂದಿಗಿನ ಪ್ರೀತಿಯ ಪ್ರಕಟನೆ ಮಾತ್ರ. ಅದರಲ್ಲಿ ಆರಾಧನಾಭಾವವಿಲ್ಲ, ಇರಲೂ ಬಾರದು. ಕಾಲಾತೀತವಾಗಿ ಪ್ರವಾದಿವರ್ಯರು ತನ್ನ ಅನುಯಾಯಿಗಳಿಗೆ ಅರ್ಪಿಸಿದ ಒಂದು ಕ್ರಿಯೆಯನ್ನು ಮುಂದುವರಿಸುವ ಕೆಲಸವನ್ನು ಮಾಡುತ್ತಿದ್ದಾರೆ. ಈ ಮೂಲಕ ಸಹಸ್ರಾರು ವರ್ಷಗಳಿಂದ ವಿಶ್ವಾಸಿಯು ತನ್ನ ಪೂರ್ವಿಕರೊಂದಿಗಿನ ಸಂಬಂಧವನ್ನು ಉಳಿಸಿಕೊಳ್ಳುತ್ತಾನೆ. ಶತಮಾನಗಳಿಂದ ನಿರಂತರ ಸಾಗುತ್ತಿರುವ ವಿಶ್ವಾಸಿ ಸಮೂಹದ ಮಹಾಪ್ರವಾಹದಲ್ಲಿ ತಾನೊಂದು ಹನಿ ಮಾತ್ರ ಎಂಬ ಪ್ರಜ್ಞೆಯನ್ನು ಯಾತ್ರಾರ್ಥಿಗೆ ಮೂಡಿಸುತ್ತದೆ. ಪೂರ್ವಿಕರೊಂದಿಗೆ ಭಾವನಾತ್ಮಕ ಸಂಬಂಧ ಬೆಳೆಸಲು ಹಾಗೂ ಮಾನವ ಏಕತೆಯ ಪ್ರಜ್ಞೆಯನ್ನು ಉಳಿಸಲು ಕಾರಣವಾಗಿದೆ. ಅದರ ಹೊರತು ಆ ಕಪ್ಪುಕಲ್ಲಿಗೆ ದೈವತ್ವವನ್ನು ಕಲ್ಪಿಸುವ, ಅದೊಂದು ಪ್ರತಿಷ್ಠಾಪನೆಯ ವಸ್ತುವೆಂದು ಭಾವಿಸುವ ಹಾಗೂ ಆರಾಧನಾಭಾವದಿಂದ ಸ್ಪರ್ಶಿಸುವುದು, ಚುಂಬಿಸುವುದು ಮಾಡಿದರೆ ಅದು ಅಕ್ಷಮ್ಯ ಅಪರಾಧವಾಗಿದೆ. ಅದು ಇಸ್ಲಾಮ್ ತೀವ್ರವಾಗಿ ನಿಷೇಧಿಸಿರುವ ಬಹುದೇವಾರಧನೆಯ ಭಾಗವಾಗಿದೆ.

## 8 ಅದ್ವೈತವನ್ನು ಅಂಗೀಕರಿಸುವುದಿಲ್ಲವೇಕೆ?

**ಅದ್ವೈತ ಸಿದ್ಧಾಂತವನ್ನು ಇಸ್ಲಾಮ್ ಅಂಗೀಕರಿಸುತ್ತದೆಯೇ? ಇಲ್ಲವೆಂದಾದರೆ ಏಕೆ?**

ಶ್ರೀ ಶಂಕರಾಚಾರ್ಯರು ಒಂದು ಸಿದ್ಧಾಂತದ ರೂಪದಲ್ಲಿ ಅದ್ವೈತವನ್ನು ಪರಿಚಯಿಸಿದವರು. ಅವರು ಏಳನೇ ಶತಮಾನದ ಅಂತ್ಯ ಹಾಗೂ 8ನೇ ಶತಮಾನದ ಆರಂಭದಲ್ಲಿ ಜೀವಿಸಿದ್ದರೆಂದು ಸಾಮಾನ್ಯ ನಂಬಿಕೆ. 8ನೇ ಶತಮಾನದ ಅಂತ್ಯದಲ್ಲೆಂದೂ, ಒಂಬತ್ತನೇ ಶತಮಾನದ ಆದಿಯಲ್ಲೆಂದೂ ಬದುಕಿದ್ದರೆಂದು ಹೇಳುವವರೂ ಇದ್ದಾರೆ. ಅವರ ಜನ್ಮಸ್ಥಳ ಕೇರಳದ ಕಾಲದಿಯಲ್ಲೆಂದು ಊಹಿಸಲಾಗಿದೆ. ಶಂಕರಾಚಾರ್ಯರು ತನ್ನ ಗುರು ಗೋವಿಂದ ಎಂಬವರ ಆಚಾರ್ಯರಾದ ಗೌಡಪಾದರಿಂದ ಅದ್ವೈತ ಸಿದ್ಧಾಂತವನ್ನು ಸ್ವೀಕರಿಸಿದರು. ಆದರೂ ಬಾದರಾಯಣನ ಬ್ರಹ್ಮ ಸೂತ್ರದ ವ್ಯಾಖ್ಯಾನವೆಂಬ ರೀತಿಯಲ್ಲಿ ಅವರು ಅದ್ವೈತವನ್ನು ಆವಿಷ್ಕರಿಸಿದರು. ಬ್ರಹ್ಮಸೂತ್ರವೆಂದರೆ ಉಪನಿಷತ್ತುಗಳ ಸಮನ್ವಯ ರೂಪವಾಗಿದೆ.

ಕೇರಳದ ಅದ್ವೈತದ 8ನೇ ಪ್ರಬಲ ಆಚಾರ್ಯರಾದ ವಿದ್ಯಾವಾಚಸ್ಪತಿ ವಿ. ಪನೋಳಿ ಬರೆಯುತ್ತಾರೆ: ಅದ್ವೈತ ದರ್ಶನವನ್ನು ಯಥಾರ್ಥಗೊಳಿಸುವ ಹಜ್ಜೆಯೇ ಆಚಾರ್ಯ ದೃಷ್ಟಿಕೋನ. ಬ್ರಹ್ಮನು ನಿರಾಕಾರನೂ, ಪರಮಾತ್ಮನು ಏಕನೂ, ಜೀವಾತ್ಮನೂ ಆಗಿದ್ದಾನೆಂದು ಸಾಬೀತುಪಡಿಸಲು ಶ್ರೀ ಶಂಕರ ಭಗವದ್‌ಪಾದರ್ಕರಿಗಲ್ಲದೆ ಯಾವ ಆಚಾರ್ಯರಿಗೂ ಸಾಧ್ಯವಾಗಲಿಲ್ಲ. (ಶ್ರೀ ಶಂಕರ ದರ್ಶನಂ, ಮಾತೃಭೂಮಿ ಪ್ರಿಂಟಿಂಗ್ ಆ್ಯಂಡ್ ಪಬ್ಲಿಶಿಂಗ್ ಕಂಪೆನಿ ಲಿಮಿಟೆಡ್, 1998 ಪುಟ 6)

ಬುದ್ಧ ಸಿದ್ಧಾಂತವನ್ನು ಎದುರಿಸಲು ಶ್ರೀ ಶಂಕರಾಚಾರ್ಯರು ಅದ್ವೈತ ಸಿದ್ಧಾಂತವನ್ನು ಆವಿಷ್ಕರಿಸಿದರು. ವಿ. ಪನೋಳಿ ಬರೆಯುತ್ತಾರೆ: ಶಂಕರಾಚಾರ್ಯರು ಬೌದ್ಧ ಧರ್ಮದ ವಿರೋಧಗಳನ್ನು ಎದುರಿಸಬೇಕಾಯಿತು. ಬೌದ್ಧ ಧರ್ಮದ ಬೆದರಿಕೆಯನ್ನು ಎದುರಿಸಲು ಶಕ್ತವಾದ, ನೂತನವಾದ ಒಂದು ತತ್ವಸಿದ್ಧಾಂತವನ್ನು ರೂಪಿಸಬೇಕಾದ್ದು ಅತ್ಯಗತ್ಯವಾಗಿತ್ತು. ಶ್ರೀಶಂಕರರ ಅದ್ವೈತ ಸಿದ್ಧಾಂತವು ಅತ್ಯಂತ ಸಮರ್ಥ ರೀತಿಯಲ್ಲಿ ಆ ಪಂಥಾಹ್ವಾನವನ್ನು ಎದುರಿಸಿತು.(Ibid ಪುಟ-138)

ಬೌದ್ಧ ಧರ್ಮವನ್ನು ಎದುರಿಸಲು ಶಂಕರಾಚಾರ್ಯರು ಅದರ ಆದರ್ಶಗಳನ್ನೇ ಎರವಲು ಪಡೆಯುತ್ತಿದ್ದರು. ವಿ. ಪನೋಳಿ ಬರೆಯುತ್ತಾರೆ. ಬೌದ್ಧ ಧರ್ಮದಿಂದ ತಮಗೆ

ಸ್ವೀಕಾರಾರ್ಹವಾದುದನ್ನು ಸ್ವೀಕರಿಸುತ್ತಾ, ತನ್ನಿಚ್ಛೆಯಂತೆ ಅದನ್ನು ಸೇರಿಸಿಕೊಂಡರು. 'ಪ್ರಚ್ಛನ್ನ ಬುದ್ಧ' ಎಂಬ ಹೆಸರು ಕೂಡಾ ಶ್ರೀ ಶಂಕರಾಚಾರ್ಯರಿಗೆ ಇತ್ತು. (Ibid ಪುಟ-68) ಶಂಕರಾಚಾರ್ಯರು ಅದ್ವೈತವನ್ನು ಹೀಗೆ ವಿವರಿಸಿದರು:

'ಬ್ರಹ್ಮಂ ಸತ್ಯಂ ಜಗನ್ಮಿಥ್ಯ ಜೀವೋ ಬ್ರಹ್ಮೈಮ ನಾಪರ': (ಬ್ರಹ್ಮನೇ ಸತ್ಯ. ಜಗತ್ತು ಮಿಥ್ಯ, ಜೀವಬ್ರಹ್ಮನಲ್ಲದೆ ಬೇರಾರೂ ಇಲ್ಲ) ವಿ. ಪನೋಳಿ ಬರೆಯುತ್ತಾರೆ: ಆಚಾರ್ಯ ಮುನಿಗಳು ಸಾವಿರಾರು ವರ್ಷಗಳಿಂದ ಲೋಕದ ಜನರೊಂದಿಗೆ ಹೇಳಿದರು: ಈ ಕಾಣುವ ಪ್ರಪಂಚ ಬ್ರಹ್ಮನಿಂದ ಉದಯವಾಗಿದೆ. ಅದು ಏಕವೂ ನಿತ್ಯ ನಿರಂತರವೂ ಆಗಿದೆ. ಅಂಗರ, ಅಮರ, ಪರಮಾತ್ಮ ಮೊದಲಾದ ಹೆಸರುಗಳಿಂದ ಬ್ರಹ್ಮ ಕರೆಯಲ್ಪಡುತ್ತಾನೆ. ಅದನ್ನು ಅರಿತರೆ ಸರ್ವವನ್ನೂ ಅರಿಯಲು ಸಾಧ್ಯವಾಗುತ್ತದೆ ವೇದಗ್ರಂಥಗಳಿಗೂ ಬ್ರಹ್ಮವೆಂಬ ಹೆಸರಿದೆ. ಪರಮಾತ್ಮನೂ ಜೀವಾತ್ಮನೂ ಒಂದೇ. ಕೇವಲ ಅಜ್ಞಾನ ಮಾತ್ರ ಅದನ್ನು ನಿರಾಕರಿಸುತ್ತದೆ. ಅಜ್ಞಾನವೇ ದುಃಖಕ್ಕೆ ಕಾರಣ. ಆತ್ಮ ಜ್ಞಾನೋದಯದಲ್ಲಿ ಅಜ್ಞಾನ ತೊಳೆದು ಹೋಗುತ್ತದೆ. ಜ್ಞಾನಿಗಳಿಗೆ ಕರ್ಮವಿಲ್ಲ, ಶರೀರ ಸಂಬಂಧವಿಲ್ಲ, ಬ್ರಹ್ಮನ ಉಪಾಸಕರು ಬ್ರಹ್ಮನೊಂದಿಗೆ ಲೀನವಾಗುತ್ತಾರೆ. (Ibid ಪುಟ 113) ಅವರು ಬರೆಯುತ್ತಾರೆ: ಜೇಡರ ಹುಳದಿಂದ ನೂಲು, ಶರೀರದಿಂದ ಕೇಶ, ರೋಮಗಳೆಂಬಂತೆ ಚಿರಂತನನಾದ ಬ್ರಹ್ಮನಿಂದ ಈ ಜಗತ್ತು ಉದ್ಭವವಾಗಿದೆ ಎಂದು ಮುಂಡಕೋಪನಿಷತ್ತಿನಲ್ಲಿ ಪ್ರಸ್ತಾಪಿಸಿರುವುದು ಕಾಣಬಹುದು. (Ibid ಪುಟ 48)

ಪರಮಾರ್ಥವು ಬ್ರಹ್ಮ ಮಾತ್ರವೆಂದೂ, ಜಗತ್ತು ಮಾಯೆಯೆಂದೂ ಅದು ವಾಸ್ತವವೆಂದು ಅನುಭವವಾಗಲು ಅಜ್ಞಾನವೇ ಕಾರಣವೆಂದೂ ಅದ್ವೈತ ಸಿದ್ಧಾಂತವು ಹಲವು ಉದಾಹರಣೆಗಳನ್ನು ಸಮರ್ಪಿಸಿತು. ಕೆಲವನ್ನು ಇಲ್ಲಿ ಸೇರಿಸುತ್ತೇನೆ.

1. ಚಿನ್ನದ ಸರವನ್ನು ತೋರಿಸಿ ಇದೇನೆಂದು ಕೇಳಿದರೆ ಎಲ್ಲರ ಉತ್ತರ ಚಿನ್ನದ ಸರ ಎಂದಾಗಿರುವುದು. ಅದನ್ನು ಕರಗಿಸಿ ಬಳೆಯಾಗಿ ಪರಿವರ್ತಿಸಿದರೆ ಬಳೆಯೆಂದೂ, ಕಾಲಿನ ಗೆಜ್ಜೆಯಾಗಿ ಬದಲಾಯಿಸಿದಾಗ ಕಾಲಿನ ಗೆಜ್ಜೆಯೆಂದೂ ಹೇಳಲಾಗುತ್ತದೆ. ಆದರೆ ಚಿನ್ನ ಎಂಬುದು ಇಲ್ಲಿ ಮಾಯವಾಗುವುದಿಲ್ಲ, ಈ ರೀತಿ ಜಗತ್ತು ಬ್ರಹ್ಮನ ಬದಲಾದ ರೂಪವಾಗಿದೆ. ಅಜ್ಞಾನದಿಂದಾಗಿ ಪ್ರಕಾಶಮಯ ರೂಪವನ್ನು ಕಂಡು ಅದೇ ನೈಜವೆಂದು ನಂಬುತ್ತಾರೆ. ಆಧ್ಯಾತ್ಮಿಕ ಜ್ಞಾನವನ್ನು ಪಡೆದವರು ಅವು ವ್ಯಾವಹಾರಿಕವೆಂದೂ, ಪಾರಮಾರ್ಥಿಕವಾಗಿ ಬ್ರಹ್ಮನೇ ಇರುವುದೆಂದು ಅರಿಯುತ್ತಾರೆ. ಬಳೆ, ಸರ, ಕಾಲಿನ ಗೆಜ್ಜೆ ಏನೇ ಇದ್ದರೂ ಅವೆಲ್ಲಾ ಸ್ವರ್ಣ ಎಂಬ ಅರಿವಿರುವಂತೆ ಅವರು ಜಗತ್ತನ್ನು ತಿಳಿಯುತ್ತಾರೆ.

2. ಕನಸಿನ ಅನುಭವಕ್ಕೂ ಎಚ್ಚರದಲ್ಲಿನ ಅನುಭವಕ್ಕೂ ವ್ಯತ್ಯಾಸವಿಲ್ಲ, ಆದರೆ ಕನಸಿನಲ್ಲಾಗುವ ಅನುಭವ ನೈಜವಲ್ಲ, ಅಜ್ಞಾನದಿಂದ ನೈಜವೆಂದು ತೋರುವ ವಿಷಯಗಳು. ಜ್ಞಾನ ಪಡೆಯುವುದರೊಂದಿಗೆ ಮಾಯೆಯೆಂಬ ಅರಿವಾಗುತ್ತದೆ. ನಿದ್ದೆಯಲ್ಲಿ ಕಂಡ ಕನಸು ಎಚ್ಚರವಾದಾಗ ಸುಳ್ಳೆಂದು ಸಾಬೀತಾದಂತೆ. ಇದೂ ತಿಳಿದುಬರುತ್ತದೆ.

3. ಮಂದ ಬೆಳಕಿನಲ್ಲಿ ಬಳ್ಳಿಯನ್ನು ಕಂಡರೆ ಹಾವೆಂದು ಭಾಸವಾಗುತ್ತದೆ. ಬೆಳಕು ಬರುವುದರೊಂದಿಗೆ ಸತ್ಯ ಮನವರಿಕೆಯಾಗುತ್ತದೆ. ಅದೇ ರೀತಿ ಅಜ್ಞಾನದಿಂದ ಜಗತ್ತು ಯಥಾರ್ಥವೆಂಬಂತೆ ತೋರುತ್ತದೆ. ಬ್ರಹ್ಮಜ್ಞಾನ ಲಭಿಸುವುದರೊಂದಿಗೆ ಅದು ಮಾಯೆಯೆಂದೂ, ಬ್ರಹ್ಮ ಮಾತ್ರ ಪರಮಾರ್ಥವೆಂದೂ ಮನವರಿಕೆಯಾಗುತ್ತದೆ. ಆದ್ದರಿಂದ ಜೀವಾತ್ಮಕ್ಕೆ ವ್ಯಾವಹಾರಿಕ ನೆಲೆಯಲ್ಲಿಮಾತ್ರ ಅಸ್ತಿತ್ವವಿದೆ. ಪರಮಾರ್ಥಿಕವಾಗಿ ಬ್ರಹ್ಮಮಾತ್ರವೇ ಸತ್ಯ. ಅಥವಾ ಜೀವಾತ್ಮವೂ ಬ್ರಹ್ಮಾತ್ಮವೂ ಒಂದೇ. ಜ್ಞಾನ ಗಳಿಸುವುದರೊಂದಿಗೆ ಇದು ಮನವರಿಕೆಯಾಗುತ್ತದೆ.

ಈ ಅದ್ವೈತ ಸಿದ್ಧಾಂತವನ್ನು ಇಸ್ಲಾಮ್ ಅಂಗೀಕರಿಸುತ್ತದೋ ಇಲ್ಲವೋ ಎಂದು ಚಿಂತಿಸುವ ಮೊದಲು ಇದು ದೈವಿಕವೋ, ವೈದಿಕವೋ ಅಥವಾ ಧಾರ್ಮಿಕವೋ ಎಂದು ಪರೀಕ್ಷಿಸಬೇಕು. ಶಂಕರಾಚಾರ್ಯರು ಬ್ರಹ್ಮಸೂತ್ರವನ್ನು ಅವಲಂಬಿಸಿ ಅದ್ವೈತ ಸಿದ್ಧಾಂತವನ್ನು ಆವಿಷ್ಕರಿಸಿದರು. ಬ್ರಹ್ಮಸೂತ್ರವು ಯಾರಿಗೂ ಯಾವ ರೀತಿಯಲ್ಲೂ ವ್ಯಾಖ್ಯಾನಿಸಲು ಸಾಧ್ಯವಾಗದಷ್ಟು ಅಸ್ಪಷ್ಟತೆಯಿಂದ ಕೂಡಿದೆ. ಡಾ। ರಾಧಾಕೃಷ್ಣನ್ ಬರೆಯುತ್ತಾರೆ: ''ವಾಕ್ಯಗಳನ್ನು ಸಾಧ್ಯವಾದಷ್ಟು ಕಡಿತಗೊಳಿಸುವ ಭರದಲ್ಲಿ ಸೂತ್ರಗಳು ಗ್ರಹಿಸಲು ಅಸಾಧ್ಯವೂ, ವ್ಯಾಖ್ಯಾನವು ಅನಿವಾರ್ಯವೂ ಆಯಿತು.'' (ಬ್ರಹ್ಮಸೂತ್ರ–ಪುಟ–23) ಹಾಜಿಮಿ ನಕಮುರ ಬರೆಯುತ್ತಾರೆ: ''ಬ್ರಹ್ಮಸೂತ್ರದ ಒಂದು ವಾಕ್ಯವನ್ನು ಕೂಡಾ ವ್ಯಾಖ್ಯಾನವಿಲ್ಲದೆ ಅರ್ಥೈಸಲು ಕಷ್ಟವಿದೆ. ಅದರ ಒಂದೊಂದು ವಾಕ್ಯಕ್ಕೆ ವಿಷಯವೋ ಅರ್ಥವೋ ಇರದಿರುವುದು ಸಾಮಾನ್ಯ. ಕೆಲವೊಮ್ಮೆ ಅತ್ಯಂತ ಪ್ರಧಾನವಾದ ಪದವೇ ಬಿಟ್ಟು ಹೋಗಿರುತ್ತದೆ. ಅದಿಲ್ಲದೆ ಆ ವಾಕ್ಯವನ್ನು ಗ್ರಹಿಸಲು ಸಾಧ್ಯವಿಲ್ಲ, ಎರಡೋ ಅಥವಾ ಹೆಚ್ಚೆಂದರೆ ಹತ್ತು ವಾಕ್ಯಗಳು ಒಂದು ಸೂತ್ರದಲ್ಲಿದೆ. ದೀರ್ಘವಾದ ಸೂತ್ರವು ಅಪರೂಪವಾಗಿದೆ. ಕೆಲವೊಮ್ಮೆ ಒಂದು ಸೂತ್ರದಲ್ಲಿ ಒಂದು ವಾಕ್ಯವೇ ಇರುವುದಿದೆ.'' History of Early Vedantha Philosophy, p.440.

ಉದ್ಧರಣೆ: ಬ್ರಹ್ಮ ಸೂತ್ರ ದ್ವೈತವೋ ಅದ್ವೈತವವೋ? ಪುಟ–31)

ಇದರಿಂದ ವ್ಯಾಖ್ಯಾನಕಾರರ ಭಾವನೆ ಹಾಗೂ ಉದ್ದೇಶಗಳಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು. ಬ್ರಹ್ಮಸೂತ್ರಕ್ಕೆ ಪರಸ್ಪರ ವಿರುದ್ಧವಾದ ಸಿದ್ಧಾಂತಗಳು ರೂಪಗೊಳ್ಳಲು ಇದೇ ಕಾರಣ. ಶಂಕರಾಚಾರ್ಯರ ಅದ್ವೈತ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ, ಮಧ್ವಾಚಾರ್ಯರ ದ್ವೈತ ಸಿದ್ಧಾಂತ ಎಲ್ಲವೂ ಬ್ರಹ್ಮಸೂತ್ರದ ಆಧಾರದಿಂದ ರಚಿತವಾಗಿದೆ. ಇವು ಮೂರು ಸಿದ್ಧಾಂತಗಳನ್ನು ಅಧ್ಯಯನ ಮಾಡಿದ ವಿದ್ವಾಂಸರು, ಬ್ರಹ್ಮಸೂತ್ರಕ್ಕೆ ಅದ್ವೈತದ ನೈಜ ಮೂಲ ಅಪಭ್ರಂಶಗೊಂಡಿರುವ ಬೌದ್ಧ ದರ್ಶನವೆಂದು ಅಭಿಪ್ರಾಯಿಸಿದ್ದಾರೆ.

ಭಾರತೀಯ ದರ್ಶನದ ಇತಿಹಾಸವನ್ನು ಸಮಗ್ರವಾಗಿ ಸಮರ್ಪಿಸಿದ ಪ್ರಮುಖ ಪಂಡಿತನಾದ ದಾಸಗುಪ್ತ ಹೇಳುತ್ತಾರೆ: ಸೂತ್ರಗಳ ಆಧಾರದಲ್ಲಿ ಹೇಳವುದಾದರೆ ಶಂಕರರ ದಾರ್ಶನಿಕ ಸಿದ್ಧಾಂತವನ್ನು ಬ್ರಹ್ಮಸೂತ್ರವು ಬೆಂಬಲಿಸುವುದೆಂದು ನನಗೆ ಅನಿಸುವುದಿಲ್ಲ, ಸ್ವತಃ ಶಂಕರರೇ ದ್ವೈತ ಸಿದ್ಧಾಂತ ರೂಪದಲ್ಲಿ ವ್ಯಾಖ್ಯಾನಿಸಿದ ಕೆಲವು ಸೂತ್ರಗಳು ಅದರಲ್ಲಿದೆ.

(A History of Indian philosophy vol ll, p-2)

ಅವರು ಮುಂದುವರಿಸುತ್ತಾರೆ: ತನ್ನ ದರ್ಶನವು ಉಪನಿಷತ್ತುಗಳನ್ನು ಕಲಿಸಿ ಕೊಡುತ್ತದೆಂದು ಸಾಬೀತುಪಡಿಸಲು ಶಂಕರಾಚಾರ್ಯರಿಗೆ ಹೆಚ್ಚಿನ ಆಸಕ್ತಿಯಿತ್ತು. ಆದರೆ ಆಸ್ತಿಕವಾದವೂ, ದ್ವೈತ ಸಿದ್ಧಾಂತದ ಧಾರಾಳ ನುಡಿಗಳೂ, ಉಪನಿಷತ್ತುಗಳಲ್ಲಿವೆ. ಭಾಷಾ ಪಾಂಡಿತ್ಯ ಅತ್ಯುತ್ತಮವಾಗಿದ್ದರೂ, ಶಂಕರರ ಸಿದ್ಧಾಂತವನ್ನು ಬೆಂಬಲಿಸುವುದು ಕಂಡು ಬರುವುದಿಲ್ಲ. ( Ibid,p-2)

ಬ್ರಹ್ಮಸೂತ್ರಕ್ಕೆ ಆರಕ್ಕಿಂತಲೂ ಅಧಿಕ ವೈಷ್ಣವ ವ್ಯಾಖ್ಯಾನಗಳಿವೆ. ಅದು ಶಂಕರರ ವ್ಯಾಖ್ಯಾನಕ್ಕಿಂತ ಭಿನ್ನವಾಗಿದೆ. ಮಾತ್ರವಲ್ಲ ಬಹಳ ವ್ಯತ್ಯಾಸಗಳಿವೆ. ಅದು ದ್ವೈತ ಸಿದ್ಧಾಂತಗಳಿಗೆ ಹಲವು ರೀತಿಯಿಂದ ಪುಷ್ಟಿ ನೀಡುತ್ತದೆ. ಒಟ್ಟಿನಲ್ಲಿ ಶಂಕರರ ವ್ಯಾಖ್ಯಾನಗಳಿಗಿಂತ ಬ್ರಹ್ಮಸೂತ್ರ ಗಳೊಂದಿಗೆ ಹೆಚ್ಚಿನ ಸಾಮ್ಯತೆಯಿರುವುದು ದ್ವೈತ ಸಿದ್ಧಾಂತಕ್ಕೆಂದು ನನ್ನ ಅಚಲ ವಿಶ್ವಾಸ.

(Ibid vol-l P.420-421)

ಶಂಕರಾಚಾರ್ಯರ ಅನುಯಾಯಿಯೆಂದು ಸ್ವಯಂ ಒಪ್ಪಿಕೊಂಡಿರುವ ಡಾ। ರಾಧಾಕೃಷ್ಣನ್ ಬರೆಯುತ್ತಾರೆ: ಅಜ್ಞಾನದಿಂದ ಲೋಕವು ಯಥಾರ್ಥವಾಗಿ ತೋರುತ್ತ ದೆಂಬ ದೃಷ್ಟಿಕೋನವು ಬ್ರಹ್ಮಸೂತ್ರಕ್ಕಿರಲಿಲ್ಲ. ಪ್ರಪಂಚದ ಸೃಷ್ಟಿಯನ್ನು ಒಂದು ಗಂಭೀರ ವಿಷಯವಾಗಿ ಸೂತ್ರಧಾರನು ಕಂಡಿದ್ದಾನೆ. ಸಂಖ್ಯಾಗಣಿತಿಯ ಪ್ರಕೃತಿಯು ಪ್ರಪಂಚದ ಸೃಷ್ಟಿಗೆ ಕಾರಣವಲ್ಲವೆಂದೂ, ಅತೀವ ಬುದ್ಧಿವಂತನಾದ ಬ್ರಹ್ಮನ ಕೈವಾಡ ಅದರಲ್ಲಿದೆಯೆಂದು ಸೂತ್ರಕಾರನ ವಾದ. ಲೋಕವು ಮಾಯೆಯೆಂಬ ಯಾವುದೇ ವಾದವೂ ಸೂಚನೆಯೂ ಇಲ್ಲಿಲ್ಲ.

(Brahma Suthra, P.252)

ಜೀವಾತ್ಮವೂ ಪರಮಾತ್ಮವೂ ಒಂದೇ ಎಂಬ ಶಂಕರದರ್ಶನವನ್ನು ಡಾ। ರಾಧಾಕೃಷ್ಣರು ನಿರಾಕರಿಸುತ್ತಾರೆ. ''ಜೀವಾತ್ಮವು ಕರ್ಮನಿರತವಾಗಿದೆ. ಅದು ಒಳಿತು-ಕೆಡಕನ್ನು ಪಡೆಯುತ್ತಾ, ಸುಖ ದುಃಖ ಸಂತೋಷವನ್ನು ಅನುಭವಿಸುತ್ತಲೂ ಇದೆ. ಪರಮಾತ್ಮಕ್ಕೆ ಬೇರೆಯೇ ಸ್ವಭಾವವಿದೆ. ಅದು ಎಲ್ಲಾ ದುರಂತಗಳಿಂದಲೂ ಸ್ವತಂತ್ರವಾಗಿದೆ. ಎರಡೂ ಭಿನ್ನವಾಗಿರುವುದರಿಂದ ಜೀವಾತ್ಮದ ಅನುಭವಗಳು ಪರಮಾತ್ಮವನ್ನು ಬಾಧಿಸುವುದಿಲ್ಲ. ಜೀವಾತ್ಮವು ಸುಖ ದುಃಖವನ್ನು ಅನುಭವಿಸುವುದರಿಂದ ಅದು ಕರ್ಮವಿಧೇಯವಾಗಿದೆ. ಆದರೆ ಪರಮ ಆತ್ಮವು ಅದಕ್ಕಿಂತ ಮಿಗಿಲಾಗಿದೆ.''

''ಸ್ವರ್ಗ ಶಕ್ತಿಯಾದ ಬ್ರಹ್ಮವು ಜೀವಾತ್ಮಕ್ಕಿಂತ ಭಿನ್ನವಾಗಿದೆ. ಜೀವಾತ್ಮಕ್ಕೆ ಸ್ವಯಂಭೂ ಆಗಲು, ಸ್ವಯಂ ನಾಶ ಹೊಂದಲು ಸಾಧ್ಯವಿಲ್ಲ. ಪ್ರಯೋಜನಕಾರಿಯಲ್ಲದ ಅನಿಷ್ಟವಾದ ಕರ್ಮಗಳನ್ನು ಬ್ರಹ್ಮ ಮಾಡುವುದಿಲ್ಲ. ಉಪಕಾರ ಮಾಡುವ ಅಥವಾ ಹಾನಿ ಮಾಡುವ ಅಗತ್ಯವೇ ಅದಕ್ಕಿಲ್ಲ. ಬ್ರಹ್ಮನ ಅರಿವಿಗೆ ಬಾರದ ಅಥವಾ ಬ್ರಹ್ಮನ ಪಾಲು ಇಲ್ಲದ ಯಾವುದೂ ಇಲ್ಲ. ಜೀವಾತ್ಮಕ್ಕೆ ವಿಭಿನ್ನವಾದ ಸ್ವಭಾವ ವೈಶಿಷ್ಟ್ಯವಿದೆ. ಮೇಲೆ ಸೂಚಿಸಿದ ಎಲ್ಲಾ ಪರಿಮಿತಿಗಳು ಅದಕ್ಕಿದೆ. ಜೀವಾತ್ಮವೂ ಪರಮಾತ್ಮವೂ ಒಂದೇ ಎಂದು ನಾವು ಭಾವಿಸುವುದಿಲ್ಲ. ಏಕೆಂದರೆ ಅವುಗಳ ನಡುವಿನ ವ್ಯತ್ಯಾಸವನ್ನು ಬಹಳ ಸ್ಪಷ್ಟವಾಗಿ ಪ್ರಸ್ತಾಪಿಸಲಾಗಿದೆ.'' (Ibid - 417)

ಜೀವಾತ್ಮ ಮತ್ತು ಪರಮಾತ್ಮವು ಒಂದೇ ಎಂಬ ಶಂಕರಾಚಾರ್ಯರ ಸಿದ್ಧಾಂತವನ್ನು ಬ್ರಹ್ಮಸೂತ್ರವು ಒಪ್ಪುವುದಿಲ್ಲವೆಂಬ ಸತ್ಯವನ್ನು ಡಾ। ರಾಧಾಕೃಷ್ಣನ್‌ರಂತೆ ಹಲವಾರು ದಾರ್ಶನಿಕರು ಸ್ಪಷ್ಟಪಡಿಸಿದ್ದಾರೆ. ಶಂಕರರ ದ್ವೈತದ ಪ್ರಬಲ ಬೆಂಬಲಿಗನಾಗಿದ್ದರೂ ಡಾ। ರಾಧಾಕೃಷ್ಣನ್‌ರು ಇದೇ ಕಾರಣದಿಂದ ವಿರೋಧ ವ್ಯಕ್ತಪಡಿಸಬೇಕಾಯಿತು. ಇದೇ ರೀತಿ ಶಂಕರಾಚಾರರ್ಯರು ನಿರಂತರವಾಗಿ ಆವರ್ತಿಸುವ 'ಮಾಯೆ' ಎಂಬ ಪದವನ್ನು ಬ್ರಹ್ಮ ಸೂತ್ರದ ಒಂದೆಡೆ ಮಾತ್ರ ಪ್ರಯೋಗಿಸಲಾಗಿದೆ.( ಬ್ರಹ್ಮಸೂತ್ರ 3:2-3)

ಸ್ವಪ್ನಲೋಕವು ಅದರ ಮೌಲಿಕ ಸ್ವಭಾವದಲ್ಲಿ ಕೇವಲ ಒಂದು ತೋರಿಕೆಯೆಂದೂ ಎಚ್ಚರದ ಸ್ಥಿತಿಯ ವಿಶೇಷತೆಗಳು ಅದಕ್ಕಿಲ್ಲವೆಂದೂ ಸೂತ್ರಕಾರನು ಸ್ಪಷ್ಟಪಡಿಸಿದ್ದಾನೆ. ಅಥವಾ ಒಂದೆಡೆ 'ಮಾಯೆ' ಎಂಬ ಪದಪ್ರಯೋಗವೇ ಶಂಕರಾಚಾರ್ಯರ ಸಿದ್ಧಾಂತಕ್ಕೆ ವಿರುದ್ಧವಾಗಿದೆ. ಸ್ವಪ್ನದ ಅನುಭವ ಮತ್ತು ಎಚ್ಚರದ ಸ್ಥಿತಿಯು ಒಂದೇ ಎಂಬ ವಾದವನ್ನು ಶಂಕರ ದರ್ಶನವು ವಿಮರ್ಶಿಸುತ್ತದೆ.

ವಾಸ್ತವಿಕತೆಯನ್ನು ಪಾರಮಾರ್ಥಿಕ ಹಾಗೂ ವ್ಯಾವಹಾರಿಕವೆಂದು ಶಂಕರರು 2 ವಿಭಾಗ ಮಾಡಿ ವ್ಯಾವಹಾರಿಕವು ಮಾಯೆಯೆಂದು ವಾದಿಸಿದರು. ಆದರೆ ಇಂತಹ ವಿಂಗಡನೆಯು ಬ್ರಹ್ಮಸೂತ್ರಕ್ಕೆ ಅಪರಿಚಿತವಾಗಿದೆ. ಡಾ। ನಗಮುದ ಬರೆಯುತ್ತಾರೆ: 'ಇದು ವ್ಯಾವಹಾರಿಕತೆಯ ಅರ್ಥದ ವಿವರಣೆಯಾಗಿದೆ. ಪರಮಾರ್ಥಕತೆಯ ಆಧಾರದಲ್ಲಿರುವುದಲ್ಲ, ಪರಮಾರ್ಥದಲ್ಲಿ ಇವೆರಡೂ ಒಂದೇ ಆಗಿದೆ. ಶಂಕರರ ಚಿಂತನೆಗಳು ಬ್ರಹ್ಮಸೂತ್ರದ ಸ್ವತಕ್ಕೆ ನಿಲುಕುವುದಿಲ್ಲ.' (History of Early Vedantha Philosophy P. 460)

ಉದ್ಧರಣೆ: ಬ್ರಹ್ಮ ಸೂತ್ರ ದ್ವೈತವೋ? ಅದ್ವೈತವೋ, ಪುಟ-44

ಶಂಕರಾಚಾರ್ಯರ ಅದ್ವೈತ ಸಿದ್ಧಾಂತವು ವೇದ ಹಾಗೂ ಉಪನಿಶತ್ತುಗಳ ಸಮನ್ವಯ ರೂಪವಾದ ಬಾದರಾಯಣ ಬ್ರಹ್ಮಸೂತ್ರಕ್ಕೆ ವಿರುದ್ಧವಾಗಿದೆಯೆಂದು ಇವೆಲ್ಲ ಸಂಶಯಾತೀತವಾಗಿ ಸ್ಪಷ್ಟಪಡಿಸಿದೆ. ಅವರ ನೈಜ ಮೂಲವಾದ ಗೌತಪಾದನ್ ಈ ವಿಷಯವನ್ನು ಬೌದ್ಧಧರ್ಮಿಯರೊಂದಿಗೆ ಬಹಿರಂಗವಾಗಿ ಒಪ್ಪಿಕೊಂಡಿದ್ದಾರೆ. ಡಾ। ರಾಧಾಕೃಷ್ಣನ್ ಬರೆಯುತ್ತಾರೆ: ''ನನ್ನ ದರ್ಶನವು ಯಾವುದೇ ಧರ್ಮಶಾಸ್ತ್ರಗ್ರಂಥಗಳನ್ನು, ಈಶ್ವರಸ್ತೋತ್ರತಸ್ಸನ್ನು ವ್ಯತೆಯನ್ನು ಆಧಾರವಾಗಿಸುವುದಿಲ್ಲ ಎಂಬ ನೆಲೆಯಲ್ಲಿ ಅವರು ಬೌದ್ಧ ಧರ್ಮೀಯರೊಂದಿಗೆ ವಿನಂತಿ ಮಾಡಿದರು.'' (ಭಾರತೀಯ ದರ್ಶನ, ಭಾಗ ಎರಡು, ಪುಟ 444)

ಶಂಕರಾರ್ಚಾರ ಅದ್ವೈತವು ವೇದಕ್ಕೆ ವಿರುದ್ಧವೆಂಬಂತೆ ಯುಕ್ತಿಗೂ ವಿರುದ್ಧವಾಗಿದೆ. ಇದೇ ಕಾರಣದಿಂದ ತುಂಬಾ ಪ್ರಸಕ್ತವಾದ ಹಲವಾರು ಪ್ರಶ್ನೆಗಳಿಗೆ ಉತ್ತರಿಸಲಾಗದೆ ಅದ್ವೈತವಾದಿಗಳು ಸೋಲುತ್ತಾರೆ. ಕೆಲವನ್ನು ಇಲ್ಲಿ ಸೇರಿಸುತ್ತೇನೆ.

1.ಲೋಕವು ಒಂದು ಮಾಯೆಯೆಂದು ಹೇಳುವ ಶಂಕರಾಚಾರ್ಯರು ಹಾಗೂ ಅವರ ಶರೀರ, ಅವಯವಗಳು, ಮನಸ್ಸು ಹಾಗೂ ಬುದ್ಧಿಯೆಲ್ಲವೂ ಮಾಯೆಯೇ ಅಲ್ಲವೇ? ಪ್ರಪಂಚ

ಒಂದು ಮಾಯೆಯೆಂದು ಕಂಡುಹಿಡಿದ ಮನಸ್ಸು ಮಾಯೆಯಾದ್ದರಿಂದ ಮಾಯೆಯ ಸಂಶೋಧನೆಯೂ ಆಕಸ್ಮಿಕವಲ್ಲವೇ? ಅದ್ವೈತ ಸಿದ್ಧಾಂತವು ಮನಸ್ಸಿನ ಸಂಶೋಧನೆಯಾದ್ದರಿಂದ ಅದ್ವೈತವೂ ಮಾಯೆಯಲ್ಲವೇ? ಅಂತೆಯೇ ಲೋಕವೇ ಆಕಸ್ಮಿಕವಾದ್ದರಿಂದ ಅದ್ವೈತ ಸಿದ್ಧಾಂತವು ಮಾಯೆಯ ದರ್ಶನವೆಂಬ ನೆಲೆಯಲ್ಲಿ ಅದೂ ಮಾಯೆಯಲ್ಲವೇ?

2. ಬಾದರಾಯಣನೂ ಆತನ ಬ್ರಹ್ಮಸೂತ್ರವೂ ಮಾಯೆಯಲ್ಲವೇ? ಮಾಯೆಯಾದ ಬ್ರಹ್ಮಸೂತ್ರಕ್ಕೆ ಮಾಯೆಯಾದ ಶಂಕರಾಚಾರ್ಯರು ನೀಡಿದ ವ್ಯಾಖ್ಯಾನವೂ ಮಾಯೆಯಲ್ಲವೇ?

3.ಸತ್ಯವಾಗಿರುವ ಬ್ರಹ್ಮನ ಮತ್ತು ಅವಾಸ್ತವಿಕವಾಗಿರುವ ಜಗತ್ತಿನ ನಡುವೆ ಸಂಬಂಧ ವೇನು? ಜಗತ್ತು ಬ್ರಹ್ಮನಿಂದ ಅಪರಿಚಿತವಲ್ಲವೆಂದಾದರೆ, ಬ್ರಹ್ಮದಲ್ಲಿ ಅಧಿಷ್ಠಿತವೆಂದಾದರೆ ಬದಲಾವಣೆ ವಿಧೇಯವಾದ ಜಗತ್ತು ಮತ್ತು ಬದಲಾವಣೆಗೆ ವಿಧೇಯನಲ್ಲದ ಬ್ರಹ್ಮನೂ ಒಂದಾಗಲು ಹೇಗೆ ಸಾಧ್ಯ? ಮಾಯೆಯೂ ಪರಮಾರ್ಥವೂ ಸಮಾನವಾಗಲು ಸಾಧ್ಯವೇ?

4. ಬ್ರಹ್ಮನು ಮಾಯೆಯಾದ ಪ್ರಪಂಚವನ್ನು ಸ್ವೀಕರಿಸುತ್ತಾನೋ? ಬ್ರಹ್ಮನು ಜಗತ್ತಿಗೆ ಕಾರಣಕರ್ತನೇ ಆಗಿದ್ದರೆ ಕಾರಣಕರ್ತನಾದ ಬ್ರಹ್ಮನು ಅನಂತನೂ ಸ್ವಯಂಸ್ಥಿರನೂ ಆಗಿರುವುದರಿಂದ ಜಗತ್ತು ಕೂಡಾ ಅನಂತವೇ ಆಗಬೇಕಲ್ಲವೇ.?

5. ಜಗತ್ತು ಶಂಕರಾಚಾರ್ಯರ ವಾದದಂತೆ ನೆರಳಾಗಿದ್ದರೆ, ನ್ಯೂನ್ಯತೆ ರಹಿತವಾದ ಬ್ರಹ್ಮನ ನೆರಳಿನಲ್ಲಿ ನ್ಯೂನ್ಯತೆ ಇರಲು ಸಾಧ್ಯವೇ? ಅಪರಾಧ ಮುಕ್ತವಾದ ಬ್ರಹ್ಮನ ನೆರಳಲ್ಲಿ ಅಪರಾಧ ಇರಲು ಸಾಧ್ಯವೇ? ನೆರಳಿನಲ್ಲಿ ಪಾಪ-ಪುಣ್ಯ ಇರಲು ಹೇಗೆ ಸಾಧ್ಯ?

6. ಮಾಯೆಗೆ ಅಸ್ತಿತ್ವವಿದೆಯೇ? ಇಲ್ಲದಿದ್ದರೆ ಈ ಕಾಣುವ ಪ್ರಪಂಚವನ್ನು ನಿರ್ಮಿಸಲು ಶಕ್ತವಾಗಿದೆಯಲ್ಲವೇ ಮಾಯೆ. ಅಸ್ತಿತ್ವವಿದೆಯೆಂದಾದರೆ ಬ್ರಹ್ಮನೊಂದಿಗೆ ಅಸ್ತಿತ್ವವಿರುವ ಬೇರೇನಾದರೂ ಇದೆಯೇ? ಇದ್ದರೆ ಅದು ದೇವನಾಗುವುದಿಲ್ಲವೇ?

7. ಜಗತ್ತಿಗೆ ಬ್ರಹ್ಮ ಕಾರಣವೋ ಅಥವಾ ಅಜ್ಞಾನವೋ? ಅಜ್ಞಾನವೆಂಬುಂದು ಯಾರ ಸೃಷ್ಟಿ? ಬ್ರಹ್ಮನೇ ಅಜ್ಞಾನಕ್ಕೆ ಕಾರಣನೇ? ಅಜ್ಞಾನವು ಮಾಯೆಯಲ್ಲವೇ? ಹಾಗಿದ್ದರೆ ಮಾಯೆಯಾದ ಅಜ್ಞಾನವು ಪ್ರಪಂಚ ಮಾಯೆಯೆಂದು ತೋರದಿರಲು ಕಾರಣವಾದ ಸಿದ್ಧಾಂತವೂ ಮಾಯೆಯಲ್ಲವೇ?

8. ಅಜ್ಞಾನ ಪಾರಮಾರ್ಥಿಕ ಸತ್ಯವೆಂಬ ವಾದವಿದ್ದರೆ ಪಾರಮಾರ್ಥಿಕವಾಗಿ ಬ್ರಹ್ಮವೂ ಇದೆ. ಅಜ್ಞಾನವೂ ಇದೆ. ಅದು ದೇವನನ್ನು ಅಂಗೀಕರಿಸಿದಂತಾಗದೇ? ಎರಡು ಸತ್ಯವಿದೆ ಯೆಂದು ಒಪ್ಪಿದಂತಾಗುತ್ತದೆ. ಆದ್ದರಿಂದ ಅಜ್ಞಾನವು ಪಾರಮಾರ್ಥಿಕ ಸತ್ಯವೆಂದು ಹೇಳಿದರೂ, ವ್ಯಾವಹಾರಿಕವೆಂದು ವಾದಿಸಿದರೂ ಅಸಂಬದ್ಧವೆನಿಸುವುದಿಲ್ಲವೇ?

9. ಕನಸಿನ ಅನುಭವ ಹಾಗೂ ಎಚ್ಚರದ ಅನುಭವ ಒಂದೇ ಎಂಬ ಶಂಕರಾಚಾರ್ಯರ ವಾದ ತಪ್ಪಲ್ಲವೇ? ಸ್ವಪ್ನವು ಕೇವಲ ತೋರಿಕೆ ಮಾತ್ರ ಎಂಬುದು ನಿಜಸಂಗತಿಯಲ್ಲವೇ? ಒಬ್ಬನಿಗೆ ಬಿದ್ದು ಕಾಲು ಮುರಿಯತೆಂದು ಕನಸು ಕಂಡರೆ ಕಾಲು ಮುರಿದಂತೆ ನೋವನುಭವಿಸಿದಂತೆ

ನಾಸವಾಗುತ್ತದೆ. ಅದು ಕನಸು ಮಾತ್ರ. ಎಚ್ಚರವಾದಾಗ ಕಾಲು ಸರಿಯಾಗಿಯೇ ಇರುತ್ತದೆ. ಆದರೆ ಎಚ್ಚರದ ಸ್ಥಿತಿಯಲ್ಲಿ ಕಾಲು ಮುರಿದರೆ ಅದು ವಾಸ್ತವವಾಗಿರುತ್ತದೆ.

10.ಎಚ್ಚರದ ಸ್ಥಿತಿಯ ಅನುಭವಗಳಿಗೆ ವಸ್ತುಸ್ಥಿತಿಯೊಂದಿಗೆ ಸಂಬಂಧವಿರುತ್ತದೆ. ಗಾಯವಾದರೆ ಮಾತ್ರ ರಕ್ತ ಬರುತ್ತದೆ. ಆದರೆ ಕನಸಿನಲ್ಲಿ ವಾಸ್ತವಿಕವಲ್ಲದ ಘಟನೆಗಳು ಅನುಭವವಾಗುತ್ತದೆ. ಕನಸು ಮತ್ತು ವಾಸ್ತವ ಒಂದೇ ಆಗಲು ಸಾಧ್ಯವೇ ಇಲ್ಲ ಅಲ್ಲವೇ?

11. ಸ್ವಪ್ನವೆಂಬುದು ಸುಳ್ಳೋ ಅಥವಾ ಮಾಯೆಯೋ ಅಲ್ಲ, ಕನಸು ಕಾಣಬೇಕಾದರೆ ಕಾಣುವ ವ್ಯಕ್ತಿ ಬೇಕು. ಆತ ನಿದ್ರಿಸಿರಬೇಕು. ಕನಸು ಕಾಣುವುದಕ್ಕೆ ಯಾವುದೋ ಒಂದು ವಾಸ್ತವಿಕ ಲೋಕದ ಅಸ್ತಿತ್ವವಿರಬೇಕು. ಆದ್ದರಿಂದ ಕನಸು ಮಾಯೆ ಎಂಬ ವಾದವೇ ಸರಿಯಲ್ಲ, ಎದ್ದೆ ಬಂದರೆ ಮಾತ್ರ ಕನಸು ಕಾಣಲು ಸಾಧ್ಯ. ಜೀವನದಲ್ಲಿ ಯಾವುದನ್ನೂ ನೋಡಲಾಗದ ಅಂಧ ವ್ಯಕ್ತಿ ಕನಸು ಕಾಣುತ್ತಾನೆಯೇ? ಹಾಗಾದರೆ ಕನಸು ಕಾಣಲು ಕಣ್ಣೆಂಬ ವಸ್ತು ಇರಲೇಬೇಕು.

12. ಕತ್ತಲಿನಲ್ಲಿ ಹಗ್ಗವನ್ನು ನೋಡುವಾಗ ಹಾವೆಂದು ಭಾಸವಾಗುವುದು. ಕತ್ತಲು, ಹಾವು, ಹಗ್ಗ ಎಂಬುದು ವಾಸ್ತವಿಕತೆಯಾದುದರಿಂದ ಆಗಿದೆ. ಬೆಳಕು ಬರುವಾಗ ಹಗ್ಗವೆಂದು ತಿಳಿಯಲು ಹಗ್ಗಕ್ಕೆ ಅಸ್ತಿತ್ವವಿರುವುದು ಕಾರಣ. ವಾಸ್ತವ ಲೋಕದಲ್ಲಿ ಹಗ್ಗ, ಹಾವು, ಕತ್ತಲು ಇಲ್ಲದಿರುತ್ತಿದ್ದರೆ ಹಾವೆಂಬ ಭಾವನೆಯೇ ಬರುತ್ತಿರಲಿಲ್ಲ, ಆದ್ದರಿಂದ ಶಂಕರಾಚಾರ್ಯರ ಲೋಕ ಮಾಯೆಯೆಂದೂ, ಅಜ್ಞಾನವೇ ಅದನ್ನು ನೈಜವೆಂದು ಬಿಂಬಿಸುತ್ತದೆಂದೂ ಸಾಬೀತುಪಡಿಸಲು ನೀಡಿದ ಉದಾಹರಣೆಗಳು ಕೂಡಾ ಪ್ರಪಂಚ ಮಾಯೆಯಲ್ಲ, ವಾಸ್ತವವೆಂಬುದನ್ನು ಸಾಬೀತುಪಡಿಸುತ್ತದೆ.

13. ವಾಸ್ತವದಲ್ಲಿ ಜೀವಾತ್ಮ, ಬ್ರಹ್ಮ ಅಥವಾ ಪರಮಾತ್ಮನು ಒಂದೇ ಎಂದೂ ಆದರಲ್ಲಿ ಜೀವಾತ್ಮವು ಮಿಥ್ಯವೆಂದೂ ವಾದಿಸುವ ಶಂಕರಾಚಾರ್ಯರು, ಜೀವಾತ್ಮವು ಬ್ರಹ್ಮಜ್ಞಾನವನ್ನು ಗಳಿಸುವ ಮೂಲಕ ಪರಮಾತ್ಮ ಅಥವಾ ಬ್ರಹ್ಮವೆಂದು ಮನವರಿಕೆಯಾಗುತ್ತದೆಂದು ವಾದಿಸುತ್ತಾರೆ. ವ್ಯಾವಹಾರಿಕವಾಗಿ ಮಾತ್ರ ಅಸ್ತಿತ್ವವಿರುವ, ಪಾರಮಾರ್ಥಿಕತೆಗೆ ನಿಲುಕದ ಜೀವಾತ್ಮವು ಪರಮಾತ್ಮನಾಗಿ ಬದಲಾಗುವುದು ಹೇಗೆ? ಸೂರ್ಯನು ನೀರಿನಲ್ಲಿರುವ ಅದರ ಪ್ರತಿಬಿಂಬದಂತೆ ಪರಮಾತ್ಮ ಹಾಗೂ ಜೀವಾತ್ಮವೆಂದು ಗೌಡಪಾದರೂ ಶಂಕರಾಚಾರ್ಯರೂ ಉದಾಹರಿಸುತ್ತಾರೆ. ಪ್ರತಿಬಿಂಬವು ಸೂರ್ಯನೂ ಅಲ್ಲ, ಅದರ ಅಂಶವೂ ಅಲ್ಲ, ವಾಸ್ತವದಲ್ಲಿ ಅಸ್ತಿತ್ವವಿಲ್ಲದ ಪ್ರತಿಬಿಂಬವು ಸೂರ್ಯನಾಗಲು ಹೇಗೆ ಸಾಧ್ಯ? ಜೀವಾತ್ಮವು ಮಿಥ್ಯೆಯೆಂದಾದರೆ ಅದು ಬ್ರಹ್ಮಜ್ಞಾನ ಗಳಿಸುವುದು ಹೇಗೆ? ಜೀವಾತ್ಮ ವ್ಯಾವಹಾರಿಕವೊ? ವಾಸ್ತವಿಕವೊ? ವ್ಯಾವಹಾರಿಕ ಯಾ ಮಿಥ್ಯ ಎಂದಾದರೆ ಅಸ್ತಿತ್ವವಿಲ್ಲದ ಒಂದು ಬ್ರಹ್ಮಜ್ಞಾನ ಗಳಿಸುವುದು ಹೇಗೆ? ನೈಜವೆಂದಾದರೆ ಪರಮಾತ್ಮದೊಂದಿಗೆ ಜೀವಾತ್ಮವು ಅಸ್ತಿತ್ವದಲ್ಲಿ ಇರಲೇ ಬೇಕಲ್ಲವೇ? ಇದು ದ್ವೈತವಲ್ಲವೇ?

14. ಬ್ರಹ್ಮ ಜ್ಞಾನವು ವ್ಯಾವಹಾರಿಕವೋ ಪಾರಮಾರ್ಥಿಕವೋ? ವ್ಯಾವಹಾರಿಕವೆಂದಾದರೆ ಇಲ್ಲದ ಒಂದನ್ನು ಸ್ವಾಯತ್ತಗೊಳಿಸುವುದು ಹೇಗೆ? ವಾಸ್ತವವೆಂದಾದರೆ ಬ್ರಹ್ಮನೊಂದಿಗೆ ಅಸ್ತಿತ್ವವಿರುವ ಬ್ರಹ್ಮಜ್ಞಾನವೆಂಬುದು ಸೇರಿಕೊಂಡಿರಲೇಬೇಕಲ್ಲವೆ?

15. ವ್ಯಾವಹಾರಿಕವಾಗಿ ಮಾತ್ರ ನೆಲೆನಿಲ್ಲುವ ಮಾಯೆಯನ್ನು ಮತ್ತು ಸ್ವರ್ಣ,ಜೇಡ, ಶರೀರದಂತಹವುಗಳನ್ನು ಬ್ರಹ್ಮನೊಂದಿಗೆ ಉಪಮೆ ಮಾಡಿದ್ದು ಸರಿಯೇ? ವ್ಯಾವಹಾರಿಕವಾಗಿ ಮಾತ್ರವಿರುವ ಅಥವಾ ಮಾಯೆಯಾದ ಜೇಡರ ಹುಳದ ಮಾಯೆಯಾದ ನೂಲನ್ನು, ಮಾಯೆಯಾದ ಶರೀರವನ್ನು ಮಾಯೆಯಾದ ಕೂದಲನ್ನು ಹೇಗೆ ಪರಮಾರ್ಥವಾದ ಬ್ರಹ್ಮನೊಂದಿಗೆ ಹೋಲಿಸಬಹುದು?

16.ಅದ್ವೈತ ಎಂಬುದು ಸಮಾಜವು ಸ್ವೀಕರಿಸಬಹುದಾದ ಅಥವಾ ಪ್ರಾಯೋಗಿಕಗೊಳಿಸಬಹುದಾದ ಸಿದ್ಧಾಂತವಲ್ಲ . ಇದನ್ನು ವಿದ್ಯಾವಾಚಸ್ಪತಿ.ವಿ.ಪನೋಳಿಯವರು ಹಲವು ಕಡೆ ಸ್ಪಷ್ಟಪಡಿಸಿದ್ದಾರೆ.

ವಿವೇಕ-ವಿಚಾರ-ವೈರಾಗ್ಯವಿರುವ ವ್ಯಕ್ತಿಗಳು ಲೋಕದ 10 ಲಕ್ಷ ಜನರಲ್ಲಿ ಒಬ್ಬರೂ ಇಲ್ಲ ಎಂಬುದು ವಾಸ್ತವ. ಜ್ಞಾನೋದಯ ಹೊಂದಿ ಅನುಗ್ರಹಿತರೂ ಪ್ರಪಂಚದ ಕ್ಷಣಿಕತೆಯನ್ನು ಗ್ರಹಿಸಿದ ಪುಣ್ಯಾತ್ಮರು ಮಾತ್ರ ಮೋಕ್ಷ ಹೊಂದಲು ಸಾಧ್ಯ, ಅಂಥವರ ಸಂಖ್ಯೆ ಬಹಳ ಕಡಿಮೆಯಿದೆ. (ಶ್ರೀ ಶಂಕರದರ್ಶನಂ ಪುಟ 136)

ಕೋಟ್ಯಾಂತರ ಜನರಲ್ಲಿ ಒಬ್ಬರೋ ಇಬ್ಬರೋ ಮಾತ್ರ ಇಂತಹ ಮೋಕ್ಷವನ್ನು ಗುರಿಯಾಗಿಸಿರಬಹುದು (Ibid ಪುಟ 14)

ಕೇವಲ ಒಂದು ಸಿದ್ಧಾಂತಕ್ಕಾಗಿ ಕೋಟಿಗಟ್ಟಲೆ ಜನರನ್ನು ಸೃಷ್ಟಿಸಲಾಗಿದೆಯೆಂದಾದರೆ ಅದು ನಿರರ್ಥಕ ಹಾಗೂ ಮೂರ್ಖತನವೆನಿಸುವುದಿಲ್ಲವೆ?

17. ಅದ್ವೈತ ಸಿದ್ಧಾಂತವನ್ನು ವಿವರಿಸುತ್ತಾ, ಶ್ರೀ ಶಂಕರಾಚಾರ್ಯರು ಹೇಳಿದರು ''ಕರ್ಮಣಾಂ ಚಾ ವಿದ್ವ ದ್ವಿಷಯ'' ( ಕರ್ಮಗಳು ಅಜ್ಞಾನಿಗಳಿಗೆ ಇರುವುದು)

'ಶಂಕರಾಚಾರ್ಯರು ಭಾರತೀಯರನ್ನು ಕರ್ಮವಿಮುಕ್ತಗೊಳಿಸಿದರು' ಎಂದು ಆಚಾರ್ಯರನ್ನು ವಿಮರ್ಶಿಸಿ ಅರವಿಂದನ್ ತಮ್ಮ 'ಈಶೋಪನಿಷತ್' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. (ಉದ್ಧರಣೆ: Ibid, ಪುಟ 35) ಇದನ್ನು ವಿಮರ್ಶಿಸಿ ವಿ. ಪನೋಳಿ ಬರೆಯುತ್ತಾರೆ ಚೂರಿಯ ಅಲಗಿನ ಮೇಲೆ ನಡೆಯುವಂತೆ ಬಹಳ ಕ್ಲಿಷ್ಟಕರವಾಗಿದೆ. ಈ ಆಧ್ಯಾತ್ಮಿಕ ಚರ್ಯೆಯಂತೆ ಕೋಟಿ ಜನರಲ್ಲಿ ಒಬ್ಬರಿಗಾದರೂ ಇದರಂತೆ ನಡೆಯಲು ಸಾಧ್ಯವಾದರೆ ಅದೇ ಮಹಾಭಾಗ್ಯ ಹಾಗಾದರೆ ಭಾರತೀಯರನ್ನು ಆಚಾರ್ಯರು ಕರ್ಮದಿಂದ ವಿಮುಖಗೊಳಿಸಿಬಿಟ್ಟರು ಎಂಬವಾದ ನಿರರ್ಥಕ. (Ibid ಪುಟ 30)

ಕೋಟಿಗಟ್ಟಲೆ ಜನರಲ್ಲಿ ಒಬ್ಬರಿಗೂ ಅದ್ವೈತ ಸಿದ್ಧಾಂತವನ್ನು ಅಂಗೀಕರಿಸಿ ಬದುಕಲು ಸಾಧ್ಯವಿಲ್ಲವೆಂದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಸಮಾಜವು ಅದ್ವೈತ ಸಿದ್ಧಾಂತದಂತೆ

ಬಾಳಿದರೆ ಕರ್ಮವಿಮುಖವಾಗುವುದೆಂದು ಮತ್ತು ನಾಡು, ಸಮೂಹವು ನಾಶವಾಗುವುದೆಂಬ ವಿಮರ್ಶೆಯನ್ನು ಪನೋಳಿ ಇಲ್ಲಿ ಒಪ್ಪಿದಂತಾಗಿಲ್ಲವೇ?

18. ಶಂಕರಾಚಾರ್ಯರು ಹೇಳುತ್ತಾರೆ: ಆತ್ಮಜ್ಞಾನೋದಯದಿಂದ ಅಜ್ಞಾನ ದೂರವಾಗುತ್ತದೆ. ಕರ್ತವ್ಯ ಪ್ರಜ್ಞೆಯು ಜೀವಾತ್ಮದ ಗುಣಗಳು. ಜ್ಞಾನಿಗಳಿಗೆ ಕರ್ಮವಿಲ್ಲ, ಶಾರೀರಿಕ ಸಂಬಂಧವಿಲ್ಲ, ಬ್ರಹ್ಮನ ಉಪಾಸಕರು ಬ್ರಹ್ಮನೊಂದಿಗೆ ಲೀನವಾಗುತ್ತಾರೆ. (ಉದ್ಧರಣೆ Ibid ಪುಟ 113) ಈ ರೀತಿ ಅದ್ವೈತ ಅನುಭವವನ್ನು ಪಡೆದವರು ಈ ಭೂಮಿಯಲ್ಲಿ ಇದ್ದಾರೆಯೇ? ಅಥವಾ ಆಹಾರವನ್ನು ತಿನ್ನದೆ ಅಥವಾ ಇತರ ಶಾರೀರಿಕ ಸಂಬಂಧವಿಲ್ಲದೆ ಜೀವಿಸಲು ಸಾಧ್ಯವಾಗಲಿಲ್ಲ, ಸ್ವತಃ ತಾವೇ ಪಾಲಿಸಲು ಸಾಧ್ಯವಾಗದ ಸಿದ್ಧಾಂತವನ್ನು ಅವರು ಜನತೆಯ ಮುಂದಿರಿಸಿದರು.

19. ಅದ್ವೈತವು ಮನುಷ್ಯರು ಅನುಸರಿಬಹುದಾದ ಒಂದು ಜೀವನ ವ್ಯವಸ್ಥೆಯನ್ನು ನೀಡದಿದ್ದರೆ ಆ ಸಿದ್ಧಾಂತದಿಂದ ಪ್ರಯೋಜನವೇನು? ಕೋಟಿಗಳಲ್ಲಿ ಒಬ್ಬರಿಗೂ ಅನುಷ್ಠಾನಗೊಳಿಸಲು ಅಸಾಧ್ಯವೆಂಬ ಸಿದ್ಧಾಂತ ಯಾರಿಗಾಗಿ? ಯಾಕಾಗಿ? ಇಂತಹ ಹಲವು ಸಂಶಯಗಳಿಗೆ ಅದ್ವೈತದಲ್ಲಿ ಉತ್ತರವಿಲ್ಲ. ಯುಕ್ತಿಯ ಪರಿಧಿಯಲ್ಲಿ ಎಲ್ಲವೂ ಬರುವುದೆಂಬ ವಾದದಿಂದ ಈ ಗೊಂದಲಗಳು ಹುಟ್ಟಿಕೊಂಡದ್ದಲ್ಲ, ಎಲ್ಲವನ್ನೂ ವಿಚಾರವಾದದ ಬೆಳಕಿನಲ್ಲಿ ನೋಡುವ ದೃಷ್ಟಿಕೋನ ಅದ್ವೈತವಾದಿಗಳದ್ದು. ಅದ್ವೈತ ಸಿದ್ಧಾಂತವು ದಾರ್ಶನಿಕ ಸಮಸ್ಯೆಗಳನ್ನು ಪರಿಹರಿಸುವುದಿಲ್ಲ, ಅದು ಇನ್ನಷ್ಟು ಕಗ್ಗಂಟಾಗಿಸುತ್ತದೆ. ಅರವಿಂದ ಘೋಷ್ ಅದನ್ನು ಹೀಗೆ ವ್ಯಕ್ತಪಡಿಸಿದ್ದಾರೆ: ''ಮಿಥ್ಯೆ ಎಂಬ ಅರ್ಥದಲ್ಲಿರುವ ಮಾಯಾ ಸಿದ್ಧಾಂತವೂ ಪ್ರಪಂಚವು ಅವಾಸ್ತವಿಕವೆಂಬ ವಾದವೂ ದಾರ್ಶನಿಕ ಸಮಸ್ಯೆಯನ್ನು ಪರಿಹರಿಸುವುದಿಲ್ಲ, ಅದು ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸುತ್ತದೆ.'' (Sri, Aurobindo, The Life Divine 1949, Quoted by Thomas o' Neil p,201, ಉದ್ಧರಣೆ: ಬ್ರಹ್ಮಸೂತ್ರ ದ್ವೈತವೋ ಅದ್ವೈತವೋ ಪುಟ 63)

ಅದ್ವೈತ ಸಿದ್ಧಾಂತವನ್ನು ಒಂದು ಜೀವನ ವ್ಯವಸ್ಥೆಯಾಗಿ ಅನುಸರಿಸಲು ಅದರ ಸ್ಥಾಪಕ ಆಚಾರ್ಯರಿಗೂ ಸಾಧ್ಯವಾಗಲಿಲ್ಲ, ದೇವಾಲಯಗಳು, ತೀರ್ಥ ಕ್ಷೇತ್ರಗಳು ಅಗತ್ಯವಿಲ್ಲವೆನ್ನುತ್ತಿದ್ದ ಶಂಕರಾಚಾರ್ಯರೆ ಅಲ್ಲಿಗೆ ಹೋಗುತ್ತಿದ್ದರು. ಈ ಕಾರಣಕ್ಕಾಗಿ ಮರಣಾಸನ್ನರಾಗಿರುವಾಗ ಪರಿತಪಿಸಬೇಕಾಯಿತು. ಡಾ। ರಾಧಾಕೃಷ್ಣನ್ ಬರೆಯುತ್ತಾರೆ: ಶಂಕರಾಚಾರ್ಯರು ಮರಣಶಯ್ಯೆಯಲ್ಲಿ ಮಲಗಿರುವ ಸಂದರ್ಭದಲ್ಲಿ, ಹಲವೊಮ್ಮೆ ಕ್ಷೇತ್ರದರ್ಶನ ಮಾಡಿದ್ದಕ್ಕೆ, ಕ್ಷಮೆಯಾಚನೆ ಮಾಡಿದ್ದರೆಂದು ಹೇಳಲಾಗುತ್ತದೆ. ಏಕೆಂದರೆ ಅದು ಈಶ್ವರನು ಸರ್ವವ್ಯಾಪಿ ಎಂಬುದನ್ನು ನಿಷೇಧಿಸಿದಂತಾಗುತ್ತದೆ. (ಭಾರತೀಯ ದರ್ಶನಂ, ಭಾಗ ಎರಡು, ಪುಟ 647)

ಅದ್ವೈತದೊಂದಿಗೆ ತನಗೆ ನ್ಯಾಯ ಪಾಲಿಸಲಾಗಲಿಲ್ಲವೆಂದು ಶಂಕರಾಚಾರ್ಯರು ಹೇಳಿರುವುದು ಸಮ್ಮತಾರ್ಹವಲ್ಲವೇ? ವಿ. ಪನೋಳಿ ಬರೆಯುತ್ತಾರೆ: ''ಶ್ರೀ ಮದ್ ಭಾರತಿ

ತೀರ್ಥ ಸ್ವಾಮಿಗಳು (ಶೃಂಗೇರಿ ಮಠ ಶ್ರೀ ಶಂಕರಾಚಾರ್ಯರು) ಕಲ್ಲಿಕೋಟೆಗೆ 1985ರಲ್ಲಿ ಭೇಟಿ ನೀಡಿದಾಗ ನಾನು ಅವರನ್ನು ಭೇಟಿ ಮಾಡಿದ್ದೆ. ಅತ್ಯದ್ಭುತ ಪಾಂಡಿತ್ಯದ ಒಡೆಯ ಎನ್ನುವುದಕ್ಕಿಂತ ಅವರು ಅದ್ವೈತ ಸಿದ್ಧಾಂತದ ಅಧಿಕೃತ ವಕ್ತಾರರಾಗಿದ್ದರೆಂಬುದು ಹೆಚ್ಚು ವಿಶೇಷವಾಗಿತ್ತು. ಆದ್ದರಿಂದ ಆಚಾರ್ಯರ ಕೃತಿಗಳ ಕುರಿತು ಅವರ ಅಭಿಪ್ರಾಯಗಳೇ ಹೆಚ್ಚು ಸ್ವೀಕಾರಾರ್ಹವಾಗಿರುತ್ತದೆ. ವಿಶ್ವೋತ್ತರ ಶಂಕರ ಭಾಷ್ಯದಲ್ಲಿ ತಿಳಿಸಿರುವ ಆಶಯಗಳ ಉನ್ನತಿಯನ್ನು ತಿಳಿಸದೆ,ಇನ್ನು ಕೆಲವಡೆ ಆಶಯಗಳಿಗೆ ಸ್ವಲ್ಪವಾದರೂ ದುರ್ಬಲಗೊಳಿಸುವ ಚಿಂತನೆಗಳು ''ವಿವೇಕ ಚೂಡಾಮನಿ'' ಮೊದಲಾದ ಕೃತಿಗಳಲ್ಲಿ ಕಂಡು ಬರುತ್ತಿದೆಯಲ್ಲವೇ? ಎಂಬ ಸಂಶಯವನ್ನು ಶ್ರೀಮಾನ್ ಶಂಕರಾಚಾರ್ಯರ ಮುಂದೆ ಈ ಲೇಖಕ ಕೇಳಿದಾಗ ಅವರ ಉತ್ತರ ಹೀಗಿತ್ತು.

''ಕಾಳಿದಾಸನ ಕೃತಿಗಳಾದ ರಘುವಂಶದಲ್ಲೂ ಇತರ ವ್ಯಾಕರಣ ನಿಯಮವನ್ನು ತಿಳಿಸದ ಹಲವು ಪದಪ್ರಯೋಗಗಳು ಇಲ್ಲವೇ? ಏನೋ ಕೆಲವು ಪರಿಸ್ಥಿತಿಗೆ ವಿಧೇಯನಾಗಿ ಮಹಾಕವಿ ಹಾಗೆ ಪದ ಪ್ರಯೋಗ ಮಾಡಿದ್ದರೆಂದು ಊಹಿಸುವುದು ಒಳಿತಲ್ಲವೇ? ಆಚಾರ್ಯರ ವಿವೇಕ ಚೂಡಾಮನಿ ಮೊದಲಾದ ಕೃತಿಗಳು ಹಾಗೂ ಹಲವು ಕಡೆಗಳಲ್ಲಿ ಕಾಣಬಹುದಾದ ಆಶಯಗಳ ಗುಣ ಸ್ವಭಾವವೂ ಅದೇ ರೀತಿಯಲ್ಲಿ ರೂಪ ಪಡೆದಿದೆ ಎಂದು ಭಾವಿಸಿದರೆ ಸಾಕು.'' (ಶ್ರೀ ಶಂಕರರ ದರ್ಶನ ಪುಟ 44, 45)

ಶ್ರೀ ಶಂಕರಾಚಾರ್ಯರಿಗೂ ಅದ್ವೈತ ಸಿದ್ಧಾಂತವನ್ನು ಭದ್ರವಾಗಿ ಹಿಡಿಯಲು ಸಾಧ್ಯ ವಾಗಿರಲಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಶಂಕರಾಚಾರ್ಯರಿಗೆ ಬ್ರಹ್ಮಜ್ಞಾನ ಲಭಿಸಿರಲಿಲ್ಲ ಎಂದು ಇದರಿಂದ ತಿಳಿಯುತ್ತದೆ. ಅಂತಹ ಜ್ಞಾನ ಲಭಿಸಿದ್ದರೆ ಆಶಯಗಳಲ್ಲಿ ವ್ಯತ್ಯಾಸ ಉಂಟಾಗುತ್ತಿರ ಲಿಲ್ಲ. ಆದ್ದರಿಂದಲೇ ವೇದವಿರೋಧಿಯಾದ ಯುಕ್ತಿಗೆ ವಿರುದ್ಧವಾದ ಅದ್ವೈತ ಸಿದ್ಧಾಂತವನ್ನು ಇಸ್ಲಾಮ್ ಅಂಗೀಕರಿಸುವುದಿಲ್ಲ. ವೇದ ಹಾಗೂ ಉಪನಿಷತ್ತು ವಾಕ್ಯಗಳ ಸಮನ್ವಯ ರೂಪ ವಾದ ಬ್ರಹ್ಮಸೂತ್ರವು ಕಲಿಸುವಂತೆ ಬ್ರಹ್ಮ ಅಥವಾ ಅಲ್ಲಾಹನು ಈ ಪ್ರಪಂಚವನ್ನು ಸೃಷ್ಟಿಸಿದ್ದಾನೆ. ಹಾಗೂ ಈ ಲೋಕವು ಮಿಥ್ಯೆಯೋ, ಆಕಸ್ಮಿಕವೋ ಅಲ್ಲವೆಂದೂ, ದೇವನು ಸೃಷ್ಟಿಸಿದ ಕ್ಷಣಿಕ ಸೃಷ್ಟಿಯೆಂದೂ ಅದು ಹೇಳುತ್ತದೆ.

ಸೃಷ್ಟಿಕರ್ತನು ಸರ್ವಗುಣ ಸಂಪನ್ನನಾಗಿದ್ದಾನೆ. ಸೃಷ್ಟಿ ಹಾಗೂ ಸೃಷ್ಟಿಕರ್ತ ಯಾವುದೇ ರೀತಿಯಲ್ಲೂ ಸಮಾನರಲ್ಲ. ಸೃಷ್ಟಿಕರ್ತನ ಸವಿಶೇಷತೆಗಳು ಸೃಷ್ಟಿಗಳಿಗಿಲ್ಲ. ಸೃಷ್ಟಿಕರ್ತನಿಗೆ ಸರಿಸಮಾನರು ಯಾರೂ ಇಲ್ಲ. ವೇದ ಹಾಗೂ ಬ್ರಹ್ಮಸೂತ್ರವೂ ಇದನ್ನೆ ಪ್ರತಿಪಾದಿಸುತ್ತದೆ.

ಸರ್ವಶಕ್ತನೂ, ಸರ್ವಜ್ಞನೂ ಸರ್ವನಿಯಂತ್ರಕನೂ ಅಲ್ಲಾಹನೆಂದು ಕುರ್‌ಆನ್ ಪರಿಚಯಸುತ್ತದೆ. ಬ್ರಹ್ಮಸೂತ್ರವು ಬ್ರಹ್ಮನನ್ನು ಇದೇ ರೀತಿ ಪರಿಚಯಿಸುತ್ತದೆ. 'ಜನ್ಮಾದಿ ಅಸ್ಯಯಥಾ' (ಬ್ರಹ್ಮಸೂತ್ರ 1:12) ಎಂಬುದರ ವ್ಯಾಖ್ಯಾನದಲ್ಲಿ ಡಾ। ರಾಧಾಕೃಷ್ಣನ್ ಬರೆಯುತ್ತಾರೆ. ಈ ಸೂತ್ರದಲ್ಲಿ ಪ್ರಕೃತಿಪರವಾದ ವ್ಯಾಖ್ಯಾನದ ಆಧಾರದಲ್ಲಿ ದೇವಶಾಸ್ತ್ರವಿದೆ. ಅನುಭವೀ ದೃಷ್ಟಿಕೋನದಿಂದ ಅತ್ಯಂತ ವಾಸ್ತವಿಕತೆಯಿಂದ ಕೂಡಿದ ಸಿದ್ಧಾಂತವನ್ನು ನಾವು

ರೂಪಿಸಿದ್ದೇವೆ. ಇದು ವೈದಿಕ ಮೌಲ್ಯದೆಡೆಗೆ ನಮ್ಮ ಗಮನವನ್ನು ತಿರುಗಿಸುತ್ತದೆ. ವಿಶ್ವದ ಕುರಿತು ಆಲೋಚಿಸುವಾಗ ಏಕ ಪರಮೋನ್ನತ ಶಕ್ತಿಯ ಕುರಿತು ನಿಗಮನಕ್ಕೆ ತಲುಪುತ್ತದೆ. ವಿಶ್ವದ ಅಸ್ತಿತ್ವ ಹಾಗೂ ಅದನ್ನು ನೆಲೆನಿಲ್ಲಿಸಲು ಸ್ವಯಂ ಪರ್ಯಾಪ್ತನಾದ ಸೃಷ್ಟಿಕರ್ತನನ್ನು ನಾವು ತಲುಪುತ್ತೇವೆ.

(ಬ್ರಹ್ಮ ಸೂತ್ರ ಪುಟ 226)

ಅಂತೆಯೇ ಶಂಕರಾಚಾರ್ಯರು ತಮ್ಮ ನೈಜ ಮೂಲವೆಂದು ವಾದಿಸುವ ಬ್ರಹ್ಮಸೂತ್ರವು ಬ್ರಹ್ಮನೇ ಲೋಕದ ಸೃಷ್ಟಿಗೂ, ನಿಯಂತ್ರಿಸಲೂ, ನಾಶಕ್ಕೂ ಕಾರಣವೆಂದು ಸ್ಪಷ್ಟವಾಗಿ ವಿವರಿಸುತ್ತದೆ. (1:1–2) ಬ್ರಹ್ಮನ ಇಚ್ಛೆಯೇ ಸೃಷ್ಟಿಗೆ ಕಾರಣವೆಂದು ಹೇಳುವ ಇಸ್ಲಾಮ್ ದೃಷ್ಟಿಕೋನ ಅದೇ ಆಗಿದೆ. ಅಲ್ಲಾಹನು ಪ್ರಪಂಚದ ಸೃಷ್ಟಿಕರ್ತ, ಸಂರಕ್ಷಕ, ಒಡೆಯ, ನಿಯಂತ್ರಕನಾಗಿದ್ದಾನೆ. ಅವನ ಇಚ್ಛೆ( ಇಬಾದತ್ ಅಥವಾ ಮಶೀಅತ್) ತೀರ್ಮಾನ (ಕದಾಅ್) ಯೇ ಸೃಷ್ಟಿಗೆ ಕಾರಣವೆಂದು ಅದು ಸ್ಪಷ್ಟಪಡಿಸುತ್ತದೆ. ಇದಕ್ಕೆ ವಿರುದ್ಧವಾಗಿರುವ ಅದ್ವೈತ ಸಿದ್ಧಾಂತವನ್ನು ನಿರಾಕರಿಸುತ್ತದೆ.

## 9 ಪರಲೋಕಕ್ಕೆ ಆಧಾರವಿದೆಯೇ?

**ಮರಣದ ಬಳಿಕ ನಮ್ಮನ್ನು ಪುನಃ ಎಬ್ಬಿಸಲಾಗುವಂತಹ ಪರಲೋಕವಿದೆಯೆಂಬುದಕ್ಕೆ ಆಧಾರವಿದೆಯೇ? ಪರಲೋಕವಿದೆಯೆಂಬ ವಿಶ್ವಾಸ ಸರಿಯೇ?**

ಜ್ಞಾನವನ್ನು ಅರಿಯಲು ನಮಗೆ ಐದು ಇಂದ್ರಿಯಗಳಿವೆ. ಇಲ್ಲಿ ಲೌಕಿಕ ವಿದ್ಯೆಗೆ ಹಲವು ವಿಧಗಳಿವೆ. ಅವುಗಳ ಪ್ರತಿಯೊಂದು ಬಾಗಿಲು ತೆರೆಯಲು ಬೇರೆ ಬೇರೆ ಕೀಲಿಕೈ ಬೇಕು. ಒಂದೊಂದಕ್ಕೂ ವಿಶೇಷವಾದ ಮಾನದಂಡಗಳಿವೆ. ಗಣಿತ ಶಾಸ್ತ್ರವನ್ನು ಕಲಿಯಲು ಉಪಯೋಗಿಸುವ ವಿಧಾನದಿಂದ ಜೀವಶಾಸ್ತ್ರ ಕಲಿಯಲು ಸಾಧ್ಯವಿಲ್ಲ, ಗಣಿತದ ವಿವಿಧ ಮಗ್ಗಲುಗಳಿಗೆ ವಿವಿಧ ವಿಧಾನಗಳು ಬೇಕು. ವೃತ್ತಕ್ಕೆ 360 ಡಿಗ್ರಿ, ತ್ರಿಭುಜಕ್ಕೆ 180 ಡಿಗ್ರಿಯೆಂಬ ಸೂತ್ರವನ್ನು ಸ್ವೀಕರಿಸದೆ ರೇಖಾಗಣಿತ ಕಲಿಯಲಾಗುವುದಿಲ್ಲ, ಬೀಜಗಣಿತದ ವಿಧಾನವೇ ಬೇರೆ. ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರಗಳಿಗೂ ಪ್ರತ್ಯೇಕ ರೀತಿ ನಿಯಮಗಳಿವೆ.

ಲೌಕಿಕ ವಿದ್ಯೆಗೆ ಬೇರೆ ಬೇರೆ ಸೂತ್ರಗಳು, ವಿಧಾನಗಳು ಅನಿವಾರ್ಯವಾಗಿರುವಾಗ ಆಧ್ಯಾತ್ಮಿಕ ಜ್ಞಾನ ಗಳಿಸಲು ಖಂಡಿತವಾಗಿಯೂ ಭಿನ್ನವಾದ ಮಾರ್ಗ ಅನಿವಾರ್ಯವಾಗಿದೆ. ದೇವ, ಪರಲೋಕ, ಸ್ವರ್ಗ, ನರಕ, ದೇವಚರ ಹಾಗು ಪಿಶಾಚಿಯಂತಹ ಅಲೌಕಿಕ ವಿಷಯಗಳ ಅರಿವಿಗೆ ಮನುಷ್ಯರಲ್ಲಿ ವಿಶೇಷ ವಿಧಾನಗಳಿಲ್ಲ, ಇತಿಹಾಸದಲ್ಲಿ ವಿವಿಧ ಕಾಲ, ದೇಶ, ಭಾಷೆಗಳಲ್ಲಿ ನಿಯೋಜಿತರಾದ ದೇವಸಂದೇಶವಾಹಕರ ದಿವ್ಯ ಸಂದೇಶಗಳು ಮಾತ್ರ ಇದೆ. ತಮ್ಮ ಆರನೇಯ ಇಂದ್ರಿಯ ಮೂಲಕ ಪಡೆದ ಅನುಗ್ರಹಿತರಾದ ಪ್ರವಾದಿಗಳು ಹೇಳುವ ದಿವ್ಯಬೋಧನೆಗಳನ್ನು ಪಂಚೇಯಂದ್ರಿಗಳು ಮಾತ್ರ ಇರುವವರು ನಿಷೇಧಿಸುವುದು ಕಣ್ಣು ಇರುವವರು ಹೇಳುವುದನ್ನು ಕೇಳಿ ಕುರುಡರು ಪ್ರಶ್ನೆ ಕೇಳಿದಂತಾಗುತ್ತದೆ. ಎಲೆಯ ಬಣ್ಣ ಹಸಿರು, ಕಾಗೆಯ ಬಣ್ಣ ಕಪ್ಪು, ಹಾಲಿನ ಬಣ್ಣ ಬಿಳಿ ಎಂದು ನಾವು ಹೇಳುವಾಗ, ತಾವು ಅದನ್ನು ಕಂಡಿಲ್ಲವೆಂದು ಅಂಧರು ನಿರಾಕರಿಸುತ್ತಾರೆಂದಾದರೆ ವರ್ಣಮಯ ಪ್ರಪಂಚ ಅವರಿಗೂ ಅನ್ಯವೂ ಅಪರಿಚಿತವೂ ಅಪ್ರಾಪ್ತವಾಗುತ್ತದೆ. ದಿವ್ಯಸಂದೇಶವನ್ನು ಅಂಗೀಕರಿಸದವರ ಸ್ಥಿತಿಯೂ ಅಷ್ಟೆ, ಅಲೌಕಿಕ ಜ್ಞಾನದಿಂದ ಅವರು ಎಂದೆಂದೂ ವಂಚಿತರಾಗುತ್ತಾರೆ.

ಮರಣದ ಬಳಿಕದ ಲೋಕದ ಕುರಿತು, ಅಲ್ಲಿನ ಸ್ವರ್ಗ-ನರಕಗಳ ಕುರಿತು ಕಾಲ ಕಾಲಕ್ಕೆ ವಿವಿಧ ಕಡೆಗಳಲ್ಲಿ ಬಂದ ದೇವಸಂದೇಶವಾಹಕರು ಮಾನವರಿಗೆ ತಿಳಿಸಿಕೊಟ್ಟಿದ್ದರು. ಅವರು

ಅವುಗಳ ಅನಿವಾರ್ಯತೆಯನ್ನು ಒತ್ತಿ ಹೇಳಿದರು. ಅದರೊಂದಿಗೆ ಈ ಭೌತಿಕ ಲೋಕದ ಹಾಗೂ ಮನುಷ್ಯನ ಪರಿಸ್ಥಿತಿಗಳು ಪರಲೋಕವೆಂಬ ವಾಸ್ತವಿಕತೆಯೆಡೆಗೆ ಬೆಳಕು ಚೆಲ್ಲುತ್ತದೆ.

ನ್ಯಾಯ ಪಾಲನೆಯಾಗಬಾರದೆಂದು ಭಾವಿಸುವವರು ಬಹಳ ವಿರಳ. ಅನ್ಯಾಯ ಮಾಡುವವರೂ ನ್ಯಾಯಕ್ಕಾಗಿ ವಾದಿಸುತ್ತಾರೆ. ತಾವು ನ್ಯಾಯದ ವಾಹಕರೆಂದು ಹೇಳಿಕೊಳ್ಳುತ್ತಾರೆ. ಒಬ್ಬನು ವಧಿಸಲ್ಪಟ್ಟರೆ ಆತನ ಆಶ್ರಿತರು ಕೊಲೆಗಾರನಿಗೆ ಶಿಕ್ಷೆಯಾಗಬೇಕೆಂದು ಬಯಸುತ್ತಾರೆ. ನ್ಯಾಯದ ಬೇಡಿಕೆಯೇ ಲೋಕದಲ್ಲಿ ನೀತಿ, ನ್ಯಾಯ ವ್ಯವಸ್ಥೆಗಳು, ನ್ಯಾಯಾಲಯಗಳು, ನಿಯಮಪಾಲಕರು ಇರಲು ಕಾರಣವಾಗಿದೆ. ನ್ಯಾಯ ಸ್ಥಾಪನೆಯಾಗಿರುವ ದೇಶ ಅಥವಾ ಸಮೂಹವು ನಮಗೆ ಗೋಚರಿಸುತ್ತಿಲ್ಲ, ಯಾರು ಎಷ್ಟೇ ಶ್ರಮಪಟ್ಟರೂ ಸಣ್ಣ ಪ್ರಮಾಣದ ನ್ಯಾಯ ಮಾತ್ರ ದೊರೆಯುತ್ತದೆ. ಉದಾಹರಣೆಗೆ ಓರ್ವ ವ್ಯಕ್ತಿಯನ್ನು ಕೊಂದವನಿಗೆ ಹೆಚ್ಚೆಂದರೆ ಮರಣದಂಡನೆಯನ್ನು ನೀಡಬಹುದು. ಆದರೆ ಅದರಿಂದ ಕೊಲೆಯಾದವನ ಪತ್ನಿಯ ವಿರಹದ ನೋವು, ಅನಾಥತೆಯ ದುಃಖ ಅನುಭವಿಸುವ ಮಕ್ಕಳಿಗೆ ತಂದೆ ಮರಳಿ ಲಭಿಸುವುದು ಅಸಾಧ್ಯ. ಅಂದರೆ ಕೊಲೆಗಾರನನ್ನು ಕೊಂದರೂ ಮರ್ದಿತರಿಗೆ ಅದು ಸೂಕ್ತ ಪರಿಹಾರವಾಗುವುದಿಲ್ಲವೆಂದು ಇದರಿಂದ ಮನವರಿಕೆಯಾಗುತ್ತದೆ. ಆದ್ದರಿಂದ ಇದು ಭೂಮಿಯ ಶಾಂತಿಸ್ಥಾಪನೆಗೆ ಒಂದು ಉಪಾಧಿ ಮಾತ್ರ. ಅದೂ ಕೊಲೆಗಾರರಿಗೆ ಶಿಕ್ಷೆಯಾದರೆ ಮಾತ್ರ.

ಆದರೆ ಇಂದು ನಮ್ಮ ಸಮಾಜದ ಪರಿಸ್ಥಿತಿ ಹೇಗಿದೆ? ಎಲ್ಲೆಡೆಯೂ ಕೊಲೆಗಡುಕರು ಸ್ವಚ್ಛಂದವಾಗಿ ವಿಹರಿಸುತ್ತಿದ್ದಾರೆ. ದರೋಡೆಕೋರರು ಎಲ್ಲವನ್ನೂ ತಮ್ಮ ವಶಕ್ಕೆ ಪಡೆದಿದ್ದಾರೆ. ವಂಚಕರು ಗೌರವ ಪಡೆಯುತ್ತಿದ್ದಾರೆ. ಬ್ರಹ್ಮಚಾರಿಗಳು ಐಶಾರಾಮಿ ಜೀವನ ಸಾಗಿಸುತ್ತಿದ್ದಾರೆ. ಅಕ್ರಮಿಗಳು ದೇಶವನ್ನಾಳುತ್ತಿದ್ದಾರೆ. ಅಪರಾಧಿಗಳು ಯಾವುದೇ ಭಯವಿಲ್ಲದೆ ಸ್ವಚ್ಛಂದವಾಗಿ ವಿಹರಿಸುತ್ತಿದ್ದಾರೆ. ಹಣ ಸ್ಥಾನಮಾನಕ್ಕಾಗಿ ಬಲಶಾಲಿಗಳು ಪಕ್ಷ ಸೇರುತ್ತಾರೆ. ಆಡಳಿತಗಾರರು ಸಾರ್ವಜನಿಕ ಬೊಕ್ಕಸವನ್ನು ಕೊಳ್ಳೆಹೊಡೆಯುತ್ತಿದ್ದಾರೆ, ಜನಸಾಮಾನ್ಯರು ಶೋಷಣೆಗೊಳಗಾಗು ತ್ತಿದ್ದಾರೆ. ಅನ್ಯಾಯ, ಅಕ್ರಮ ಮೇರೆ ಮೀರಿದೆ. ನ್ಯಾಯಕ್ಕಾಗಿ ಹೋರಾಟವು ವ್ಯರ್ಥವಾಗುತ್ತಿದೆ. ನ್ಯಾಯವು ಹಲವೊಮ್ಮೆ ಮರೀಚಿಕೆಯೇ ಆಗಿ ಬಿಡುತ್ತದೆ. ಬಹುಪಾಲು ಜನರಿಗೆ ನ್ಯಾಯವು ಅಪರಿಚಿತವಾಗಿದೆ. ಸಜ್ಜನರು ಹಾಗೂ ಸಮಾಜ ಸೇವಕರು ತೀವ್ರ ಕಷ್ಟನಷ್ಟ ಅನುಭವಿಸುತ್ತಿದ್ದಾರೆ. ಅಮಾಯಕರು ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾರೆ. ನಿಸ್ವಾರ್ಥ ಸೇವಕರು ನಿರಂತರ ಶೋಷಣೆಗೊಳಗಾಗುತ್ತಿದ್ದಾರೆ. ಆದರೆ ಸಮಾಜ ಘಾತುಕ ಶಕ್ತಿಗಳು ಸ್ವಲ್ಪವೂ ರೋಮ ಕೊಂಕದೆ ಮೆರೆಯುತ್ತಿದ್ದಾರೆ. ಒಬ್ಬ ವ್ಯಕ್ತಿಯನ್ನು ಕೊಂದವನನ್ನು ಬದಲಿಯಾಗಿ ಕೊಲ್ಲಲು ಸಾಧ್ಯವಾಗಬಹುದು. ಆದರೆ ಹತ್ತು, ನೂರು, ಸಾವಿರು ಜನರನ್ನು ಕೊಂದವನನ್ನು ಶಿಕ್ಷಿಸುವುದು ಸುಲಭವಲ್ಲ, ಅಂತಹ ಕ್ರೂರ ಕೃತ್ಯಗಳಿಗೆ ಸೂಕ್ತ ಶಿಕ್ಷೆ ನೀಡಲು ಇಲ್ಲಿನ ಕಾನೂನು ವ್ಯವಸ್ಥೆಗೂ ಇನ್ನಾವ ಶಕ್ತಿಗೂ ಸಾಧ್ಯವಿಲ್ಲ, ಕೊಲ್ಲಲ್ಪಟ್ಟ ಮುಗ್ಧರು ಹಾಗೂ ಅವರ ಆಶ್ರಿತರಿಗೆ ಸಮಸ್ಯೆಗೆ ಸೂಕ್ತ ಪರಿಹಾರ ನೀಡಲು ಎಲ್ಲರೂ ಅಶಕ್ತರೆ. ಆದ್ದರಿಂದ ಮರಣದಿಂದ ಮನುಷ್ಯ ಜೀವನ

ಕೊನೆಗೊಳ್ಳುವುದೆಂದಾದರೆ ಅದು ಅನ್ಯಾಯವೇ ಸರಿ. ಹಾಗಾದರೆ ಈ ಪ್ರಪಂಚದ ಸುವ್ಯವಸ್ಥಿತ ಸೃಷ್ಟಿಯು ಅರ್ಥಶೂನ್ಯವೂ ಅಸಂಬದ್ಧವೂ ಆಗುತ್ತದೆ. ಆರುನೂರು ಕೋಟಿ ಮನುಷ್ಯರಿಗೆ 600 ಕೋಟಿ ಮುಖ,ಕೈಬೆರಳುಗಳು, ವ್ಯತಿರಿಕ್ತ ದೇಹ ವಾಸನೆ, ತಲೆಕೂದಲುಗಳು, ರಕ್ತದ ಹನಿಗಳು ನೀಡಲ್ಪಟ್ಟ ಅತ್ಯಂತ ಯುಕ್ತಿಪೂರ್ಣವಾಗಿ ಸೃಷ್ಟಿಸಲಾದ ಮನುಷ್ಯನ ಅಂತ್ಯ ಹೀಗೆ ಅನ್ಯಾಯದಲ್ಲಿ ಕೊನೆಗೊಳ್ಳುವುದು ಅಸಂಭವ. ಆದ್ದರಿಂದ ಸಂಪೂರ್ಣ ನ್ಯಾಯ ವ್ಯವಸ್ಥೆ ಇರಲೇಬೇಕು. ಅದು ಭೂಮಿಯ ಮೇಲೆ ಅಸಾಧ್ಯವಾದುದರಿಂದ ಪರಲೋಕವು ಅನಿವಾರ್ಯ. ಎಲ್ಲರೂ ತಮ್ಮ ಕರ್ಮಗಳ ಫಲವನ್ನು ಅಲ್ಲಿ ಅನುಭವಿಸುತ್ತಾರೆ ಒಳಿತನ್ನು ಮಾಡಿದವನಿಗೆ ಸತ್ಫಲವು, ಕೆಡುಕಿಗೆ ಶಿಕ್ಷೆಯು ಲಭಿಸುತ್ತದೆ.

ಮರಣದ ನಂತರ ನ್ಯಾಯ ದೊರೆಯುವ ಪರಲೋಕವಿಲ್ಲವೆಂದಾದರೆ ನ್ಯಾಯ ಪ್ರಜ್ಞೆಯುಳ್ಳವರು ನಿತ್ಯವೂ ನಿರಾಶರಾಗಿರುತ್ತಾರೆ. ಸದಾ ಅಸ್ವಸ್ಥತೆ, ಅಸಂತೃಪ್ತಿ ಅವರನ್ನು ಕಾಡುತ್ತಿರುತ್ತದೆ. ಎಲ್ಲ ಮಾನವರು ಸ್ವಭಾವತಃ ನ್ಯಾಯ ಬಯಸುವವರಾಗಿದ್ದಾರೆ. ಆದ್ದರಿಂದ ಅದನ್ನು ನೀಡುವ ಪರಲೋಕವು ನ್ಯಾಯದ ಬೇಡಿಕೆಯಾಗಿದೆ. ಮಾನವ ಮನಸ್ಸಿನ ಆಶೆಯ ಬಯಕೆಯ ಸಾಕ್ಷಾತ್ಕಾರವೂ ಹೌದು. ಬಹಳ ಸುಸೂತ್ರವಾಗಿ ಸೃಷ್ಟಿಸಲ್ಪಟ್ಟ ಮಾನವನ ಅಮೂಲ್ಯ ಜೀವವು ಅನ್ಯಾಯವಾಗಿ ಮರಣದೊಂದಿಗೆ ಕೊನೆಗೊಳ್ಳುವುದೆಂದು ಭಾವಿಸುವುದಕ್ಕಿಂತ, ಪ್ರತಿಯೊಬ್ಬರಿಗೂ ನ್ಯಾಯವನ್ನು ದೊರಕಿಸಿಕೊಡುವ ಪರಲೋಕವಿದೆಯೆಂಬ ವಿಶ್ವಾಸವೇ ಯುಕ್ತಿಪೂರ್ಣವೂ ಬುದ್ಧಿವಂತಿಕೆಯೂ ಅಲ್ಲವೇ?

ಮಾನವ ಜೀವನವು ಸಾಗುವ ಪ್ರತಿಯೊಂದು ವಿಷಯಗಳನ್ನು ಬಹಳ ಸ್ಪಷ್ಟವಾಗಿ, ಜಾಗೂರುಕತೆಯಿಂದ ದಾಖಲಿಸಿಡಲಾಗುತ್ತದೆ. ಆದರೆ ಪ್ರತಿಭಾಶಾಲಿಯಾದ ವೈದ್ಯರಿಗೆ ಶಸ್ತ್ರಕ್ರಿಯೆಯಿಂದ ಅದನ್ನು ಕಾಣಲು ಸಾಧ್ಯವಿಲ್ಲ, ಆಧುನಿಕ ಲೋಕದ ತಂತ್ರಜ್ಞಾನದಿಂದ ಅದರ ಪತ್ತೆ ಸಾಧ್ಯವಿಲ್ಲ, ಆದರೆ ಮನುಷ್ಯನಿಗೆ ಅದನ್ನು ನೆನಪಿಸಲು ಸಾಧ್ಯವಿದೆ. ಆದ್ದರಿಂದ ನಾವು ಸ್ಪರ್ಶಿಸುವ ಸ್ಥಳಗಳಲ್ಲಿ ನಮ್ಮ ಬೆರಳಚ್ಚು ಉಳಿಯುತ್ತದೆ. ನಾವು ಸಂಚರಿಸುವ ಕಡೆಗಳಲ್ಲಿ ನಮ್ಮ ದೇಹದ ವಾಸನೆಯು ಹರಡುತ್ತದೆ, ನಮ್ಮ ಮಾತುಗಳು ಅಂತರಿಕ್ಷದಲ್ಲಿ ಸೇರಿಬಿಡುತ್ತದೆ. ಹೀಗೆ ನಮ್ಮ ಮಾತು, ಕೃತಿ, ಚಲನಗಳು, ವಿಚಾರ ಚಿಂತನೆಗಳೆಲ್ಲವು ನಮ್ಮ ಪರವಾಗಿಯೋ, ವಿರುದ್ಧವಾಗಿಯೋ ಪ್ರತಿಕ್ರಿಯಸಲು, ಅಥವಾ ಸಾಕ್ಷ್ಯವಹಿಸಲು ದಾಖಲಿತವಾಗಿದೆ. ನಮ್ಮಿಂದ ಉದುರುವ ಕೂದಲುಗಳು, ಸುರಿಯುವ ರಕ್ತ, ಸ್ರವಿಸುವ ಇಂದ್ರಿಯ ಹನಿಗಳು ಸಾಕ್ಷ್ಯವಾಗಿ ಪರಿವರ್ತಿತವಾಗುತ್ತದೆ.

ಒಟ್ಟಿನಲ್ಲಿ ಶೂನ್ಯದಿಂದ ಪ್ರಪಂಚವನ್ನು, ಮಾನವರೂ ಸೇರಿದಂತೆ ಸರ್ವವನ್ನು ಬಹಳ ಸುವ್ಯವಸ್ಥಿತ ಹಾಗೂ ಯುಕ್ತಿಪೂರ್ಣವಾಗಿ ಸೃಷ್ಟಿಸಿದ ದೇವನಿಗೆ ಮಾನವರನ್ನು ಪುನಃ ಸೃಷ್ಟಿಸುವುದು ಕಷ್ಟಕರವೋ ಅಸಾಧ್ಯವೋ ಅಲ್ಲ, ಆದ್ದರಿಂದ ಮರಣಾನಂತರ ಮನುಷ್ಯರೆಲ್ಲ ಎಬ್ಬಿಸಲ್ಪಡುವರೆಂದು, ತಮ್ಮ ಕರ್ಮಗಳ ಫಲವನ್ನು ಅನುಭವಿಸುತ್ತಾರೆಂದು, ದೇವನು ತನ್ನ

ಸಂದೇಶ ವಾಹಕರ ಮೂಲಕ ತಿಳಿಸಿದ ವಿಷಯವು ಖಂಡಿತವಾಗಿಯೂ ಸಂಭವಿಸುವುದು. ಅದು ಅಸಂಭವನೀಯವೊ, ಯುಕ್ತಿಗೆ ನಿಲುಕದಂತಹ ಮಾತೋ ಅಲ್ಲ, ಬದಲಾಗಿ ಅತ್ಯಂತ ಅದ್ಭುತಕರ ವಾದ. ಮಾನವ ಸೃಷ್ಟಿಯು ಅನ್ಯಾಯವಾಗಿ, ಅರ್ಥರಹಿತವಾಗಿ ಶಾಶ್ವತವಾಗಿ ಕೊನೆಗೊಳ್ಳುತ್ತದೆಂಬ ವಾದವು ವಿಶ್ವಾಸಕ್ಕೆ ಅನರ್ಹವೂ ಯುಕ್ತಿಗೆ ವಿರುದ್ಧವೂ ಆಗಿದೆ.

ಇನ್ನೊಂದು ವಿಷಯವೆನೆಂದರೆ, ನಾವು ಈಗಿರುವ ಪರಿಸ್ಥಿತಿಯಲ್ಲೇ ಇದ್ದುಕೊಂಡು ವಾಸ್ತವಿಕತೆಯನ್ನು ಮನದಟ್ಟು ಮಾಡಿಕೊಂಡಿದ್ದೇವೆಂದು ಭಾವಿಸುವುದು ಸರಿಯಲ್ಲ. ಉಪಕರಣವಿಲ್ಲದೆ ನೆರಳನ್ನು ನೋಡುವಾಗ ಅದು ನಿಶ್ಚಲವೆಂದು ತೋರುತ್ತದೆ. ಆದರೆ ನೆರಳಿಗೆ ಸದಾ ಸ್ವಲ್ಪ ಚಲನೆಯಿದೆಯಲ್ಲವೇ? ಮರೀಚಿಕೆಯನ್ನು ನೀರೆಂದು ಗ್ರಹಿಸುವುದಿದೆ. ಆದರೆ ಅದರ ಸಮೀಪ ತಲುಪಿದಾಗ ಸತ್ಯಸಂಗತಿ ಅರಿವಾಗುತ್ತದೆ. ನಿದ್ದೆಯಲ್ಲಿ ಕಾಣುವ ಕನಸುಗಳಲ್ಲಿರುವ ಸಂಗತಿಗಳು ಸತ್ಯವೆಂದೇ ಭಾಸವಾಗುತ್ತದೆ. ಆದರೆ ನಮಗೆ ಎಚ್ಚರವಾಗುವುದರೊಂದಿಗೆ ನಮ್ಮ ಅನುಭವವೇ ಬೇರೆಯಾಗಿರುತ್ತದೆ. ಆದ್ದರಿಂದ ಪಂಚೇಂದ್ರಿಯಗಳಿಂದ ನಮಗೆ ತಿಳಿಯದ ದಿವ್ಯಜ್ಞಾನವನ್ನು ಆರನೇ ಇಂದ್ರಿಯದ ಮೂಲಕ ದೇವಸಂದೇಶವಾಹಕರಿಗೆ ಗ್ರಹಿಸಲು ಸಾಧ್ಯವಿದೆ. ಕನಸು ಕಂಡವನು ಹೇಳುವ ವಿಷಯಗಳಿಂದ ವಾಸ್ತವವು ಭಿನ್ನವಾಗಿರುತ್ತದೆಯೆಂದು ಎಚ್ಚರ ಇರುವವರು ತಿಳಿಯುವಂತೆ, ಪಂಚೇಂದ್ರಿಯಗಳು ಮಾತ್ರ ಇರುವ ಮನುಷ್ಯನಿಗೆ ಕಾಣುವ ಭಿನ್ನವಾದ ಲೋಕವಿದೆಯೆಂದು ದೇವಸಂದೇಶವಾಹಕರಿಗೆ ತಿಳಿಯುತ್ತದೆ. ಅವರು ಅದನ್ನೇ ಸಮಾಜಕ್ಕೆ ಬೋಧಿಸುತ್ತಾರೆ. ಅಲೌಕಿಕ ಜ್ಞಾನವನ್ನು ಪಡೆಯುವ ಏಕ ಮಾರ್ಗ ಅದು ಮಾತ್ರ.

## 10 ಪರಲೋಕವು ಯಥಾರ್ಥವೇ?

ಮನುಷ್ಯ ಮರಣ ಹೊಂದಿದರೆ ಕೆಲವರು ಮಣ್ಣಿನಲ್ಲಿ ದಫನ ಮಾಡುತ್ತಾರೆ. ಹೆಚ್ಚಿನ ಕಾಲಾವಕಾಶವಿಲ್ಲದೆ ಮೃತ ಶರೀರ ಮಣ್ಣಿನೊಂದಿಗೆ ಲೀನವಾಗುತ್ತದೆ. ಇನ್ನು ಕೆಲವರು ಚಿತೆಯಲ್ಲಿ ಉರಿಸುತ್ತಾರೆ. ಅದರೊಂದಿಗೆ ದೇಹ ಬೂದಿಯಾಗುತ್ತದೆ. ನೀರು ಪಾಲಾದ ಜಡದೇಹಗಳನ್ನು ಮೀನುಗಳು ತಿಂದು ಮುಗಿಸುತ್ತವೆ. ಹೀಗೆ ಸಂಪೂರ್ಣ ನಾಶವಾದ ವ್ಯಕ್ತಿಗಳು ಪುನಃ ಎದ್ದೇಳಿಸಲ್ಪಡುತ್ತಾರೆ ಎಂಬುದು ಇಸ್ಲಾಮಿನ ವಾದ. ಇದರಲ್ಲಿ ವಿಶ್ವಾಸವಿರಿಸಬಹುದೆ? ಇದನ್ನು ಮನುಷ್ಯ ಬುದ್ಧಿ ಒಪ್ಪುತ್ತದೆಯೇ?

ಎಲ್ಲ ಕಾಲಗಳಲ್ಲೂ ಬಹು ಸಂಖ್ಯಾತ ಜನರು ದೇವವಿಶ್ವಾಸಿಗಳಾಗಿದ್ದರು. ಇತಿಹಾಸದ ಪುಟಗಳನ್ನು ತಿರುಚಿ ನೋಡುವಾಗ ದೇವ ವಿಶ್ವಾಸವಿಲ್ಲದ ಸಮೂಹಗಳು ಬಹಳ ಕಡಿಮೆ. ಆದ್ದರಿಂದ ದೇವದೂತರಿಗೆ ನಾಸ್ತಿಕವಾದಿಗಳನ್ನು ಎದುರಿಸಬೇಕಾಗಿ ಬರಲಿಲ್ಲ, ಬದಲಾಗಿ ಮರಣಾನಂತರದ ಜೀವನದಲ್ಲಿ ವಿಶ್ವಾಸವಿಲ್ಲದ ದೇವವಿಶ್ವಾಸಿಗಳನ್ನು ಎದುರಿಸಬೇಕಾಯಿತು. ವಿವಿಧ ಕಾಲಗಳಲ್ಲಿ, ವಿವಿಧ ದೇಶಗಳಲ್ಲಿ ಬಂದ ಪ್ರವಾದಿಗಳ ಕಾಲದಲ್ಲಿ ಜನರು ಪರಲೋಕವನ್ನು ನಿರಾಕರಿಸುವವರಾಗಿದ್ದರು. ಅವರ ಸಂಶಯ ಹಾಗೂ ವಾದಗಳಿಗೆ ಪವಿತ್ರ ಕುರ್‌ಆನ್ ಸೂಕ್ತ ಉತ್ತರ ನೀಡಿದೆ. '' ಸತ್ತವನನ್ನು ಅಲ್ಲಾಹನು ಎಬ್ಬಿಸಲಾರನೆಂದು ಇವರು ದೃಢವಾಗಿ ಅಲ್ಲಾಹನ ಆಣೆ ಹಾಕಿ ಹೇಳುತ್ತಾರೆ.'' (ಪವಿತ್ರ ಕುರ್‌ಆನ್ 16:38) ''ಜೀವನವೇನಿದ್ದರೂ ಕೇವಲ ನಮ್ಮ ಈ ಇಹಲೋಕದ ಜೀವನ ಮಾತ್ರ. ನಾವು ಮರಣಾನಂತರ ಎಷ್ಟು ಮಾತ್ರಕ್ಕೂ ಪುನಃ ಎಬ್ಬಿಸಲ್ಪಡಲಾರೆವೆಂದು ಇಂದು ಅವರು ಹೇಳುತ್ತಾರೆ.'' (ಪವಿತ್ರ ಕುರ್‌ಆನ್ 6:29)

''ನೀವು ಸತ್ತು ಮಣ್ಣಾಗಿ ಹೋದ ಬಳಿಕ ಮತ್ತು ಅಸ್ಥಿಪಂಜರವಾಗಿ ಬಿಟ್ಟ ಬಳಿಕ ನೀವು(ಸಮಾಧಿಗಳಿಂದ) ಹೊರ ತೆಗೆಯಲ್ಪಡುವಿರೆಂದು ಇವನು ನಿಮಗೆ ತಿಳಿಸುತ್ತಿದ್ದಾನೆಯೇ?''

''ಅಸಾಧ್ಯ, ನಿಮಗೆ ನೀಡಲಾಗುತ್ತಿರುವ ಈ ವಾಗ್ದಾನ ತೀರಾ ಅಸಾಧ್ಯವಾದದ್ದು. ಜೀವನವೆಂದರೆ ಕೇವಲ ಈ ಲೋಕದ ಜೀವನವಲ್ಲದೆ ಮತ್ತೇನೂ ಅಲ್ಲ, ಇಲ್ಲೇ ನಾವು ಸಾಯಬೇಕಾಗಿದೆ, ಇಲ್ಲೇ ಬದುಕಬೇಕಾಗಿದೆ. ಖಂಡಿತವಾಗಿಯೂ ನಾವು ಎಬ್ಬಿಸಲ್ಪಡುವವರಲ್ಲ.''

(ಪವಿತ್ರ ಕುರ್‌ಆನ್ 23: 35-37)

ಇವರು ಇವರ ಪೂರ್ವಜರು ಹೇಳಿರುವುದನ್ನೇ ಹೇಳುತ್ತಾರೆ, ಅವರು ಹೇಳುತ್ತಾರೆ, ''ನಾವು ಸತ್ತು ಮಣ್ಣು ಮತ್ತು ಅಸ್ಥಿಪಂಜರವಾಗಿ ಬಿಟ್ಟ ಬಳಿಕ ನಿಮ್ಮನ್ನು ಪುನಃ ಜೀವಂತಗೊಳಿಸಿ

ಎಬ್ಬಿಸಲಾದೀತೆ? ಈ ವಾಗ್ದಾನಗಳನ್ನು ನಾವು ತುಂಬಾ ಕೇಳಿದ್ದೇವೆ ಮತ್ತು ನಮಗಿಂತ ಮುಂಚೆ ನಮ್ಮ ಪೂರ್ವಜರೂ ಕೇಳುತ್ತಲೇ ಬಂದಿದ್ದಾರೆ. ಇವೆಲ್ಲಾ ಹಳೆಯ ಕಟ್ಟುಕತೆಗಳಲ್ಲದೆ ಇನ್ನೇನು ಅಲ್ಲ .'' (ಪವಿತ್ರ ಖುರ್‌ಆನ್23:82-83) ಅವರು ಕೇಳುತ್ತಾರೆ: ''ನಾವು ಸತ್ತು ಮಣ್ಣಾಗಿ ಅಸ್ಥಿಪಂಜರವಾಗಿ ಬಿಟ್ಟ ಬಳಿಕ ಪುನಃ ಜೀವಂತಗೊಳಿಸಿ ಎಬ್ಬಿಸಲ್ಪಡಲಿದ್ದೇವೆಯೇ? ಗತಕಾಲದ ನಮ್ಮ ಪೂರ್ವಜರೂ ಎಬ್ಬಿಸಲ್ಪಡುವರೇ.?'' (ಪವಿತ್ರ ಕುರ್‌ಆನ್37:16-17)

ಪುರಾತನ ಕಾಲದಿಂದಲೇ ದೇವವಿಶ್ವಾಸಿಗಳಲ್ಲಿ ಹೆಚ್ಚಿನವರು ಪರಲೋಕವನ್ನು ವಿಶ್ವಾಸವಿರಿಸಲಿಲ್ಲವೆಂದು ಇದು ಸ್ಪಷ್ಟಪಡಿಸುತ್ತದೆ. ಇಂದಿನ ಸ್ಥಿತಿಯೂ ಇದಕ್ಕಿಂತ ಭಿನ್ನವಲ್ಲ. ಅವಿಶ್ವಾಸಿಗಳು ನಮ್ಮ ಪುನರುಜ್ಜೀವನವನ್ನು ನಿಷೇಧಿಸಿ ಎತ್ತಿದ ಪ್ರಶ್ನೆಗಳಿಗೆ ಪವಿತ್ರ ಕುರ್‌ಆನ್ ಸ್ಪಷ್ಟವಾಗಿ ಉತ್ತರಿಸುತ್ತದೆ. ಅವರು ಕೇಳುತ್ತಾರೆ: ''ನಾವು ಬರೇ ಎಲುಬುಗಳಾಗಿ ಮತ್ತು ಮಣ್ಣಾಗಿ ಬಿಟ್ಟ ಮೇಲೆ ನಮ್ಮನ್ನು ಮತ್ತೆ ಹೊಸದಾಗಿ ಹುಟ್ಟಿಸಿ ಎಬ್ಬಿಸಲಾಗುವುದೇ?'' ಎಂದು ಅವರು ಕೇಳುತ್ತಾರೆ. ಅವರೊಡನೆ ಹೇಳಿರಿ- ''ನೀವು ಶಿಲೆ ಅಥವಾ ಕಬ್ಬಿಣವೇ ಆಗಿ ಹೋದರೂ- ಅಥವಾ ಅದಕ್ಕಿಂತ ಹೆಚ್ಚು ಕಠಿಣವಾಗಿದ್ದು ನಿಮ್ಮ ಊಹೆಯಂತೆ ಜೀವವನ್ನು ಸ್ವೀಕರಿಸುವುದೇ ಅಸಂಭವನಿಯವಾಗಿರುವಂತಹ ವಸ್ತುವಾಗಿ ಬಿಟ್ಟರೂ(ನೀವು ಎಬ್ಬಿಸಲ್ಪಟ್ಟೇ ತೀರುವಿರಿ)'' 'ನಮ್ಮನ್ನು ಪುನಃ ಜೀವಂತಗೊಳಿಸುವವನಾರು?'' ಎಂದು ಅವರು ಖಂಡಿತ ಕೇಳುವರು. ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದವನೇ ಎಂದು ಉತ್ತರ ಕೊಡಿರಿ, ಅವನು ತಲೆಯಾಡಿಸುತ್ತಾ ' ಓಹೋ! ಇದೆಲ್ಲ ಆಗುವುದು ಯಾವಾಗ? '' ಎಂದು ಕೇಳುವರು. ನೀವು ಹೇಳಿರಿ, '' ಆ ಸಮಯ ಸನ್ನಿಹಿತವಾಗಿರಲೂಬಹುದು. ದೇವನು ನಿಮ್ಮನ್ನು ಕೂಗಿ ಕರೆಯುವಂದು ನೀವು ಅವನನ್ನು ಪ್ರಶಂಸಿಸುತ್ತಾ ಅವನ ಕರೆಗೆ ಓಗೊಟ್ಟು ಹೊರಟು ಬರುವಿರಿ. ಆಗ ನಾವೇನೋ ಕುಸು ಹೊತ್ತು ಮಾತ್ರವೇ ಈ ಅವಸ್ಥೆಯಲ್ಲಿ ಬಿದ್ದುಕೊಂಡಿದ್ದೆವೆಂದು ಊಹಿಸುವಿರಿ.'' (ಪವಿತ್ರ ಕುರ್‌ಆನ್ 17:49-52) ನಮ್ಮ ಪ್ರತ್ಯಕ್ಷ ಪ್ರಮಾಣಗಳನ್ನು ಧಿಕ್ಕರಿಸಿ ''ನಾವು ಎಲುಬುಗಳೂ ಮಣ್ಣೂ ಆಗಿ ಹೋದ ಬಳಿಕ ನಮ್ಮನ್ನು ಹೊಸದಾಗಿ ಸೃಷ್ಟಿಸಿ ಎಬ್ಬಿಸಲಾಗುವುದೇ? '' ಎಂದು ಅವರು ಹೇಳಿದುದರ ಪ್ರತಿಫಲವಿದು. ಆಕಾಶಗಳನ್ನೂ ಭೂಮಿಯನ್ನೂ ಯಾವ ದೇವನು ಸೃಷ್ಟಿಸಿರುತ್ತಾನೋ ಅವನು ಖಂಡಿತವಾಗಿಯೂ ಇವರಂಥವರನ್ನು ಸೃಷ್ಟಿಸಲು ಶಕ್ತನೆಂಬುದು ಇವರಿಗೆ ಹೊಳೆಯಲಿಲ್ಲವೆ? ಅವನು ಇವರನ್ನು ಒಂದೆಡೆ ಸೇರಿಸಲಿಕ್ಕಾಗಿ ಒಂದು ಸಮಯವನ್ನು ನಿಶ್ಚಯಿಸಿದ್ದಾನೆ. ಅದರ ಬರುವಿಕೆಯು ಖಚಿತ. ಆದರೆ ಅದನ್ನು ನಿರಾಕರಿಸಿಯೇ ತೀರುವೆವೆಂಬುದು ಅಕ್ರಮಿಗಳ ಹಠವಾಗಿದೆ. (ಪವಿತ್ರ ಕುರ್‌ಆನ್17:98-99)

''ಜನರೇ, ನಿಮಗೆ ಮರಣಾನಂತರದ ಜೀವನದ ಬಗೆಗೇನಾದರೂ ಸಂಶಯವಿದ್ದರೆ, ನಾವು ನಿಮ್ಮನ್ನು ಮಣ್ಣಿನಿಂದಲೂ, ಅನಂತರ ವೀರ್ಯದಿಂದಲೂ, ಆಮೇಲೆ ರಕ್ತಪಿಂಡದಿಂದಲೂ ಆ ಬಳಿಕ ರೂಪವಿರುವ ಮತ್ತು ರೂಪವಿಲ್ಲದ ಮಾಂಸದ ತುಣುಕಿನಿಂದಲೂ ಸೃಷ್ಟಿಸಿದೆವು ಎಂಬುದು ನಿಮಗೆ ತಿಳಿದಿರಲಿ. ನಿಮಗೆ ವಸ್ತುಸ್ಥಿತಿ ವಿವರಿಸಲಿಕ್ಕಾಗಿ (ನಾವು ಇದನ್ನು

ತಿಳಿಸುತ್ತಿದ್ದೇವೆ) ನಾವು ನಮಗಿಷ್ಟವಿರುವುದನ್ನು (ವೀರ್ಯವನ್ನು) ಒಂದು ನಿರ್ದಿಷ್ಟ ಅವಧಿಯ ತನಕ ಗರ್ಭಾಶಯದೊಳಗೆ ತಡೆದಿರಿಸುತ್ತೇವೆ. ಅನಂತರ ನಿಮ್ಮನ್ನು ಒಂದು ಶಿಸುವಿನ ರೂಪದಲ್ಲಿ ಹೊರತರುತ್ತೇವೆ. (ತರುವಾಯ) ನೀವು ತಾರುಣ್ಯಕ್ಕೆ ತಲುಪವಂತಾಗಲು (ನಿಮ್ಮನ್ನು ಪೋಷಿಸುತ್ತೇವೆ) ಮತ್ತು ನಿಮ್ಮಲ್ಲಿ ಕೆಲವರನ್ನು ಮೊದಲೇ ಹಿಂದಕ್ಕೆ ಕರೆಸಿಕೊಳ್ಳಲಾಗುತ್ತದೆ ಮತ್ತು ಕೆಲವರನ್ನು ಎಲ್ಲವನ್ನೂ ತಿಳಿದುಕೊಂಡ ಬಳಿಕ ಏನೂ ತಿಳಿಯದಂತಾಗಲು ಅತಿ ವೃದ್ಧಾಪ್ಯದೆಡೆಗೆ ತಿರುಗಿಸಿ ಬಿಡಲಾಗುತ್ತದೆ. ನೆಲವು ಒಣಗಿರುವುದನ್ನು ನೀವು ನೋಡುತ್ತೀರಿ, ಅನಂತರ ನಾವು ಅದರ ಮೇಲೆ ಮಳೆಗರೆದಾಗ ಅದು ಒಮ್ಮಲೆ ಮೊಳೆಯಿತು, ಉಬ್ಬಿತು ಮತ್ತು ಎಲ್ಲ ಬಗೆಯ ನಯನ ಮನೋಹರ ಸಸ್ಯಗಳನ್ನು ಹೊರಗೆಡಹ ತೊಡಗಿಬಿಟ್ಟಿತು.

ಪುನುರುತ್ಥಾನದ ಘಳಿಗೆಯು ಬಂದೇ ತೀರುವುದು (ಎಂಬುವುದಕ್ಕಿದು ಆಧಾರ) ಇದರಲ್ಲಿ ಸಂಶಯಕ್ಕೆ ಅವಕಾಶ ಇಲ್ಲ ಮತ್ತು ಸಮಾಧಿಯೊಳಗೆ ಹೋಗಿರುವವರನ್ನು ಅಲ್ಲಾಹನು ಖಂಡಿತವಾಗಿಯೂ ಎಬ್ಬಿಸುವನು.'' (ಪವಿತ್ರ ಕುರ್‌ಆನ್ 22:5-7)

''ನಿಮ್ಮೆಲ್ಲರನ್ನೂ ಸೃಷ್ಟಿಸುವುದೂ ಅನಂತರ ಪುನಃ ಜೀವಂತಗೊಳಿಸಿ ಎಬ್ಬಿಸುವುದೂ (ಅವನ ಮಟ್ಟಿಗೆ) ಕೇವಲ ಒಂದು ಜೀವಿಯನ್ನು ಸೃಷ್ಟಿಸುವ ಮತ್ತು ಪುನಃ ಜೀವಂತಗೊಳಿಸುವ ಹಾಗಿದೆ.'' (ಪವಿತ್ರ ಕುರ್‌ಆನ್ 31:28)

ಮರಣಾನಂತರ ಎಷ್ಟು ಮಾತ್ರಕ್ಕೂ ನಾವು ಎಬ್ಬಿಸಲ್ಪಡಲಾರೆವೆಂದು ಸತ್ಯನಿಷೇಧಿಗಳು ಬಹಳ ಧೈರ್ಯದಿಂದ ಸಾರಿದ್ದಾರೆ. ಅವರೊಡನೆ ಹೇಳಿರಿ, ''ಹಾಗಲ್ಲ, ನನ್ನ ಪ್ರಭುವಿನಾಣೆ! ನೀವು ಖಂಡಿತವಾಗಿಯೂ ಎಬ್ಬಿಸಲ್ಪಡುವಿರಿ. ತರುವಾಯ ನೀವು ಭೂಲೋಕದಲ್ಲಿ ಏನೇನು ಮಾಡಿರುವಿರೆಂಬುದನ್ನು ನಿಮಗೆ ಖಂಡಿತ ತೋರಿಸಿ ಕೊಡಲಾಗುವುದು ಮತ್ತು ಹೀಗೆ ಮಾಡುವುದು ಅಲ್ಲಾಹನ ಮಟ್ಟಿಗೆ ಬಹಳ ಸುಲಭವಾಗಿದೆ.'' (ಪವಿತ್ರ ಕುರ್‌ಆನ್ 64:7)

ಈ ಭೂಮಿ- ಆಕಾಶಗಳನ್ನು ಸೃಷ್ಟಿಸಿದ ಹಾಗೂ ಇವುಗಳನ್ನು ಉಂಟುಮಾಡುವುದರಲ್ಲಿ ದಣಿಯದ ಅಲ್ಲಾಹನು ಮೃತರನ್ನು ಪುನಃ ಜೀವಂತಗೊಳಿಸಲು ಖಂಡಿತ ಶಕ್ತನೆಂಬುದು ಇವರಿಗೆ ತೋಚುವುದಿಲ್ಲವೇ? ಏಕಿಲ್ಲ ! ನಿಶ್ಚಯವಾಗಿಯೂ ಅವನು ಸಕಲ ವಿಷಯಗಳ ಸಾಮರ್ಥ್ಯವುಳ್ಳವನು. (ಪವಿತ್ರ ಕುರ್‌ಆನ್ 46:33)

ಮಾನವನು ತನ್ನನ್ನು ಸುಮ್ಮನೆ ಬಿಟ್ಟುಬಿಡಲಾಗುವುದೆಂದು ಭಾವಿಸಿಕೊಂಡಿರುವನೇ? ಅವನು (ತಾಯಿಯ ಗರ್ಭದೊಳಗೆ) ಸುರಿಸಲ್ಪಡುವಂತಹ ಒಂದು ತುಚ್ಛ ವೀರ್ಯ ಬಿಂದುವಾಗಿರಲಿಲ್ಲವೇ? ತರುವಾಯ ಅವನು ಒಂದು ಪಿಂಡವಾದನು, ಅನಂತರ ಅಲ್ಲಾಹನು ಅವನ ಶರೀರವನ್ನು ನಿರ್ಮಿಸಿದನು ಮತ್ತು ಅಂಗಾಂಗಗಳನ್ನು ರೂಪಿಸಿದನು. ಆ ಬಳಿಕ ಅದರಿಂದ ಪುರುಷ ಮತ್ತು ಸ್ತ್ರೀಯ ಎರಡು ವರ್ಗಗಳನ್ನು ಮಾಡಿದನು. ಅವನು ಮೃತರನ್ನು ಪುನಃ ಜೀವಂತಗೊಳಿಸಲು ಶಕ್ತನಲ್ಲವೇ?(ಪವಿತ್ರ ಕುರ್‌ಆನ್ 75:36-40)

"ನಾವು ಅವನ ಎಲುಬುಗಳನ್ನು ಒಟ್ಟುಗೂಡಿಸಲಾರೆವೆಂದು ಮಾನವನು ಭಾವಿಸುತ್ತಿರುವನೇ? ಯಾಕಿಲ್ಲ? ನಾವಂತು ಅವನ ಬೆರಳುಗಳ ತುದಿಗಳನ್ನು ಕೂಡಾ ಸರಿಯಾಗಿ ರಚಿಸಲು ಶಕ್ತರಿದ್ದೇವೆ." (ಪವಿತ್ರ ಕುರ್‌ಆನ್ 75:3-4)

ಒಟ್ಟಿನಲ್ಲಿ ಶೂನ್ಯದಿಂದ ಮಾನವರನ್ನು ಸೃಷ್ಟಿಸಿದ ದೇವನಿಗೆ ಅವರನ್ನು ಪುನಃ ಜೀವಂತಗೊಳಿಸುವುದು ಕಷ್ಟಕರವಲ್ಲ. 600 ಕೋಟಿ ಮನುಷ್ಯರನ್ನು ವಿಭಿನ್ನ ಹಾಗೂ ವ್ಯತಿರಿಕ್ತವಾದ ಕೈಬೆರಳುಗಳು, ತಲೆಗೂದಲು, ರಕ್ತದಹನಿ, ಶರೀರದ ವಾಸನೆಯನ್ನು ನೀಡಿ ಸೃಷ್ಟಿಸಿದವನಿಗೆ ಅವರ ಪುನರ್ ನಿರ್ಮಾಣ ಕಷ್ಟಕರವಾಗುವುದು ಹೇಗೆ? ನಿರ್ಜೀವವಾದ ಭೂಮಿ ಮಳೆಯ ನೀರಿಗೆ ಹಸಿರಿನಿಂದ ಕಂಗೊಳಿಸುವಂತೆ, ಸತ್ತು ಮಣ್ಣಾದ ಮನುಷ್ಯನು ಅಲ್ಲಾಹನು ಕರೆಯುವಾಗ ಓಡಿಬರುವನೆಂಬುದು ಅದ್ಭುತವೋ ಅವಿಶ್ವಸನೀಯವೋ ಅಲ್ಲ. ಶರೀರದ ಒಂದು ಕಣದಿಂದ ಕ್ಲೋನಿಂಗ್ ಮೂಲಕ ಪೂರ್ಣ ಮನುಷ್ಯನನ್ನು ಸೃಷ್ಟಿಸುವ ಪ್ರಯತ್ನ ನಡೆಯುತ್ತಿರುವ ಈ ಕಾಲದಲ್ಲಿ ಸರ್ವಶಕ್ತನಾದ ದೇವನು ಮನುಷ್ಯರನ್ನು ಪುನಃ ಸೃಷ್ಟಿಸುವನೆಂಬುದನ್ನು ಒಪ್ಪಿಕೊಳ್ಳದಿರುವುದೇ ಅತ್ಯಂತ ಆಶ್ಚರ್ಯಕರ ವಿಚಾರವಾಗಿದೆ.

## 11 ಪರಲೋಕದಲ್ಲೂ ಮೀಸಲಾತಿಯೇ?

ಇಸ್ಲಾಮ್ ಮುಸ್ಲಿಮರಿಗೆ ಮಾತ್ರ ಸ್ವರ್ಗಪ್ರವೇಶ ಎಂದು ಹೇಳುತ್ತದೆ. ಇದು ಬಹ
ಸಂಕುಚಿತ ದೃಷ್ಟಿಕೋನವಲ್ಲವೆ? ಪರಲೋಕದಲ್ಲೂ ಮೀಸಲಾತಿಯೇ?

ಓರ್ವ ವ್ಯಕ್ತಿಗೆ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕೆಂಬ ಬಯಕೆ ಇರುವುದಿಲ್ಲ, ಆದ್ದರಿಂ
ಪರೀಕ್ಷೆಯಲ್ಲಿ ಬಂದ ಪ್ರಶ್ನೆಗಳಿಗೆ ಉತ್ತರಿಸುವ ಗೋಜಿಗೆ ಹೋಗುವುದಿಲ್ಲ, ಏನೇನೆಲ್ಲಾ ಬರೆದಿಟ್ಟ
ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದಿಲ್ಲ, ಅಲ್ಲದೆ ಅವನಿಗೆ ತಾನು ಉತ್ತೀರ್ಣರಾಗುತ್ತೇನೆಂ
ನಿರೀಕ್ಷೆಯೂ ಇರುವುದಿಲ್ಲ, ಅದೇ ರೀತಿ ಓರ್ವ ರೋಗಿಗೆ ರೋಗ ಗುಣವಾಗಬೇಕಾಗಿಲ್ಲ
ರೋಗಶಮನಕ್ಕೆ ನೀಡಿದ ಔಷಧಿಯನ್ನು ಸೇವಿಸುವುದಿಲ್ಲ, ಆದ್ದರಿಂದ ಆತನ ರೋ
ಗುಣವಾಗಬೇಕೆಂದು ಯಾರೂ ಹೇಳಲಾರರು. ಹೀಗೆ ಸ್ವರ್ಗ ಲಭಿಸಲು ನಿಶ್ಚಯಿಸಲಾ
ಮಾರ್ಗವನ್ನು ಅವಲಂಬಿಸದೆ ಜೀವಿಸುವವರಿಗೆ ಸ್ವರ್ಗ ಲಭಿಸುವುದಿಲ್ಲ, ಅಂತಹವರಿ
ಸ್ವರ್ಗನೀಡಬೇಕೆಂದು ನ್ಯಾಯ ಪ್ರಿಯರಿಂದ ಬೇಡಿಕೆಯೂ ಇರುವುದಿಲ್ಲ.

ಸ್ವರ್ಗವು ಸಜ್ಜನರಿಗೆ ದೇವನು ನೀಡುವ ವರದಾನವಾಗಿದೆ. ಧರ್ಮವೇದಗ್ರಂಥಗಳ
ದೇವ ಸಂದೇಶವಾಹಕರ ಮೂಲಕ ಅಲ್ಲಾಹನು ಅದನ್ನೇ ವಾಗ್ದಾನ ಮಾಡಿದ್ದಾನೆ. ಆದ್ದರಿಂ
ಸೃಷ್ಟಿಕರ್ತ, ಸ್ವರ್ಗ, ದೇವಸಂದೇಶವಾಹಕರು ಹಾಗೂ ದೇವಗ್ರಂಥಗಳಲ್ಲಿ ನೈಜ ವಿಶ್ವಾಸವಿರಿಸಿ
ಅದನ್ನು ಅನುಸರಿಸುವವರಿಗೆ ಮಾತ್ರ ಸ್ವರ್ಗ ಲಭಿಸುತ್ತದೆ. ಈ ವಿಷಯದಲ್ಲಿ ಅಲ್ಲಾಹನ
ಯಾರೊಡನೆಯೂ ರಿಯಾಯಿತಿ ತೋರಿಸಲಾರ. ಆದರೆ ಅವೆಲ್ಲವನ್ನೂ ಧಿಕ್ಕರಿಸಿ ನಡೆದವರಿ
ಸ್ವರ್ಗ ದೊರೆಯಬಹುದೆಂಬ ನಿರೀಕ್ಷೆಯೇ ಬೇಡ. ಅದನ್ನು ಅವರು ಬಯಸುವುದಕ್ಕ
ಅರ್ಥವಿಲ್ಲ, ಆದ್ದರಿಂದ ಇದು ಸಂಕುಚಿತತೆ ಅಥವಾ ಮೀಸಲಾತಿಯ ವಿಷಯವಲ್ಲ, ನ್ಯಾಯ
ತೀರ್ಮಾನವೇ ಅಲ್ಲಿ ಜಾರಿಯಾಗುವುದು.

### ಮುಸ್ಲಿಮೇತರರೆಲ್ಲಾ ನರಕ ಪ್ರವೇಶಿಸುವರೇ?

ಮುಸ್ಲಿಮ್ ಸಮುದಾಯದ ವ್ಯಕ್ತಿಗೆ ದೇವ, ಪ್ರವಾದಿ, ದೇವಗ್ರಂಥ ಹಾಗೂ
ಸ್ವರ್ಗ-ನರಕಗಳ ಅರಿವು ಸಹಜವಾಗಿ ದೊರೆಯುತ್ತದೆ. ಆದರೆ ಬೇರೆ ಯಾರಿಗೂ ಇದ
ದೊರೆಯುವ ಸಾಧ್ಯತೆಯಿಲ್ಲ, ಆ ಧಾರ್ಮಿಕ ಜ್ಞಾನ ದೊರೆಯದೆ, ಆ ರೀತಿ ಬದುಕಲಾಗದವರ
ನರಕವಾಸಿಗಳೆಂದು ನಿಮ್ಮ ಭಾವನೆಯೇ?

ಮುಸ್ಲಿಮ್ ಸಮುದಾಯದಲ್ಲಿ ಜನಿಸಿ, ಧಾರ್ಮಿಕ ಜ್ಞಾನದ ಸ್ಪಷ್ಟ ತಿಳುವಳಿಕೆ ಪಡೆದ ಬಳಿಕವೂ ಅದರಂತೆ ಜೀವಿಸದವರು ಸತ್ಯನಿಷೇಧಿ(ಕಾಫಿರ್)ಗಳಾಗಿದ್ದಾರೆ. ಅವರಿಗೆ ಮರಣಾನಂತರ ಕಠಿಣ ಶಿಕ್ಷೆ ದೊರೆಯುತ್ತದೆಂದು ಕುರ್‌ಆನ್ ಮುನ್ನೆಚ್ಚರಿಕೆ ನೀಡಿದೆ. ಮಾತ್ರವಲ್ಲ ದೇವಸಂದೇಶವನ್ನು ಮನವರಿಕೆಯಾಗಿ ಅದನ್ನು ಅರಿತವರು, ಅದನ್ನು ಅರಿಯದವರಿಗೆ ತಿಳಿಸಿಕೊಡದಿದ್ದರೆ, ಅವರು ಕೂಡಾ ಶಿಕ್ಷಾರ್ಹರಾಗುತ್ತಾರೆ.

ಆದರೆ ದೇವಧರ್ಮದ ಕುರಿತು ಸ್ವಲ್ಪವೂ ತಿಳವಳಿಕೆಯಿಲ್ಲದವರು ನರಕವಾಸಿಗಳೆಂದು ಇಸ್ಲಾಮ್ ಕಲಿಸುವುದಿಲ್ಲ, ಕುರ್‌ಆನ್ ಮತ್ತು ಪ್ರವಾದಿಚರ್ಯೆಯೂ ಅದನ್ನು ಸೂಚಿಸುವುದಿಲ್ಲ, ಬದಲಾಗಿ ದಿವ್ಯ ಸಂದೇಶ ತಲುಪದವರು ಶಿಕ್ಷಿಸಲ್ಪಡುವುದಿಲ್ಲವೆಂದು ಕುರ್‌ಆನ್ ಕಲಿಸುತ್ತದೆ.

ಹೀಗಿದೆ. **''ಸನ್ಮಾರ್ಗ ಸ್ವೀಕರಿಸಿಕೊಳ್ಳುವವನ ಸನ್ಮಾರ್ಗಶಮನವು ಅವನಿಗೇ ಒಳಿತಾಗಿದೆ ಮತ್ತು ಪಥಭ್ರಷ್ಟನ ಪಥಭ್ರಷ್ಟತೆಯ ವಿಪತ್ತೂ ಅವನ ಮೇಲೆಯೇ ಬೀಳುತ್ತದೆ. ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆಯನ್ನು ಹೊರಲಾರನು. (ಜನರಿಗೆ ಸತ್ಯಾಸತ್ಯತೆಗಳ ಅಂತರವನ್ನು ತೋರಿಸಿಕೊಡಲು) ಓರ್ವ ಸಂದೇಶವಾಹಕರನ್ನು ಕಳಿಸಿಕೊಡದೆ ನಾವು ಯಾತನೆ ನೀಡುವವರಲ್ಲ.'' (ಪವಿತ್ರ ಕುರ್‌ಆನ್ 17:15)**

ಅದೇ ವೇಳೆ ದೇವನ ಕುರಿತು ಅರಿಯದವರು ಅಥವಾ ಸಾಮಾನ್ಯ ಒಂದು ಭಾವನೆ ಇಲ್ಲದವರು ಇರುವುದಿಲ್ಲ, ದೇವನ ಕುರಿತು ಹುಡುಕಾಟ ನಡೆಸಲು ದೇವನಿಂದ ಏನಾದರೂ ಜೀವನ ಮಾರ್ಗ ಲಭ್ಯವಾಗಿದೆಯೇ? ಎಂದು ನೋಡಬೇಕಾದುದು ಅವರ ಜವಾಬ್ದಾರಿಯಾಗಿದೆ. ಅಲ್ಲದೆ ಸ್ವರ್ಗವೆಂಬುದು ಇದೆ ಮತ್ತು ನಿಶ್ಚಿತಮಾರ್ಗದಲ್ಲಿ ನಡೆದರೆ ಅದು ಲಭಿಸುತ್ತದೆಂಬ ವಿಷಯ ಕೇಳಿ ತಿಳಿದವರೆಲ್ಲಾ ಆದರ ಕುರಿತು ಕಲಿಯುವುದು ಅವರ ಕರ್ತವ್ಯವಾಗಿದೆ. ಅದರ ಉಲ್ಲಂಘನೆ ಶಿಕ್ಷಾರ್ಹ ಅಪರಾಧವಾಗುವುದು ಸ್ವಾಭಾವಿಕವಲ್ಲವೇ?

## ಸತ್ಕರ್ಮಿಗಳೆಲ್ಲರೂ ಸ್ವರ್ಗವಾಸಿಗಳಾಗಬೇಕೆಂದಿಲ್ಲ.

ಓರ್ವ ವ್ಯಕ್ತಿಗೆ ದೇವನಲ್ಲಿ ಹಾಗೂ ಮರಣಾನಂತರ ಜೀವನದಲ್ಲಿ ವಿಶ್ವಾಸವಿರುವುದಿಲ್ಲ, ಆತ ಮದ್ಯಪಾನಿ ಅಥವಾ ವ್ಯಭಿಚಾರಿಯೂ ಅಲ್ಲ, ಯಾರನ್ನೂ ವಂಚಿಸುವವನೂ ಅಲ್ಲ, ತನ್ನ ಕೈಲಾದಷ್ಟು ಉಪಕಾರ ಮಾಡುತ್ತಾನೆ. ಆತನಿಗೆ ಸ್ವರ್ಗ ಲಭಿಸುವುದೇ? ಓರ್ವ ವ್ಯಕ್ತಿ ನಿಷ್ಠೆಯಿಂದ ದುಡಿದು ಕಾರ್ಯಸಾಧಿಸಿದ್ದರೂ ಆತ ಉದ್ದೇಶಿಸಿದ್ದು ಮಾತ್ರ ಲಭಿಸುತ್ತದೆ. ಅದೇ ರೀತಿ ಮರಣಾನಂತರ ಜೀವನ ಹಾಗೂ ದೇವನಲ್ಲಿ ವಿಶ್ವಾಸವಿಲ್ಲದ ವ್ಯಕ್ತಿ ಕೆಡುಕಿನಿಂದ ದೂರವುಳಿದು, ಸತ್ಕರ್ಮಗಳನ್ನುಸ್ವರ್ಗಸಿಗಬೇಕೆಂಬಉದ್ದೇಶದಿಂದಖಂಡಿತಮಾಡುವುದಿಲ್ಲ.ಆಕಾರ್ಯಗಳಿಂದ ಸಮಾಜದಲ್ಲಿ ಹೆಸರು ಗಳಿಸಬೇಕೆಂಬ ಉದ್ದೇಶವಿದ್ದರೆ ಅದು ದೊರೆಯುತ್ತದೆ ಅಥವಾ ಮನಃ ಸಂತೃಪ್ತಿ ಅಥವಾ ಆತ್ಮಶಾಂತಿ ಬಯಸುವುದಾದರೆ ಅದೂ ಲಭಿಸುತ್ತದೆ. ದೇವಪ್ರೀತಿ ಮತ್ತು ಪ್ರತಿಫಲವನ್ನು ನಿರೀಕ್ಷಿಸಿ ಕಾರ್ಯನಿರತರಾದವರಿಗೆ ಮಾತ್ರ ಅದು ಲಭಿಸುವುದು. ಆದ್ದರಿಂದ

ಮೊದಲೇ ಸ್ಪಷ್ಟಪಡಿಸಿದಂತೆ ಸ್ವರ್ಗದ ನಿರೀಕ್ಷೆಯಿಂದ ಅದೇ ದಾರಿಯಲ್ಲಿ ಸಾಗಿದವರಿಗೆ ಮಾ
ಅಲ್ಲಿ ತಲುಪಲು ಸಾಧ್ಯ.

## ಸ್ವರ್ಗ ಜೀವನವೆಂದರೆ ಹೇಗೆ?

ಇಸ್ಲಾಮ್ ಪ್ರಸ್ತಾಪಿಸುವ ಸ್ವರ್ಗದ ಕುರಿತು ವಿವರಣೆಗಳು ಶ್ರೀಮಂತ ಸಮೂಹ
ಸುಖಸುಪ್ಪತಿಗೆಯ ಜೀವನಕ್ಕೆ ಸಮಾನವೆಂಬ ಭಾವನೆ ಮೂಡುತ್ತದೆ. ಸ್ವರ್ಗ ಜೀವನವೂ
ಭೂಮಿಯ ಮೇಲಿನ ಜೀವನದಂತೆಯೇ ಇರುವುದೇ? ಅಲೌಕಿಕ ವಿಚಾರಗಳ ಕುರಿ
ಅರಿವು ಲಭಿಸುವ ಏಕೈಕ ಮಾಧ್ಯಮ ದೇವನ ಸಂದೇಶಗಳಾಗಿವೆ. ಆದ್ದರಿಂದ ದೇವ, ಸ್ವರ್ಗ
ನರಕ, ದೇವಚರರು, ಪಿಶಾಚಿಗಳ ಕುರಿತು ದೇವಸಂದೇಶವಾಹಕರಿಂದ ಲಭಿಸಿದ ಜ್ಞಾನ
ಹೊರತು ಬೇರೆ ಯಾರಿಗೂ ಅದರ ಜ್ಞಾನವಿಲ್ಲ. ಮನುಷ್ಯರ ಪರಿಮಿತಿಯನ್ನು ತಿಳಿದುಕೊಂ
ಅವರು ಅರ್ಥಮಾಡಿಕೊಳ್ಳಲು ಸಾಧ್ಯವಾಗುವ ಭಾಷೆಯಲ್ಲಿ, ಶೈಲಿಯಲ್ಲಿ ದೇವನು ಅಲೌಕಿ
ವಿಷಯಗಳನ್ನು ವಿವರಿಸಿದ್ದಾನೆ. ಆದ್ದರಿಂದ ಸ್ವರ್ಗದ ವಿವರಣೆಯಲ್ಲಿ ಕುರ್‌ಆನ್ ಯಾವುದ
ಸಮಸ್ಯೆ, ನೋವು ದುಃಖವಿಲ್ಲದ ಸಂತೃಪ್ತಿ, ಆಹ್ಲಾದಭರಿತ ಸುಖಮಯ ಜೀವನವೆಂದು ಕು
ಆನ್ ಹೇಳುತ್ತದೆ:

**''ನಾವು ಈ ಲೋಕದ ಜೀವನದಲ್ಲೂ ಪರಲೋಕದಲ್ಲೂ ನಿಮ್ಮ ಸಂಗಾತಿಗಳಾಗಿದ್ದೇ
ಅಲ್ಲಿ ನೀವು ಬಯಸಿದ್ದೆಲ್ಲವೂ ನಿಮಗೆ ಸಿಗುವುದು. ನೀವು ಆಶಿಸಿದ ಪ್ರತಿಯೊಂದು ವಸ್ತ
ನಿಮ್ಮದಾಗುವುದು.'' (ಪವಿತ್ರ ಕುರ್‌ಆನ್ 41:31)**

ಮನುಷ್ಯನ ಊಹೆಗೆ ನಿಲುಕದ ಸ್ವರ್ಗೀಯ ಸುಖದ ಕುರಿತು ಪ್ರವಾದಿ(ಸ) ಹೇಳಿದರ
'ಯಾವ ಕಣ್ಣೂ ಕಾಣದ, ಯಾವ ಕಿವಿಯೂ ಕೇಳಿರದ, ಯಾವುದೇ ಮನಸ್ಸು ಊಹಿಸಿರದಂತ
ಜೀವನವಾಗಿರುವುದು' ಆದ್ದರಿಂದ ಸ್ವರ್ಗೀಯ ಬದುಕು ಯಾವ ರೀತಿಯೆಂದು ಇಲ್ಲಿಂ
ಲೆಕ್ಕಹಾಕುವುದು ಸಾಧ್ಯವಲ್ಲ. ಆದರೆ ಯಾವುದೇ ರೀತಿಯ ಸಂಕಷ್ಟ, ದುಃಖವಿಲ್ಲದ, ನಮ್ಮ ಆ
ಅಭಿಲಾಷೆಗಳೆಲ್ಲವೂ ಪೂರ್ಣಗೊಳಿಸುವ, ಶಾಂತಿ ಸಮಾಧಾನದ ಒಂದು ಸುಂದರ ಲೋ
ಸ್ವರ್ಗ ಎಂಬುದರಲ್ಲಿ ಸಂಶಯವಿಲ್ಲ.

## ಸ್ವರ್ಗದ ಬದುಕು ಸಾಕೆನಿಸುವುದಿಲ್ಲವೇ?

ಯಾವಾಗಲೂ ಒಂದೇ ರೀತಿಯ ಜೀವನದಿಂದ ನಮಗೆ ಸಾಕೆನಿಸಬಹುದಲ್ಲವೇ?
ಪ್ರಶ್ನೆ ನಮ್ಮ ಇಂದಿನ ಮಾನಸಿಕ ಸ್ಥಿತಿ, ವಿಚಾರ ವಿಕಾರಗಳಿಂದ ಹುಟ್ಟಿಕೊಂಡಿದೆ. ಸ್ವಲ್ಪ ಕಾ
ಸ್ವರ್ಗ ಸುಖ ಅನುಭವಿಸುವಾಗ ನಮಗೆ ಅದರಲ್ಲಿ ಜಿಗುಪ್ಸೆ ಮೂಡಬಹುದೆಂದು ನಮ
ಭಾಸವಾಗುತ್ತದೆ. ಭೂಮಿಯಲ್ಲಿ ನಮಗೆ ಸಂತೋಷ, ಪ್ರೀತಿ, ದ್ವೇಷ, ನಿರಾಸೆ, ಆಸೆ, ಅಸೂಯೆ
ಹಗೆತನ, ಕರುಣೆ, ಹಿಂಸೆ ..... ಹೀಗೆ ವಿವಿಧ ರೂಪಗಳನ್ನು ನಾವು ಅನುಭವಿಸುತ್ತೇವೆ. ಆದ
ಸ್ವರ್ಗದ ಮಾನಸಿಕ ಸ್ಥಿತಿ ಸಂಪೂರ್ಣ ಭಿನ್ನವಾಗಿದೆ. ಅಲ್ಲಿ ವಿರಸ, ದ್ವೇಷ, ಅಸೂಯ, ನಿರಾ

ಎಂಬುದೇ ಇರುವುದಿಲ್ಲ. ಇದನ್ನು ಕುರ್‌ಆನ್ ಹಾಗೂ ಪ್ರವಾದಿ ವಚನಗಳು ಸ್ಪಷ್ಟಪಡಿಸಿದೆ. ಜಿಗುಪ್ಸೆ ಮೂಡುವ ಅಹಿತಕರವಾದ ಅನುಭವಗಳಿಂದ ಕೂಡಿದ ಸ್ಥಳವು ಸ್ವರ್ಗವಾಗಲು ಸಾಧ್ಯವಿಲ್ಲ. **'ಆಶಿಸುವುದೆಲ್ಲಾ ಅಲ್ಲಿ ಸಿಗುವುದು'** ಎಂದರೆ (ಪವಿತ್ರ ಕುರ್‌ಆನ್ 41:31) ಜಿಗುಪ್ಸೆ ಮೂಡದ ಮಾನಸಿಕ ಸ್ಥಿತಿಯೂ ಅಲ್ಲಿ ಇರಲೇ ಬೇಕಲ್ಲವೇ?

## 12 ಸ್ವರ್ಗದಲ್ಲೂ ಸ್ತ್ರೀ ತಾರತಮ್ಯವೇ?

ಪರಲೋಕದಲ್ಲಿ ಪುರುಷರಿಗೆ ಸ್ವರ್ಗ ಕನ್ಯೆಯರು ಜೋಡಿಯಾಗಿ ಲಭಿಸುವರೆಂದು ಕುರ್‌ಆನ್ ಹೇಳುತ್ತದೆ. ಆದರೆ ಸ್ತ್ರೀಯರಿಗೆ ಇಂತಹ ಜೋಡಿಗಳನ್ನು ನೀಡುವ ಕುರಿತು ಯಾವುದೇ ಪ್ರಸ್ತಾಪವಿಲ್ಲ. ಸ್ವರ್ಗದಲ್ಲೂಸ್ತ್ರೀ ತಾರತಮ್ಯವೆ?

ದೇವ ನಿಯಮದಂತೆ ಭೂಮಿಯಲ್ಲಿ ಬದುಕಿದವರಿಗೆ ವಾಗ್ದಾನ ನೀಡಲಾದ ಸ್ಥಳವೇ ಸ್ವರ್ಗ. ಈ ವಿಷಯದಲ್ಲಿ ಸ್ತೀ ಪುರುಷರ ನಡುವೆ ಇಸ್ಲಾಮ್‌ನಲ್ಲಿ ವ್ಯತ್ಯಾಸವಿಲ್ಲ. ಕುರ್‌ಆನ್ ಹೇಳುತ್ತದೆ: ''ಸತ್ಯವಿಶ್ವಾಸಿ ಪುರುಷರು ಮತ್ತು ಸತ್ಯವಿಶ್ವಾಸಿ ಸ್ತ್ರೀಯರು ಇವರೆಲ್ಲ ಪರಸ್ಪರ ಆಪ್ತರು; ಅವರು ಒಳಿತುಗಳ ಅಪ್ಪಣೆ ಕೊಡುತ್ತಾರೆ ಮತ್ತು ಕೆಡುಕುಗಳಿಂದ ತಡೆಯುತ್ತಾರೆ, ನಮಾಝ್ ಸಂಸ್ಥಾಪಿಸುತ್ತಾರೆ, ಝಕಾತ್ ಕೊಡುತ್ತಾರೆ ಮತ್ತು ಅಲ್ಲಾಹ್ ಹಾಗೂ ಅವನ ರಸೂಲರ ಅನುಸರಣೆ ಮಾಡುತ್ತಾರೆ. ಇವರ ಮೇಲೆ ಅಲ್ಲಾಹನ ಕರುಣೆ ಅವತೀರ್ಣಗೊಂಡೇ ತೀರುವುದು. ನಿಶ್ಚಯವಾಗಿಯೂ ಅಲ್ಲಾಹ್ ಮಹಾ ಪ್ರತಾಪಿಯೂ ಯುಕ್ತಿಪೂರ್ಣನು ಆಗಿರುತ್ತಾನೆ. ಅಲ್ಲಾಹ್ ಈ ಸತ್ಯವಿಶ್ವಾಸಿ ಸ್ತ್ರೀ - ಪುರುಷರಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳನ್ನು ನೀಡುವ ವಾಗ್ದಾನ ಮಾಡುತ್ತಾನೆ. ಅವರು ಅದರಲ್ಲಿ ಸದಾ ವಾಸಿಸುತ್ತಿರುವರು. ಆ ಸದಾ ಹಸುರಾದ ಉದ್ಯಾನಗಳಲ್ಲಿ ಅವರಿಗಾಗಿ ನಿರ್ಮಲ ವಸತಿಗಳಿರುವುದು. ಎಲ್ಲಕ್ಕೂ ಮಿಗಿಲಾಗಿ ಅವರಿಗೆ ಅಲ್ಲಾಹನ ಸಂಪ್ರೀತಿಯು ಪ್ರಾಪ್ತವಾಗುವುದು ಇದುವೇ ಮಹಾ ಯಶಸ್ಸು.'' (ಪವಿತ್ರ ಕುರ್‌ಆನ್ 9: 71-72)

''ನಿಶ್ಚಯವಾಗಿಯೂ ಮುಸ್ಲಿಮರೂ, ಸತ್ಯವಿಶ್ವಾಸಿಗಳೂ, ಆಜ್ಞಾಪಾಲಕರೂ, ಸತ್ಯಸಂಧರೂ, ಸಹನಾಶೀಲರೂ, ವಿನಮ್ರರೂ, ದಾನಶೀಲರೂ, ಉಪವಾಸ ವ್ರತ ಆಚರಿಸುವವರೂ, ತಮ್ಮ ಗುಪ್ತಾಂಗಗಳ ರಕ್ಷಣೆ ಮಾಡಿಕೊಳ್ಳುವವರೂ, ಅಲ್ಲಾಹನನ್ನು ಅತ್ಯಧಿಕವಾಗಿ ಸ್ಮರಿಸುವವರೂ ಆದ ಎಲ್ಲಾ ಪುರುಷರು ಮತ್ತು ಸ್ತ್ರೀಯರಿಗೆ ಅಲ್ಲಾಹನು ಕ್ಷಮೆ ಮತ್ತು ಅತಿ ದೊಡ್ಡ ಸತ್ಫಲವನ್ನು ಸಿದ್ಧಗೊಳಿಸಿಟ್ಟಿದ್ದಾನೆ.'' (ಪವಿತ್ರ ಕುರ್‌ಆನ್ 33: 35)

ನಾನು ನಿಮ್ಮಲ್ಲಿ ಯಾರೊಬ್ಬನ ಕರ್ಮವನ್ನೂ ನಿಷ್ಫಲಗೊಳಿಸುವವನಲ್ಲ. ಪುರುಷರಾಗಲಿ ಸ್ತ್ರೀಯರಾಗಲಿ ನೀವೆಲ್ಲ ಒಂದೇ ವರ್ಗದವರು. ಆದ್ದರಿಂದ ಯಾರು ನನಗಾಗಿ ದೇಶತ್ಯಾಗ ಮಾಡಿದರೋ, ನನ್ನ ಮಾರ್ಗದಲ್ಲಿ ಮನೆಮಾರುಗಳಿಂದ ಹೊರಹಾಕಲ್ಪಟ್ಟರೋ ಸತಾಯಿಸಲ್ಪಟ್ಟರೋ, ನನಗಾಗಿ ಹೋರಾಟ ನಡೆಸಿದರೋ ಮತ್ತು ವಧಿಸಲ್ಪಟ್ಟರೋ ಅವರೆಲ್ಲ

ಅಪರಾಧಗಳನ್ನು ನಾನು ಕ್ಷಮಿಸಿಬಿಡುವೆನು ಮತ್ತು ಅವರಿಗೆ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವ ಉದ್ಯಾನಗಳಲ್ಲಿ ಪ್ರವೇಶಕೊಡುವೆನು. ಇದು ಅವರಿಗೆ ಅಲ್ಲಾಹನ ಬಳಿ ಇರುವ ಪ್ರತಿಫಲ ಮತ್ತು ಅತ್ಯುತ್ತಮ ಪ್ರತಿಫಲ ಅಲ್ಲಾಹನ ಬಳಿಯಲ್ಲೇ ಇದೆ. (ಪವಿತ್ರ ಕುರ್‌ಆನ್ 3: 195)

ಸ್ತ್ರೀ ಪುರುಷರೆಂಬ ಭೇದವಿಲ್ಲದೆ ಸತ್ಕರ್ಮ ಮಾಡುವವರೆಲ್ಲಾ ಸ್ವರ್ಗವಾಸಿಗಳೆಂದು ಈ ಕುರ್‌ಆನ್ ವಾಕ್ಯಗಳು ಸ್ಪಷ್ಟಪಡಿಸುತ್ತದೆ. ಸ್ವರ್ಗವು ದೇವನ ಮಹತ್ತರವಾದ ಕೊಡುಗೆಯಾಗಿದೆ. ಪುರುಷರಿಗೆ ಜೋಡಿಗಳಾಗಿ ಸ್ವರ್ಗಕನ್ಯೆಯರು ಲಭಿಸುವುದಾದರೆ ಸ್ತ್ರೀಯರಿಗೂ ಪುರುಷರು ಜೋಡಿಗಳಾಗಿ ಸಿಗುವರೆಂಬುದು ಸ್ವಾಭಾವಿಕ. ಒಂದು ಹೇಳಿದರೆ ಇನ್ನೊಂದು ಹೇಳುವ ಅಗತ್ಯವೇ ಇಲ್ಲದಂತೆ ಸ್ಪಷ್ಟವಾಗಿದೆ. ಆದ್ದರಿಂದ ಅದರ ಶೈಲಿ, ಉದಾಹರಣೆ ಪ್ರಯೋಗಗಳು ಜನರಿಗೆ ಸುಲಭವಾಗಿ ಗ್ರಹಿಸುವಂತೆ ಅತ್ಯಂತ ಪರಿಚಿತ ಶೈಲಿಯಲ್ಲಿದೆ. ಎಲ್ಲಾ ಕಾಲದ ವಿಶ್ವ ಸಾಹಿತ್ಯದಂತೆ ಕುರ್‌ಆನ್‌ಲ್ಲೂ ಅರಬಿ ಸಾಹಿತ್ಯದ ಸೌಂದರ್ಯ ಎದ್ದು ಕಾಣುತ್ತದೆ. ಕುರ್‌ಆನ್‌ನಲ್ಲಿ ಸಂಬೋಧಿಸಲಾದ ಸಮೂಹಕ್ಕೆ ಅತ್ಯಂತ ಸ್ವೀಕಾರಾರ್ಹ ಹಾಗೂ ಸುಲಭಗ್ರಾಹಿಯ ಶೈಲಿಯನ್ನು ಸ್ವೀಕರಿಸಲಾಗಿದೆ. ಅದೇ ರೀತಿ ಭೂಮಿಯಲ್ಲಿ ನಾವು ತಿಳಿಯುವ, ಊಹಿಸಿರುವ ಸಕಲ ಸೀಮೆಗಳಿಗೂ ಅತೀತವಾದ ಸುಖಾಡಂಬರಗಳು ಸ್ವರ್ಗದಲ್ಲಿವೆಯೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ. ಅಲ್ಲದೆ ಸ್ತ್ರೀ ಪುರುಷರು ಸಮಾನ ಪಾಲುದಾರರೆಂದು ತಿಳಿಸಿದೆ. ಆದ್ದರಿಂದ ಸ್ವರ್ಗದಲ್ಲಿ ಮಹಿಳಾ ತಾರತಮ್ಯವೆಂಬ ಪ್ರಶ್ನೆಯೇ ಮೂಡುವುದಿಲ್ಲ, ಒಂದು ವರ್ಗಕ್ಕೆ ಅಗೋಚರವಾದ ಯಾವುದೂ ಸ್ವರ್ಗದಲ್ಲಿಲ್ಲವೆಂದು ಧರ್ಮಗ್ರಂಥವು ಸ್ಪಷ್ಟವಾಗಿ ಹೇಳಿದೆ.

## ಭೂಮಿಯಲ್ಲಿರುವ ವೈಕಲ್ಯ ಸ್ವರ್ಗದಲ್ಲಿರುವುದೇ?

ಮನುಷ್ಯರು ಈ ಲೋಕದಲ್ಲಿದ್ದಂತೆಯೇ ಪರಲೋಕದಲ್ಲೂ ಇರುತ್ತಾರೆಯೇ? ಈ ಲೋಕದಲ್ಲಿ ಅಂಗವಿಕಲರಾಗಿ, ಕುರುಡರಾಗಿ, ಕುರೂಪಿಗಳಾಗಿ ಇದ್ದವರು ಅಲ್ಲಿಯೂ ಅದೇ ಸ್ಥಿತಿಯಲ್ಲಿರುವರೆ?

ಲೌಕಿಕ ಪ್ರಪಂಚದ ಪದಾರ್ಥಕ್ಕೆ ಅನುಗುಣವಾದ ವಾತಾವರಣದಲ್ಲಿ ವಿಷಯಗಳನ್ನು ಗ್ರಹಿಸಲು ಅಗತ್ಯವಾದ ಪಂಚೇಂದ್ರಿಯಗಳು ಹಾಗೂ ಬೌದ್ಧಿಕ ಸಾಮರ್ಥ್ಯವನ್ನು ಅಲ್ಲಾಹನು ನಮಗೆ ನೀಡಿದ್ದಾನೆ. ಅವುಗಳಿಂದ ತೀರಾ ಭಿನ್ನವಾಗಿರುವಂತಹ ಪರಲೋಕದ ಸ್ಥಿತಿಯನ್ನು ಅರಿಯುವುದು ಸಾಧ್ಯವಿಲ್ಲ, ಆದ್ದರಿಂದ ದಿವ್ಯಗ್ರಂಥಗಳ ಸಂದೇಶಗಳು ಮಾತ್ರ ಅವಲಂಬನೀಯವಾಗಿದೆ. ಪರಲೋಕ ಜೀವನದ ಸೂಕ್ಷ್ಮ ವಿಚಾರಗಳನ್ನು ಅದರಲ್ಲಿ ವಿವರಿಸಲಾಗಿಲ್ಲ, ಸ್ವರ್ಗವೆಂದರೆ ಐಶಾರಾಮದ ಉನ್ನತಿ ಹಾಗೂ ನರಕವು ತೀವ್ರ ಶಿಕ್ಷೆಯ ಸಂಕೇತವೆಂಬ ಭಾವನೆ ಮೂಡಿಸಲು ಅಗತ್ಯವಾದ ಸೂಚನೆಗಳನ್ನು ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ನೀಡಲಾಗಿದೆ. ಯಾವ ಕಣ್ಣೂ ಕಾಣದ ಯಾವ ಕಿವಿಯೂ ಆಲಿಸದ, ಯಾವ ಮನಸ್ಸೂ ಊಹಿಸದ ಸುಖ ಸೌಭಾಗ್ಯ ಸ್ವರ್ಗದಲ್ಲಿದೆಯೆಂಬುದು ಮಾತ್ರ ಸ್ಪಷ್ಟ. ಪರಲೋಕದ ಪರಿಸ್ಥಿತಿಯನ್ನು ಸಂಪೂರ್ಣ ಗ್ರಹಿಸಲು ಸಾಧ್ಯವಿಲ್ಲವೆಂದು ಇದರಿಂದ ತಿಳಿದುಬರುತ್ತದೆ.

ಆದರೆ ಸ್ವರ್ಗದ ಹಕ್ಕುದಾರರಾದ ಸಜ್ಜನರು ವಾರ್ಧಕ್ಯದ ದೌರ್ಬಲ್ಯವೋ, ರೋಗ ರುಜಿನಗಳ ನೋವೋ ಅಥವಾ ಅಂಗವಿಕಲತೆಯ ಮುಜುಗರವನ್ನೋ ಅನುಭವಿಸಲಾರರು. ನರಕವಾಸಿಗಳಾದ ಅಕ್ರಮಿಗಳ ಸ್ಥಿತಿ ಇದಕ್ಕೆ ತೀರಾ ವಿರುದ್ಧವಾಗಿರುವುದು, ಊಹಿಸಲಸಾಧ್ಯವಾದ ದುರಂತಗಳು ಸಂಕಷ್ಟಗಳ ಸರಮಾಲೆಯು ಅವರನ್ನು ಸುತ್ತುವರಿದಿರುತ್ತದೆ.

## 13 ಪರಲೋಕ ವಿಶ್ವಾಸ ಮತ್ತು ಪುನರ್ಜನ್ಮವಾದ

ಇಸ್ಲಾಮ್‌ನ ಪರಲೋಕ ವಿಶ್ವಾಸಕ್ಕೂ, ಹಿಂದೂಗಳ ಪುನರ್ಜನ್ಮವಾದಕ್ಕೂ ನಡುವೆ ವ್ಯತ್ಯಾಸವಿದೆಯೇ? ಇದೆಯೆಂದಾದರೆ ವ್ಯತ್ಯಾಸ ಯಾವುದು? ಪುನರ್ಜನ್ಮ ಸಿದ್ಧಾಂತವನ್ನು ಇಸ್ಲಾಮ್ ಅಂಗೀಕರಿಸುತ್ತದೆಯೇ? ಇಲ್ಲದಿದ್ದರೆ ಯಾಕೆ?

ಮರಣದೊಂದಿಗೆ ಮನುಷ್ಯ ಜೀವನ ಕೊನೆಗೊಳ್ಳುವುದಿಲ್ಲ ಎಂಬ ವಿಷಯದಲ್ಲಿ ಮಾತ್ರ ಪರಲೋಕ ವಿಶ್ವಾಸಕ್ಕೂ ಪುನರ್ಜನ್ಮಕ್ಕೂ ಸಾಮ್ಯತೆಯಿದೆ. ಇಸ್ಲಾಮೀ ವಿಶ್ವಾಸದಂತೆ ಭೂಮಿಯು ಕರ್ಮಭೂಮಿಯಾಗಿದೆ. ವಿಚಾರಣೆ ಮತ್ತು ವಿಧಿಯು ಮರಣದ ಬಳಿಕ ಪರಲೋಕದಲ್ಲಿ ಲಭಿಸುತ್ತದೆ. ಭೂಮಿಯಲ್ಲಿ ಮಾಡಿದ ಕರ್ಮಗಳ ಆಧಾರದಲ್ಲಿ ಪರಲೋಕದಲ್ಲಿ ರಕ್ಷೆ ಹಾಗೂ ಶಿಕ್ಷೆ ದೊರೆಯುತ್ತದೆ. ಪ್ರಪಂಚದ ವ್ಯವಸ್ಥೆ ಮತ್ತು ಇಲ್ಲಿನ ಪರಿಸ್ಥಿತಿಯಲ್ಲಿ, ಪಂಚೇದ್ರಿಯಗಳ ಪರಿಧಿಯೊಳಗೆ ನಿಂತುಕೊಂಡು ಪರಲೋಕ ಹೇಗಿರಬಹುದೆಂದು ಊಹಿಸುವುದು ಸಾಧ್ಯವಲ್ಲ. ಆದರೆ ದೇವನ ಆದೇಶದಂತೆ ಜೀವನ ನಡೆಸುವವರಿಗೆ ಅಲ್ಲಿ ಸರ್ವವಿಧ ಸೌಭಾಗ್ಯಗಳು ಸುಖ ಸೌಕರ್ಯಗಳಿಂದ ತುಂಬಿದ ಸ್ವರ್ಗ ಲಭಿಸುವುದೆಂದು ಇಸ್ಲಾಮ್ ಕಲಿಸುತ್ತದೆ. ದೇವಧಿಕ್ಕಾರಿಗಳಾಗಿ, ಪಾಪಕೃತ್ಯಗಳ ಜೀವನ ಸಾಗಿಸುವವರಿಗೆ ನರಕದ ಮುನ್ನೆಚ್ಚರಿಕೆಯನ್ನು ನೀಡಿದೆ. ಮರಣದ ಬಳಿಕ ಪರಲೋಕದಲ್ಲಿ ರಕ್ಷೆ-ಶಿಕ್ಷೆಗಳು ಅತ್ಯಂತ ನ್ಯಾಯಯುತವಾದ ತೀರ್ಮಾನಗಳಿಂದ ದೊರೆಯುವುದು. ಅದೇ ವೇಳೆ ಪರಲೋಕದ ವಿಚಾರಣೆಗಳು ವಿಧಿ ನ್ಯಾಯಗಳೆಲ್ಲಾ ಲೋಕ ನಿಯಮದಂತೆ ನಡೆಯುವುದೆಂದು ಭಾವಿಸುವುದು ಅಸಾಧ್ಯ. ಆದರೆ ಸ್ವರ್ಗ ಪಡೆಯುವವನಿಗೆ ತನ್ನ ಯಾವ ಸತ್ಕರ್ಮದ ಕಾರಣದಿಂದ ಅದು ಲಭಿಸಿತೆಂದೂ, ಶಿಕ್ಷೆ ಅನುಭವಿಸುವವರಿಗೆ ಶಿಕ್ಷೆ ದೊರೆಯಲು ಕಾರಣವೇನೆಂದೂ ಸ್ಪಷ್ಟವಾಗಿ ತಿಳಿಯುತ್ತದೆ. ಹಾಗಾದರೆ ಮಾತ್ರ ಅದು ನೈಜ ಕರ್ಮಫಲಗಳು ಆಗಲು ಸಾಧ್ಯ.

ಆದರೆ ಪುನರ್ಜನ್ಮ ವಾದದಂತೆ ಮರಣದ ಬಳಿಕದ ಜನನ ಮತ್ತು ಜೀವನ ಇದೇ ಭೂಮಿಯಲ್ಲಾಗಿದೆ. ಧರ್ಮದಂತೆ ಸಜ್ಜನನಾಗಿ ಜೀವಿಸದವನು ಮರಣದ ಬಳಿಕ ನಾಯಿ, ಶೂದ್ರ, ಚಂಡಾಲ ಹೀಗೆ ಏನೇನೋ ಆಗಿ ಪುನರ್ಜನ್ಮ ತಾಳುತ್ತಾನೆ ಎನ್ನುತ್ತದೆ. ಅದೇ ವೇಳೆ ಧರ್ಮನಿಷ್ಠೆಯಿಂದ ಬಾಳಿದವನು ಬ್ರಾಹ್ಮಣನೋ, ಕ್ಷತ್ರಿಯನೋ, ವೈಷ್ಣವನೋ ಆಗಿ ಜನ್ಮ ತಾಳುತ್ತಾನೆಂಬ ನಂಬಿಕೆಯಿದೆ. ಈ ವಿಷಯದಲ್ಲಿ ಕೆಲವು ವಿಚಾರಗಳನ್ನು ವಿವರವಾಗಿ ತಿಳಿಯುವ ಅಗತ್ಯವಿದೆ.

1. ಓರ್ವ ವ್ಯಕ್ತಿಗೆ ಕಾರಣ ಸ್ಪಷ್ಟಪಡಿಸದೆ, ಆರೋಪ ಮನವರಿಕೆ ಮಾಡಿಸದೆ ಶಿಕ್ಷೆಯನ್ನು ಜಾರಿಗೊಳಿಸಿದರೆ ಅದು ಮಹಾ ಅನ್ಯಾಯವಾಗುತ್ತದೆ. ನಾವು ಯಾರಿಗಾದರೂ ಥಳಿಸಿದರೆ, ಜೈಲಿಗೆ ಹಾಕಿದರೆ ಅಥವಾ ಕೊಂದರೆ ಯಾವ ತಪ್ಪಿಗೆ ಶಿಕ್ಷೆಯೆಂದು ಸಂಬಂಧಪಟ್ಟವರಿಗೆ ಮನವರಿಕೆ ಮಾಡಿಸಬೇಕಾದದ್ದು ನ್ಯಾಯದ ಪ್ರಾಥಮಿಕ ಬೇಡಿಕೆಯಾಗಿದೆ. ನಂತರ ವಿಚಾರಣೆ ನಡೆದು ತೀರ್ಪು ಬಂದ ಬಳಿಕವೇ ಶಿಕ್ಷೆ ಜಾರಿಯಾಗುವುದು. ಆದರೆ ಶೂದ್ರರು ಹಾಗೂ ಚಂಡಾಲರೂ ಇಂತಹ ವಿಚಾರಣೆ ಎದುರಿಸಿಲ್ಲ. ಕಳೆದ ಜನ್ಮದಲ್ಲಿ ತಾನು ಮಾಡಿದ ಯಾವ ತಪ್ಪಿಗೆ ತಾನು ಈ ಜನ್ಮದಲ್ಲಿ ಹೀಗಾದೆನೆಂಬ ಅರಿವು ಆಗುವುದಿಲ್ಲ. ಕಳೆದ ಜನ್ಮದ ಪುಣ್ಯದ ಫಲವನ್ನು ಈಗ, ನಾನು ಅನುಭವಿಸುತ್ತೇನೆಂದಾದರೆ ಆ ಪುಣ್ಯಯಾವುದೆಂಬುದು ತಿಳಿಯಬೇಡವೆ? ಅದೇ ರೀತಿ ನಮ್ಮ ಕರ್ಮಫಲಗಳು ನಮ್ಮ ಜೀವನದ ಗತಿಯನ್ನು ನಿರ್ಧರಿಸುತ್ತದೆ ಎಂದಾದರೆ ಅಂತಹ ಕರ್ಮ ಯಾವುದೆಂದು ತಿಳಿದಿರಬೇಕಲ್ಲವೆ? ಬ್ರಾಹ್ಮಣ, ಕ್ಷತ್ರಿಯರಿಗೆ ತಮ್ಮ ಯಾವ ಪುಣ್ಯಫಲ ತಮ್ಮನ್ನು ಹೀಗೆ ತಂದು ನಿಲ್ಲಿಸಿತು ಎಂದು ತಿಳಿದಿಲ್ಲ. ಆದ್ದರಿಂದ ಪುನರ್ಜನ್ಮ ಸಿದ್ಧಾಂತ ಮತ್ತು ಕರ್ಮಫಲ ಸಿದ್ಧಾಂತವನ್ನು, ಅವುಗಳ ಆಧಾರದಲ್ಲಿ ನೀಡಲಾಗುವ ಶಿಕ್ಷೆ ಹಾಗೂ ರಕ್ಷೆಯ ವಿಶ್ವಾಸಕ್ಕೂ ಪರಸ್ಪರ ವಿರುದ್ಧವಾಗಿದೆ.

2. ಪುನರ್ಜನ್ಮ ಸಿದ್ಧಾಂತದಂತೆ ಪಾಪಿಯು ಎರಡನೇ ಜನ್ಮದಲ್ಲಿ ನೀಚನೂ, ಅಧಮನೂ ಆಗಿರುತ್ತಾನೆ. ಅಂತಹವರಿಂದ ನಿಕೃಷ್ಟ ಜೀವನ ಹಾಗು ಕೆಟ್ಟ ಕಾಯಕಗಳೇ ಸಂಭವಿಸುತ್ತದೆ. ಅವರಿಂದ ಒಳಿತನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಆದ್ದರಿಂದ ಅವರ ಮೂರನೇ ಜನ್ಮವು ಇನ್ನೂ ನಿಕೃಷ್ಟವಾಗುವುದು. ನಾಲ್ಕನೇ ಜನ್ಮವು ಇನ್ನಷ್ಟು ಪಾತಾಳಕ್ಕಿಳಿಯಬಹುದು. ಹೀಗೆ ಮುಂದೆ ಮುಂದೆ ಸಾಗಿದಂತೆ ನೀಚರಾಗುತ್ತಲೇ ಸಾಗುತ್ತಾರೆ. ಆದ್ದರಿಂದ ಪಾಪಿಗಳು ಒಂದೊಂದೇ ಜನ್ಮದಿಂದ ಪುನಃ ಹೆಚ್ಚೆಚ್ಚು ಪಾಪಿಗಳಾಗುತ್ತಾರೆಯೇ ಹೊರತು ಉನ್ನತಿಗೇರಲು ಸಾಧ್ಯವಿಲ್ಲ. ಮಾತ್ರವಲ್ಲ ಪಾಪಿಯಾದ ಮನುಷ್ಯ ಮರುಜನ್ಮದಲ್ಲಿ ಮೃಗವಾಗುವ ಸಾಧ್ಯತೆಯಿದೆ. ಆದರೆ ನಂತರ ಆ ಮೃಗಕ್ಕೆ ಮನುಷ್ಯನಾಗಲು ಸಾಧ್ಯವಿದೆಯೇ? ಹೊಸದಾಗಿ ಜನಿಸುವ ಮನುಷ್ಯರು ಕಳೆದ ಜನ್ಮದಲ್ಲಿ ಏನಾಗಿದ್ದರು? ಯಾವ ಪುಣ್ಯದ ಕಾರಣದಿಂದ ಅವರು ಮನುಷ್ಯರಾಗಿ ಜನಿಸಿದರು? ಇಂತಹ ಹಲವಾರು ಪ್ರಶ್ನೆಗಳಿಗೆ ಪುನರ್ಜನ್ಮ ಸಿದ್ಧಾಂತದಲ್ಲಿ ಉತ್ತರವಿಲ್ಲ.

3. ಹಿಂದೂ ಧರ್ಮ ಗ್ರಂಥಗಳಲ್ಲಿ ಪುನರ್ಜನ್ಮ ಸಿದ್ಧಾಂತವಿಲ್ಲ. ಉಪನಿಷತ್ತುಗಳಲ್ಲಿ ಅದರ ಕುರಿತು ವಿಮರ್ಶೆಗಳು, ವಿವರಣೆಯೂ ಇದೆ. ಅದನ್ನು ಡಾ। ರಾಧಾಕೃಷ್ಣನ್ ಹೀಗೆ ಸ್ಪಷ್ಟಪಡಿಸುತ್ತಾರೆ, ''ಬ್ರಾಹ್ಮಣ್ಯವು ಇನ್ನೊಂದು ಲೋಕದಲ್ಲಿ ಜನನ ಮರಣ ಸಂಭವಿಸುತ್ತದೆ ಎಂಬ ನಿಲುವು ಸ್ವೀಕರಿಸುತ್ತದೆ. ಉಪನಿಷತ್ತುಗಳಲ್ಲಿ ಅದು ಈ ಭೂಮಿಯಲ್ಲೇ ಪುರ್ನಜನ್ಮವೆಂಬ ವಿಶ್ವಾಸವಾಗಿ ಬದಲಾಯಿತು. (ಭಾರತೀಯ ದರ್ಶನಂ ಭಾಗ ಒಂದು ಪುಟ 224 ಮಾತೃಭೂಮಿ ಪಬ್ಲಿಶಿಂಗ್ ಕಂಪೆನಿ ಕಲ್ಲಿಕೋಟೆ 1995) ಆದ್ದರಿಂದ ಪುನರ್ಜನ್ಮ ಸಿದ್ಧಾಂತವು ಧರ್ಮಗ್ರಂಥಗಳದ್ದಲ್ಲವೆಂದು ವ್ಯಕ್ತವಾಗುತ್ತದೆ.

4. ಉಪನಿಷತ್ತುಗಳಲ್ಲಿ ಮಾತ್ರ ಪುನರ್ಜನ್ಮದ ವಿಷಯವಿದೆ. ಜಾತಿವ್ಯವಸ್ಥೆಯನ್ನು ಸಮರ್ಥಿಸಲು ಅದರ ಪಕ್ಷಪಾತ ಹಾಗೂ ಅಸ್ತಿತ್ವವನ್ನು ಉಳಿಸಿಕೊಳ್ಳಲು ಈ ಸಿದ್ಧಾಂತವನ್ನು ಆವಿಷ್ಕರಿಸಲಾಗಿದೆಯೆಂದು ಸುಲಭದಲ್ಲಿ ಗ್ರಹಿಸಬಹುದು. ಪುನರ್ಜನ್ಮದ ಕುರಿತು ಚಾಂದೋಗ್ಯೋಪನಿಷತ್ತುಗಳಲ್ಲಿ ಹೀಗೆ ಕಾಣಬಹುದು: 'ತದ್'ಯ ಇಹ ರಮಣೀಯ ಚರಣಾ ಅಬ್ಯಾಶೋ ಹ ಯತ್ತೇ ರಮನೀಯಾಂ ಯೊನಿಮಾ ಪದ್ಯೇಶನ್, ಬ್ರಾಹ್ಮಣ ಯೋನಿಂ ವಾ ಕ್ಷತ್ರಿಯ ಯೋನಿಂ ವಾ ವೈಶ್ಯ ಯೋನಿಂ ವಾ ಅದ  ಯ ಇಹ ಕಪೂಯಿಚರಣಾ ಅಭ್ಯಾಶೋ ಹಯತ್ತೇ ಕಪೂಯಾಂ ಯೋನಿಮಾ ಪದ್ಯೇಶಣ್, ಶ್ವಯೋನಿಂ ವಾಸು ಕರಯೋನಿಂ ಚಂಡಾಲಯಯೋನಿಂ, ವಾ' (ಅಧ್ಯಾಯ 5 ಕಾಂಡ 10 ಶ್ಲೋಕ 7)

(ಅವರಲ್ಲಿ ಸತ್ಕರ್ಮವೆಸಗುವವರು ಅತ್ಯಂತ ಶೀಘ್ರದಲ್ಲಿ ಉನ್ನತ ಸ್ಥಳಗಳಿಗೆ ತಲುಪುತ್ತಾರೆ. ಬ್ರಾಹ್ಮಣ, ಕ್ಷತ್ರಿಯ ಅಥವಾ ವೈಶ್ಯರಾಗಿ ಜನ್ಮತಾಳುತ್ತಾರೆ. ಅದೇ ರೀತಿ ಅಶುಭರು ಅಶುಭರಾಗುತ್ತಾರೆ. ನಾಯಿ, ಹಂದಿ, ಚಂಡಾಲರಾಗಿ ಜನಿಸುತ್ತಾರೆ.) ಇದು ಉನ್ನತ ಜಾತಿಯವರಲ್ಲಿ ತಾವು ಮೇಲ್ಜಾತಿಯವರಾಗಲು ಹಿಂದಿನ ಕಾಲದಲ್ಲಿ ನಾವು ಮಾಡಿದ ಪುಣ್ಯದ ಫಲವೇ ಇಂತಹ ವಿಶೇಷ ಹಕ್ಕನ್ನು ಪಡೆಯಲು ಅರ್ಹಗೊಳಿಸಿತು ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತದೆ. ಅದೇ ವೇಳೆ ಕೆಳ ಜಾತಿಯವರು ತಮ್ಮ ನಿಕೃಷ್ಟತೆಗೆ ಅವರ ಕರ್ಮಫಲಗಳೇ ಕಾರಣವೆಂಬ ಭಾವನೆ ಮೂಡಿಸುತ್ತಾರೆ. ಇದು ಅವರನ್ನು ನಾಯಿ ಹಂದಿಗಳಂತೆ ನಿಕೃಷ್ಟವಾಗಿ ಕಾಣಲು ಕಾರಣವಾಯಿತು. ಹೀಗೆ ಜಾತಿ ವ್ಯವಸ್ಥೆಯನ್ನು ಬಿಗಿಗೊಳಿಸಿ, ಸಮರ್ಥಿಸುವ ಕೆಲಸವನ್ನು ಪುನರ್ಜನ್ಮ ಸಿದ್ಧಾಂತವು ಮಾಡುತ್ತದೆ.

5. ಮರಣದ ಬಳಿಕ ಮನುಷ್ಯ ಆತ್ಮಗಳು ಪ್ರಾಣಿಗಳ ಶರೀರದಲ್ಲಿ ಉದಯವಾಗುತ್ತದೆಂಬ ಪುರಾತನ ಗೋತ್ರಗಳ ನಂಬಿಕೆಯಿಂದ ಪುನರ್ಜನ್ಮ ಸಿದ್ಧಾಂತವು ರೂಪತಾಳಿತು. ಡಾ| ರಾಧಾಕೃಷ್ಣನ್ ಬರೆಯುತ್ತಾರೆ: ಕರ್ಮಫಲ ಹಾಗೂ ಪುನರ್ಜನ್ಮ ಸಿದ್ಧಾಂತದ ರೂಪ ಕಲ್ಪನೆಯು ಆರ್ಯರಿಂದ ಮೂಡಿದೆಯೆಂದು ಧೈರ್ಯವಾಗಿ ಹೇಳಬಹುದು. ಮರಣಾನಂತರ ಆತ್ಮಗಳು ಮೃಗಶರೀರಗಳನ್ನು ಸೇರಿಕೊಳ್ಳುತ್ತದೆಯೆಂದು ವಿಶ್ವಾಸವಿರಿಸುವ ಆದಿಗೋತ್ರಗಳೇ ಇದಕ್ಕೆ ಪ್ರೇರಣೆ ಎಂಬ ಸಂಗತಿಯನ್ನು ತಳ್ಳಿಹಾಕುವಂತಿಲ್ಲ, (ಭಾರತೀಯ ದರ್ಶನಂ ಭಾಗ 1 ಪುಟ 113)

6. ಸೆಮೆಟಿಕ್ ಧರ್ಮಗಳಂತೆ ಹಿಂದೂ ಧರ್ಮಗ್ರಂಥಗಳು ಪರಲೋಕದ ಕುರಿತು ಹೇಳುತ್ತದೆ. ಋಗ್ವೇದ, ಸಾಮವೇದ ಮತ್ತು ಅಥರ್ವ ವೇದದಲ್ಲಿ ಪರಲೋಕಕ್ಕೆ ಸಂಬಂಧಿಸಿದ ವಿಷಯಗಳನ್ನು ಕಾಣಬಹುದು. ಉದಾ:

**''ರಾಯೇ ಅಗ್ನೇ ಮಹೆ ತ್ವಾ ದಾನಾಯ ಸಮಿಧೀಮಹಿ**
**ಈಡಿಶ್ವ ಹಿ ಮಹೇ ವೃಶನ್ ದ್ರಾವಾ ಹೊತ್ರಯೋ ಪ್ರಥಿವೀ''**
**(ಸಾಮವೇದ, ಆಗ್ನೇಯ ಕಾಂಡ 1,10,3)**

(ಎಲ್ಲಾ ಬಯಕೆಗಳನ್ನು ಪೂರ್ಣಗೊಳಿಸುವ ಭಗವಾನ್, ನಿನ್ನಿಂದ ಮಹಾದಾನ ದೊರೆಯಲು ನಿನ್ನನ್ನು ನಾವು ಸಂತೋಷಪಡಿಸುತ್ತೇವೆ. ಜ್ಞಾನಕ್ಕಾಗಿ ಹಾಗೂ ಭೂಮಿಯಲ್ಲಿ ಶಾಂತಿ ಸಮಾಧಾನಕ್ಕಾಗಿ ಪರಲೋಕದ ಶಾಂತಿಗಾಗಿ ನಾವು ನಿನ್ನನ್ನು ಸ್ತುತಿಸುತ್ತೇವೆ)

ಅಥರ್ವವೇದ ಪರಲೋಕದ ಕುರಿತು ಚಿಂತಿಸಿ ಸತ್ಕರ್ಮವನ್ನು ಎಸಗಲು ದಂಪತಿಗಳೊಡನೆ ವಿನಂತಿಸುತ್ತದೆ.

**ಅನ್ವರಜೀಥಾ ಮನು ಸಂರಭೇದಾಮೆದಂ ಲೋಕಂ ಶ್ರದ್ಧದಾನಾ: ಸಚಂತೀ (6: 12-13)**

ವೇದಗ್ರಂಥಗಳಂತೆಯೇ ಉಪನಿಷತ್ತುಗಳಲ್ಲೂ, ಪುರಾಣಗಳಲ್ಲೂ ಪರಲೋಕದ ಹಾಗೂ ಸ್ವರ್ಗ ನರಕದ ಕುರಿತು ಧಾರಾಳ ಪ್ರಸ್ತಾಪಗಳಿವೆ.

ಈಶಾವಾಸ್ಯೋಪನಿಷತ್ತಿನಲ್ಲಿ ಮರಣಾನಂತರದ ನರಕದ ಕುರಿತು ಹೀಗಿದೆ: **ಅಸುರ್ಯ ನಾಮ ತೇ ಲೋಕಃ ಅಂಧೇನ ಪಮಸಾಮೃತಾಃ ತಾಂಸ್ತೆ ಪ್ರೆತ್ಯಾಬಿ ಗಚ್ಛಂದಿ ಯೆ ಕೇ ಚಾತ್ ಮಹನೋ ಜನಾಃ (ಮಂತ್ರ :3)**

(ಸೂರ್ಯನಿಲ್ಲದ ಆ ಲೋಕಗಳು ಅಂಧಕಾರಮಯವಾಗಿದೆ ಆತ್ಮಘಾತುಕರು ಅಥವಾ ಈಶ್ವರ ಸ್ಮರಣೆಯಿಲ್ಲದವರು ಪುನಃ ದು:ಖಿತರಾಗಿ ಆ ಲೋಕಕ್ಕೆ ತಲುಪುತ್ತಾರೆ.)

**ಸ್ವರ್ಗದ ಕುರಿತು ಕಠೋಪನಿಷತ್ತು ಹೇಳುತ್ತದೆ.**

**ಸ್ವರ್ಗ ಲೋಕೆ ನ ಭಯಂ ಕಿಂಜನಾಸ್ತಿ**

**ನತತ್ರ ತ್ವಂ ನಜರಯಾ ಬಿಬೇತಿ**

**ಉಬೆ ತೀತ್ವಶ ನಾಯಾ ಪಿಪಾಸೆ**

**ಶೋಕಾತಿಗೋ ಮೊದತೇ ಸ್ವರ್ಗಲೋಕೆ (1:1:12)**

ಸ್ವರ್ಗ ಲೋಕದಲ್ಲಿ ಸ್ವಲ್ಪವೂ ಭಯವಿಲ್ಲ, ಅಲ್ಲಿ ಯಾರಿಗೂ ಮರಣವಿಲ್ಲ, ಅಲ್ಲಿ ದಾಹ, ಹಸಿವು,ದುಃಖಗಳಿಂದ ಮುಕ್ತರಾಗಿ ಎಲ್ಲರೂ ಆನಂದ ಭರಿತರಾಗಿರುತ್ತಾರೆ.

**ಮನುಸ್ಮೃತಿಯಲ್ಲಿ ಹೀಗಿದೆ:**

**ನಾಮುತ್ರ ಹಿ ಸಹಾಯಾರ್ಥಂ ಪಿತಾ ಮಾತಾ ಚ ತಿಷ್ಟತ ನ ಪುತ್ರದಾರಾ ನ ಜ್ಞಾತಿರ್ ಧರ್ಮಸ್ತಿಷ್ಟತಿ ಕೇವಲ (4:239)** ಪರಲೋಕದಲ್ಲಿ ನಮ್ಮ ಸಹಾಯಕ್ಕೆ ತಂದೆ-ತಾಯಿ ಸಿಗುವುದಿಲ್ಲ, ಪತ್ನಿ-ಮಕ್ಕಳು, ಸಂಬಂಧಿಕರಿಂದ ಅಲ್ಲಿ ಯಾವುದೇ ಪ್ರಯೋಜನವಿಲ್ಲ, ಸಹಾಯ ಮಾಡಲು ಧರ್ಮ ಮಾತ್ರ ಉಳಿದಿರುತ್ತದೆ.

**ಏಕಃ ಪ್ರಜಾಯತೇ ಜಂತುರೇಕ ಏವ ಪ್ರಲೀಯತೆ ಏಕೋ(ಅ)ನುಬುಂಗ್ತೇ ಸುಕೃತಮೇಕ ಏವ ಚ ದುಷ್ಕೃತ್ಯಂ (4:240)**

(ಜೀವಿಗಳ ಹುಟ್ಟು ಮತ್ತು ಸಾವು ಒಂಟಿಯಾಗಿ ನಡೆಯುತ್ತದೆ. ಅದೇ ರೀತಿ ಸ್ವರ್ಗದಲ್ಲಿ ಸಜ್ಜನರು ನರಕದಲ್ಲಿ ದುರ್ಜನರು ಕೂಡಾ ಒಂಟಿಯಾಗಿಯೇ ಅನುಭವಿಸುತ್ತಾರೆ)

ಭಗವದ್ಗೀತೆಯೂ ನರಕ ಸ್ವರ್ಗದ ವಿಷಯಕ್ಕೆ ಹೆಚ್ಚು ಒತ್ತು ಕೊಟ್ಟಿದೆ. ಉದಾಹರಣೆಗೆ ಕೆಲವನ್ನು ಮಾತ್ರ ಉಲ್ಲೇಖಿಸುತ್ತೇನೆ.

**ಉತ್ಪನ್ನ ಕುಲಧರ್ಮಾಣಾಂ ಜನಾರ್ದನ।**

**ನರಕೇನಿಯತಂ ವಾಸೊ ಭವತೀತ್ಯನುಶುಶ್ರುಮ**

**(ಪ್ರಥಮಧ್ಯಾಯಂ-ಶ್ಲೋಕ 44)**

ಎಲೈ ಜನಾರ್ದನ! ಕುಲಧರ್ಮ ನಷ್ಟವಾಗಿ ಹೋಗಿರುವಂತಹ ಮನುಷ್ಯರು ಅನಿಶ್ಚಿತ ಕಾಲದವರೆಗೆ ನರಕವಾಸ ಮಾಡಬೇಕಾಗುತ್ತದೆ ಎಂಬುದಾಗಿ ನಾವು ಕೇಳುತ್ತಾ ಬಂದಿದ್ದೇವೆ.

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮನ ಕರಿಷ್ಯಸಿ**

**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾಪಾಪಮವಾತ್ಸ್ಯಸಿ (ಅಧ್ಯಾಯ-2 ಶ್ಲೋಕ 133)**

(ಒಂದು ವೇಳೆ ನೀನು ಈ ಧರ್ಮಯುಕ್ತವಾದ ಯುದ್ಧವನ್ನು ಮಾಡದೇ ಹೋದರೆ ಸ್ವಧರ್ಮ ಮತ್ತು ಕೀರ್ತಿ ಎರಡನ್ನೂ ಕಳೆದುಕೊಂಡು ಪಾಪವನ್ನು ಪಡೆಯುವೆ)

**ಹತೋವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್**

**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ (ದ್ವಿತೀಯಾಧ್ಯಾಯ ಶ್ಲೋಕ 37)**

(ಎಲಾ ಕುಂತೀ ಪುತ್ರನೆ, ನೀನು ಯುದ್ಧದಲ್ಲಿ ಕೊಲ್ಲಲ್ಪಟ್ಟರೆ ಸ್ವರ್ಗವನ್ನು ಪಡೆಯುವೆ ಅಥವಾ ಸಂಗ್ರಾಮದಲ್ಲಿ ವಿಜಯಿಯಾದರೆ ಭೂಲೋಕದ ರಾಜ್ಯಸುಖವನ್ನು ಪಡೆಯುವೆ. ಈ ಕಾರಣಗಳಿಂದ ಯುದ್ಧ ಮಾಡುವೆನೆಂದು ನಿಶ್ಚಯಿಸಿಕೊಂಡು ಸಿದ್ಧನಾಗಿನಿಲ್ಲು)

ವೇದಕಾಲದಿಂದಲೇ ಪರಲೋಕ ವಿಶ್ವಾಸವಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ಡಾ। ರಾಧಾಕೃಷ್ಣನ್ ಬರೆಯುತ್ತಾರೆ: 'ಸ್ವರ್ಗ-ನರಕದ ಕುರಿತು ಕೆಲವು ಅವ್ಯಕ್ತಭಾವನೆಗಳಿಂದ ಚಿಂತನಾಶಕ್ತಿಯಿರುವ ಮನಸ್ಸುಗಳಿಗೆ ನುಣಿಚಿಕೊಳ್ಳಲು ಸಾಧ್ಯವಾಗಿರಲಿಲ್ಲ, ಪುನರ್ಜನ್ಮ ಸಿದ್ಧಾಂತವು ಅಂದು ಬಹಳ ದುರ್ಬಲವಾಗಿತ್ತು. ಮರಣದೊಂದಿಗೆ ಎಲ್ಲವೂ ಕೊನೆಗೊಳ್ಳುವುದಿಲ್ಲ ವೆಂಬ ನಂಬಿಕೆ ವೈದಿಕರಿಗೆ ಇತ್ತು. (ಭಾರತೀಯ ದರ್ಶನ, ಭಾಗ 1, ಪುಟ 91)

ರಾಹುಲ್ ಸಾಂಕೃತ್ಯಾಯನ್ ಬರೆಯುತ್ತಾರೆ: ವೇದಕಾಲದ ಋಷಿ ಮುನಿಗಳು ಈ ಲೋಕಕ್ಕಿಂತ ಭಿನ್ನವಾದ ಇನ್ನೊಂದು ಲೋಕವಿದೆಯೆಂದು ವಿಶ್ವಾಸವಿರಿಸಿದ್ದರು. ನಮ್ಮ ಮರಣಾನಂತರ ಆ ಲೋಕಕ್ಕೆ ನಮ್ಮ ಸತ್ಕರ್ಮಗಳು ಹೋಗುತ್ತದೆ. ಅಲ್ಲಿ ಅವರು ಆನಂದದಿಂದ ಬದುಕುತ್ತಾರೆ. ಕೆಳಮಟ್ಟದಲ್ಲಿರುವ ಪಾತಾಳವು ಅಂಧಕಾರಮಯವಾದ ನರಕವಾಗಿದೆ. ದುಷ್ಕರ್ಮಿಗಳು ಅಲ್ಲಿಗೆ ತಲುಪುತ್ತಾರೆ (ವಿಶ್ವದರ್ಶನಗಳು, ಪುಟ 552) ಆದ್ದರಿಂದ ಪುರ್ನಜನ್ಮ ಸಿದ್ಧಾಂತವು ಇಸ್ಲಾಮೇತರವೆಂಬಂತೆ ಅವೈದಿಕವೂ ಆಗಿದೆ. ಅದು ಜಾತಿವ್ಯವಸ್ಥೆಯನ್ನು ಸಂರಕ್ಷಿಸಲು ರಚಿಸಲಾಗಿದೆ. ಪರಲೋಕ ಹಾಗೂ ಸ್ವರ್ಗ-ನರಕಕ್ಕೆ ಸಂಬಂಧಿಸಿದ ವಿಶ್ವಾಸವು ಇಸ್ಲಾಮ್‌ನಂತೆ ಹಿಂದೂ ಧರ್ಮದ್ದೂ ಹೌದು. ವೇದಗ್ರಂಥಗಳೂ ಅದನ್ನೇ ಹೇಳುತ್ತದೆ.

(ಹೆಚ್ಚಿನ ವಿವರಣೆಗಾಗಿ ಡಯಲಾಗ್ ಸೆಂಟರ್ ಪ್ರಕಟಿಸಿದ ಪುನರ್ಜನ್ಮ ಸಿದ್ಧಾಂತ ಪರಲೋಕ ವಿಶ್ವಾಸ ಎಂಬ ಕೃತಿನ್ನು ನೋಡಿರಿ.)

## 14 ಸ್ವರ್ಗ-ನರಕ ವಿಶ್ವಾಸ ಮತ್ತು ವಂಚಕ ವ್ಯವಸ್ಥೆ

ಧರ್ಮಗಳು ದರಿದ್ರ ಹಾಗು ಶೋಷಿತ ವರ್ಗಗಳಿಗೆ ಸ್ವರ್ಗ ಲಭಿಸುತ್ತದೆಂಬ ಆಶೆ ಹುಟ್ಟಿಸಿ, ಅವರ ಹೋರಾಟದ ಆವೇಶವನ್ನು ತಣಿಸುವಂತಹ ಕೆಲಸ ಮಾಡುತ್ತಿದೆಯಲ್ಲವೇ? ಸ್ವರ್ಗ-ನರಕದ ಕುರಿತು ಮಾತುಗಳಲ್ಲಿ ಶ್ರೀಮಂತ ವರ್ಗಗಳ ಹಿತಾಸಕ್ತಿಯನ್ನು ಕಾಪಾಡುವ ಉದ್ದೇಶವಿದೆಯಲ್ಲವೇ?

ಧರ್ಮದ ಕುರಿತು ವ್ಯಾಪಕವಾಗಿರುವ ತಪ್ಪು ಕಲ್ಪನೆಗಳು ಇಂತಹ ಸಂಶಯಗಳಿಗೆ ಮೂಲಕಾರಣ. ಮರ್ದಿತರ -ಶೋಷಿತರ ಕಾವಲುಗಾರನಿಂದ ಧರ್ಮಗಳ ಕುರಿತು ಇಂತಹ ಗಂಭೀರ ಆರೋಪಗಳು ಬೆಳೆದು ಬರಲು ವಿಶ್ವಾಸಿಗಳು ಹಾಗೂ ಅಲ್ಲದವರೂ ಸಮಾನ ಕಾರಣಕರ್ತರಾಗಿದ್ದಾರೆ. ಸ್ವರ್ಗ-ನರಕ ವಿಶ್ವಾಸವು ಎಲ್ಲಾ ರೀತಿಯ ಶೋಷಣೆ ವಂಚನೆಗಳನ್ನು ಕೊನೆಗೊಳಿಸಿ, ಸಾಮಾಜಿಕ ಸಮಾನತೆ, ನ್ಯಾಯಯುತ ಆರ್ಥಿಕತೆಯನ್ನು ಸ್ಥಾಪಿಸುತ್ತದೆ. ಪವಿತ್ರ ಕುರ್‌ಆನಿನ ಆರ್ಥಿಕ ದೃಷ್ಟಿಕೋನವನ್ನು ಗಮನಿಸುವ ಎಲ್ಲರಿಗೂ ಇದು ಸ್ಪಷ್ಟವಾಗುತ್ತದೆ.

1.ಇಸ್ಲಾಮೀ ದುಷ್ಟಿಕೋನದಂತೆ ಹಣವು ದೇವನದ್ದಾಗಿದೆ. ಮನುಷ್ಯರಲ್ಲಿ ಯಾರಿಗೂ ಅದರ ಮೇಲೆ ಸಂಪೂರ್ಣ ಅಧಿಕಾರವಿಲ್ಲ. ಅದನ್ನು ಖರ್ಚು ಮಾಡುವ ಅವಕಾಶ ಮಾತ್ರವಿದೆ. ಅದು ಕೂಡ ಅನಿಯಂತ್ರಿತವಾಗಿರದೆ ದೇವನಿಯಮಗಳಿಗೆ ಬದ್ಧವಾಗಿರಬೇಕು. ಶ್ರೀಮಂತರ ಸೊತ್ತಿನಲ್ಲಿ ದರಿದ್ರರಿಗೂ, ಅನಾಥರಿಗೂ ಹಕ್ಕಿದೆ ಎಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ. ಅದನ್ನು ನಿರಾಕರಿಸಿದರೆ ಅದು ಗಂಭೀರವಾದ ಧರ್ಮವಿರೋಧಿ ಕಾರ್ಯವೆಂದು ಇಸ್ಲಾಮ್ ಕಲಿಸುತ್ತದೆ. ನರಕಶಿಕ್ಷೆಗೆ ಕಾರಣವಾಗುವ ಕೆಡುಕುಗಳನ್ನು ಎರಡು ವಿಧಗಳಾಗಿ ವಿಂಗಡಿಸಿದೆ. ಅದರಲ್ಲಿ ಒಂದು ದರಿದ್ರರಿಗೆ ಹಾಗೂ ಅನಾಥರಿಗೆ ಆಹಾರ ನೀಡಲು ಪ್ರೇರೆಪಿಸದವನು ಎಂದು ಇಸ್ಲಾಮ್ ಹೇಳುತ್ತದೆ.

ಅಲ್ಲಾಹನು ಹೇಳುತ್ತಾನೆ:

**ಯಾರ ಕರ್ಮಪತ್ರವನ್ನು ಅವನ ಎಡಗೈಯಲ್ಲಿ ಕೊಡಲಾಗುವುದೋ ಅವನು ಹೇಳುವನು 'ಅಯ್ಯೋ' ನನ್ನ ಕರ್ಮಪತ್ರವನ್ನು ನನಗೆ ಕೊಡದೆ ಇರುತ್ತಿದ್ದರೆ! ಮತ್ತು ನನ್ನ ಕರ್ಮ ವೃತ್ತಾಂತವೇನೆಂದು ನನಗೆ ತಿಳಿಯದೆ ಇರುತ್ತಿದ್ದರೆ! ಅಯ್ಯೋ (ಭೂಲೋಕದಲ್ಲಿ ಬಂದಿದ್ದ) ನನ್ನ ಈ ಮರಣವೇ ನಿರ್ಣಾಯಕವಾಗಿರುತ್ತಿದ್ದರೆ! ನನ್ನ ಸಂಪತ್ತು ಇಂದು ನನಗೇನೂ ಪ್ರಯೋಜನ ಕೊಡಲಿಲ್ಲ. ನನ್ನ ಅಂಹಕಾರವೆಲ್ಲವೂ ಕೊನೆಗೊಂಡಿತು. (ಆಗ ಹೀಗೆ ಅಪ್ಪಣೆಯಾಗುವುದು**

ಇವನನ್ನು ಹಿಡಿಯಿರಿ ಮತ್ತು ಇವನಿಗೆ ಕಂಠ ಕಡಗವನ್ನು ಹಾಕಿರಿ, ಅನಂತರ ಇವನನ್ನು ನರಕದೊಳಕ್ಕೆ ತಳ್ಳಿಬಿಡಿರಿ. ಆ ಬಳಿಕ ಅವನನ್ನು ಎಪ್ಪತ್ತು ಮೊಳ ಉದ್ದದ ಸಂಕೋಲೆಯಿಂದ ಬಿಗಿಯಿರಿ. ಇವನು ಮಹಿಮಾವಂತನಾದ ಅಲ್ಲಾಹನ ಮೇಲೆ ವಿಶ್ವಾಸವಿರಿಸುತ್ತಿರಲಿಲ್ಲ, ಮತ್ತು ದರಿದ್ರರಿಗೆ ಊಟ ಕೊಡಲು ಪ್ರೇರೆಪಿಸುತ್ತಲೂ ಇರಲಿಲ್ಲ, ಆದ್ದರಿಂದ ಇಲ್ಲಿ ಅವನಿಗೆ ಅನುಕಂಪ ತೋರುವವರಾರೂ ಇಲ್ಲ, ಮತ್ತು ಗಾಯದ ಕೀವಿನ ಹೊರತು ಬೇರೆ ಯಾವ ಆಹಾರವೂ ಇಲ್ಲ, ಇದನ್ನು ಪಾಪಿಗಳ ಹೊರತು ಇನ್ನಾರೂ ತಿನ್ನುವುದಿಲ್ಲ. (ಪವಿತ್ರ ಕುರ್‌ಆನ್ 69:25-37)

ನರಕವಾಸಿಗಳು ತಮ್ಮ ತಪ್ಪನ್ನು ಹೇಳುವಾಗಲೂ ತಮ್ಮ ದುಃಸ್ಥಿತಿಗೆ ಬಡವರಿಗೆ ಆಹಾರ ನೀಡದ್ದು ಕಾರಣವೆಂದು ಹೇಳುತ್ತಾರೆ.

ಪ್ರತಿಯೊಬ್ಬನೂ ತನ್ನ ದುಡಿಮೆಯ ಬದಲಿಗೆ ಅಡವಿಡಲ್ಪಟ್ಟಿದ್ದಾನೆ-ಬಲಗಡೆಯವರ ಹೊರತು. ಅವರು ಸ್ವರ್ಗದಲ್ಲಿರುವರು. ಅವರು ಅಪರಾಧಿಗಳೊಡನೆ ಹೀಗೆ ಹೇಳುವರು: ನಿಮ್ಮನ್ನು ನರಕಕ್ಕೆ ಒಯ್ದುದು ಯಾವುದು? ಅವರು ಹೇಳುವರು; ನಾವು ನಮಾಝ್ ಮಾಡುವವರಾಗಿರಲಿಲ್ಲ, ಮತ್ತು ದರಿದ್ರರಿಗೆ ಉಣಿಸುತ್ತಿರಲಿಲ್ಲ, ಮತ್ತು ಸತ್ಯದ ವಿರುದ್ಧ ಮಾತುಗಳನ್ನು ಸೃಷ್ಟಿಸುವವರ ಜೊತೆ ಸೇರಿ ನಾವೂ ಮಾತುಗಳನ್ನು ಸೃಷ್ಟಿಸುತ್ತಿದ್ದೆವು ಮತ್ತು ನಾವು ಪ್ರತಿಫಲದ ದಿನವನ್ನು ಸುಳ್ಳೆಂದು ಹೇಳುತ್ತಿದ್ದೆವು. ಕೊನೆಗೆ ಆ ಖಚಿತ ದಿನವು ನಮಗೆ ಎದುರಾಗಿಯೇ ಬಿಟ್ಟಿತು (ಪವಿತ್ರ ಕುರ್‌ಆನ್ 74:38-47)

ಹಾಗಾದರೆ ಈಗ ನೀವೇ ಹೇಳಿ. ಬಡವರು ದರಿದ್ರರಿಗೆ ಸ್ವರ್ಗ-ನರಕವು ಒಳಿತನ್ನು ಮಾಡುತ್ತದೋ ಅಥವಾ ಕೆಟ್ಟದ್ದನ್ನು ಮಾಡುತ್ತದೋ ಮತ್ತು ಆರ್ಥಿಕ ಅಸಮಾನತೆಯನ್ನು ಹೋಗಲಾಡಿಸುವುದೋ ಅಥವಾ ಉಳಿಸುತ್ತದೆಯೇ? ಕುರ್‌ಆನ್ ಪುನಃ ಹೇಳುತ್ತದೆ: 'ಶ್ರೀಮಂತರ ಸೊತ್ತುಗಳಲ್ಲಿ ಬೇಡುವವರಿಗೂ ವಂಚಿತರಿಗೂ ಹಕ್ಕಿತ್ತು.' (ಪವಿತ್ರ ಕುರ್‌ಆನ್ 51: 19)

''ಸಂಬಂಧಿಕನಿಗೆ ಅವನ ಹಕ್ಕನ್ನೂ, ದರಿದ್ರನಿಗೂ ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ.'' (ಪವಿತ್ರ ಕುರ್‌ಆನ್ 17:26)

''ನೀವು ಕಂಡಿರಾ ಪರಲೋಕದ ಕರ್ಮಫಲಗಳನ್ನೂ ನಿರಾಕರಿಸುವವನನ್ನು? ಅವನೇ ತಾನೆ, ಅನಾಥನನ್ನು ದೂರ ದಬ್ಬುವವನು ಮತ್ತು ದರಿದ್ರನಿಗೆ ಊಟ ಕೊಡಲು ಪ್ರೇರೇಪಿಸದವನು.'' ( ಪವಿತ್ರ ಕುರ್‌ಆನ್107:1-3)

ಈ ವಚನಗಳಲ್ಲಿ ನಂಬಿಕೆಯಿರಿಸುವವರು ಖಂಡಿತವಾಗಿಯೂ ಅನಾಥರನ್ನು ಕಡೆಗಣಿಸುವ, ದರಿದ್ರರಿಗೆ ಅವರ ಹಕ್ಕನ್ನು ನಿಷೇಧಿಸುವ ಕೆಲಸ ಮಾಡಲಾರರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ ತಾನೇ?

2.ಸಂಪತ್ತನ್ನು ಕೂಡಿಡುವವರಿಗೆ ಮರಣಾನಂತರ ಕಠಿಣ ಶಿಕ್ಷೆ ನೀಡಲಾಗುತ್ತದೆಂದು ಎಚ್ಚರಿಸುವ ಕುರ್‌ಆನ್, ಸಂಪತ್ತು ಶ್ರೀಮಂತ ವರ್ಗಗಳ ನಡುವೆ ಮಾತ್ರ ಸುತ್ತಾಡುವ ಪರಿಸ್ಥಿತಿ ಉಂಟಾಗಬಾರದೆಂದೂ ಹೇಳುತ್ತದೆ. ಅಲ್ಲದೆ ಅತಿಯಾದ ಹಣದ ವ್ಯಾಮೋಹವನ್ನು ತೀವ್ರವಾಗಿ ವಿರೋಧಿಸಿದೆ.

''ಅವನು ಧನಕನಕಗಳ ಅತಿಯಾದ ಮೋಹದಲ್ಲಿ ಸಿಲುಕಿಕೊಂಡಿದ್ದಾನೆ.''

(ಪವಿತ್ರ ಕುರ್‌ಆನ್ 100:8)

''ಖಂಡಿತ ಅಲ್ಲ, ವಾಸ್ತವದಲ್ಲಿ ನೀವು ಅನಾಥರನ್ನು ಗೌರವದಿಂದ ಕಾಣುವುದಿಲ್ಲ, ಬಡವನಿಗೆ ಉಣಬಡಿಸುವಂತೆ ಪರಸ್ಪರರನ್ನು ಪ್ರೇರೇಪಿಸುವುದಿಲ್ಲ, ವಾರೀಸು ಸೊತ್ತನ್ನೆಲ್ಲಾ ಕಬಳಿಸಿಬಿಡುತ್ತೀರಿ ಮತ್ತು ಸಂಪತ್ತನ್ನು ಅತಿಯಾಗಿ ಪ್ರೀತಿಸುತ್ತೀರಿ.'' (ಪವಿತ್ರ ಕುರ್‌ಆನ್ 89:17-20)

''ಅಲ್ಲಾಹನು ನಾಡುಗಳ ಜನರಿಂದ ತನ್ನ ಸಂದೇಶವಾಹಕರ ಕಡೆಗೆ ಮರಳಿಸಿದ್ದೆಲ್ಲವೂ ಅಲ್ಲಾಹ್ ಮತ್ತು ಸಂದೇಶವಾಹಕರಿಗಾಗಿದೆ ಹಾಗು ಸಂಬಂಧಿಕರು, ಅನಾಥರು ದರಿದ್ರರು ಮತ್ತು ಪ್ರಯಾಣಿಕರದ್ದಾಗಿದೆ. ಅದು ನಿಮ್ಮ ಶ್ರೀಮಂತರ ನಡುವೆ ಮಾತ್ರ ಚಲಿಸುತ್ತ ಇರಬಾರದೆಂದು ಹೀಗೆ ಮಾಡಲಾಗಿದೆ.'' (ಪವಿತ್ರ ಕುರ್‌ಆನ್ 59:7)

''ಚಿನ್ನವನ್ನೂ, ಬೆಳ್ಳಿಯನ್ನೂ ಸಂಗ್ರಹಿಸಿಟ್ಟು ಅವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ. ಈ ಚಿನ್ನ-ಬೆಳ್ಳಿಗಳ ಮೇಲೆ ನರಕಾಗ್ನಿಯನ್ನು ಉರಿಸಲಾಗುವುದು. ತರುವಾಯ ಅದರಿಂದಲೇ ಅವರ ಹಣೆಗಳಿಗೂ ಪಾರ್ಶ್ವಗಳಿಗೂ ಬೆನ್ನುಗಳಿಗೂ ಬರೆ ಹಾಕಲಾಗುವುದು. ''ನೀವು ನಿಮಗಾಗಿ ಸಂಗ್ರಹಿಸಿಟ್ಟ ಸಂಪತ್ತು ಇದುವೇ, ಈಗ ನೀವು ಕೂಡಿ ಹಾಕಿದ್ದ ಸಂಪತ್ತನ್ನು ಸವಿಯಿರಿ ಎನ್ನಲಾಗುವುದು ''

(ಪವಿತ್ರ ಕುರ್‌ಆನ್ 9:34-35)

ಹೀಗೆ ದೇವನ ಶಿಕ್ಷೆ-ರಕ್ಷೆಗಳಲ್ಲಿ ನಂಬಿಕೆಯಿರಿಸುವವರು ಹಣವನ್ನು ಸಂಗ್ರಹಿಸಿ ಇಡುವುದಿಲ್ಲ ಮತ್ತು ದೇವ ಮಾರ್ಗದಲ್ಲಿ ದರಿದ್ರರಿಗೆ ಅದನ್ನು ನೀಡುವರೆಂಬುದರಲ್ಲಿ ಸಂದೇಹವಿಲ್ಲ.

3.ಸಂಪತ್ತನ್ನು ಒಳಿತಾಗಿ ಖರ್ಚುಮಾಡುವವರು ಮಾತ್ರ ವಿಶ್ವಾಸಿಗಳು ಹಾಗೂ ಸ್ವರ್ಗದ ಹಕ್ಕುದಾರರೆಂದು ಕಲಿಸುವ ಕುರ್‌ಆನ್ ಅದು ಅತ್ಯಂತ ಪುಣ್ಯದಾಯಕ ಕಾರ್ಯವೆಂದೂ, ಅದಕ್ಕೆ ಎಷ್ಟೋ ಪಟ್ಟು ಪ್ರತಿಫಲವಿದೆಯೆಂದೂ ಕಲಿಸುತ್ತದೆ.

'' ನೀವು ನಿಮ್ಮ ಮುಖಗಳನ್ನು ಪೂರ್ವದಿಕ್ಕಿಗೆ ಅಥವಾ ಪಶ್ಚಿಮ ದಿಕ್ಕಿಗೆ ಮಾಡಿಕೊಳ್ಳುವುದು ಧರ್ಮಶೀಲತೆಯಲ್ಲ, ನಿಜವಾಗಿ ಒಬ್ಬನು ಅಲ್ಲಾಹನನ್ನೂ, ನಿರ್ಣಾಯಕ ದಿನವನ್ನೂ, ದೇವಚರರನ್ನೂ, ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥವನ್ನೂ, ಅವನ ಸಂದೇಶವಾಹಕರನ್ನೂ ಹೃತ್ಪೂರ್ವಕ ಒಪ್ಪಿಕೊಳ್ಳುವುದು. ಅಲ್ಲಾಹನ ಸಂಪ್ರೀತಿಗಾಗಿ ತನ್ನ ಮನಮೆಚ್ಚುಗೆಯ ಸಂಪತ್ತನ್ನು ಬಂಧುಗಳಿಗೂ, ಅನಾಥರಿಗೂ, ನಿರ್ಗತಿಕರಿಗೂ, ಪ್ರಯಾಣಿಕರಿಗೂ, ಸಹಾಯಾರ್ಥಿಗಳಿಗೂ, ದಾಸ್ಯವಿಮೋಚನೆಗಾಗಿಯೂ ವ್ಯಯಿಸುವುದು, ನಮಾಝನ್ನು ಸಂಸ್ಥಾಪಿಸುವುದು, ಝಕಾತನ್ನು ನೀಡುವುದು ಪುಣ್ಯಕಾರ್ಯವಾಗಿದೆ.'' (ಪವಿತ್ರ ಕುರ್‌ಆನ್ 2:177)

'ನಾನು ಧನರಾಶಿಯನ್ನೇ ಖರ್ಚು ಮಾಡಿಬಿಟ್ಟೆನೆಂದು ಅವನು ಹೇಳುತ್ತಾನೆ. ಅವನನ್ನು ಯಾರೂ ಕಂಡಿಲ್ಲವೆಂದು ಅವನು ಭಾವಿಸುತ್ತಾನೆಯೇ? ನಾವು ಅವನಿಗೆ ಎರಡು ಕಣ್ಣುಗಳನ್ನೂ ಒಂದು ನಾಲಿಗೆಯನ್ನೂ ಎರಡು ತುಟಿಗಳನ್ನೂ ನೀಡಲಿಲ್ಲವೇ? ಮತ್ತು ಅವನಿಗೆ ಎರಡು ಸುಸ್ಪಷ್ಟ

ದಾರಿಗಳನ್ನು ತೋರಿಸಿ ಕೊಡಲಿಲ್ಲವೇ ? ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ. ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು? ಯಾವುದಾದರೂ ಕೊರಳನ್ನು ದಾಸ್ಯ ಬಂಧನದಿಂದ ವಿಮೋಚಿಸುವುದು ಅಥವಾ ಹಸಿವಿನ ದಿನ, ಹಸಿದ ಆಪ್ತ ಅನಾಥನಿಗೆ ಅಥವಾ ದಿಕ್ಕೆಟ್ಟ ದರಿದ್ರನಿಗೆ ಉಣಬಡಿಸುವುದು. ತರುವಾಯ, ಸತ್ಯವಿಶ್ವಾಸವಿರಿಸಿದ ಹಾಗೂ ಪರಸ್ಪರರಿಗೆ ಸಹನೆ ಮತ್ತು ಸೃಷ್ಟಿಗಳ ಮೇಲೆ ಕರುಣೆಯನ್ನು ಬೋಧಿಸಿದ ಜನರ ಸಾಲಿಗೆ ಸೇರುವುದು.' (ಪವಿತ್ರ ಕುರ್‌ಆನ್ 90:6–17)

''ನೀವು ನಿಮಗೆ ಬಹಳ ಪ್ರಿಯವಾಗಿರುವ ವಸ್ತುಗಳನ್ನು (ಅಲ್ಲಾಹನ ಮಾರ್ಗದಲ್ಲಿ) ವ್ಯಯಿಸುವ ತನಕ ಪುಣ್ಯ ಮಟ್ಟವನ್ನು ತಲುಪಲಾರಿರಿ. ನೀವು ಏನೇನು ಖರ್ಚು ಮಾಡುವಿರೋ ಅದರ ಬಗ್ಗೆ ಅಲ್ಲಾಹನು ಅಜ್ಞನಲ್ಲ.'' (ಪವಿತ್ರ ಕುರ್‌ಆನ್ 3:92)

ಈ ಕುರ್‌ಆನ್ ವಾಕ್ಯಗಳನ್ನು ಒಪ್ಪುವವರು ಬಡವರಿಗೆ ಹಣ ವ್ಯಯಿಸಲು ಸ್ವಲ್ಪವೂ ಜಿಪುಣತೆ ತೋರಿಸಲಾರರು ಮತ್ತು ಬಡವರ ಕಷ್ಟಗಳ ಬಗ್ಗೆ ಬಹಳ ಕಾಳಜಿ ವಹಿಸುವರೆಂಬುದರಲ್ಲಿ ಸಂಶಯವಿಲ್ಲ.

4. ಇಸ್ಲಾಮ್ ಶೋಷಣೆಯ ಎಲ್ಲಾ ಮಾರ್ಗಗಳನ್ನು ಮುಚ್ಚಿಹಾಕುತ್ತದೆ. ಸಮಾಜಕ್ಕೆ ಹಾನಿಕರವಾದ ಸಂಪಾದನಾ ಮಾರ್ಗಗಳನ್ನು ನಿಷೇಧಿಸಿದೆ. ಅಲ್ಲಾಹನು ಹೇಳುತ್ತಾನೆ: ''ತೂಕದಲ್ಲಿ ಕಡಿತಗೊಳಿಸಿ ಕೊಡುವವರಿಗೆ ವಿನಾಶವಿದೆ. ಅವರು ಜನರಿಂದ ಪಡೆಯುವಾಗ ಸಂಪೂರ್ಣವಾಗಿ ಪಡೆಯುತ್ತಾರೆ ಮತ್ತು ಅಳತೆ ಮಾಡಿ ಅಥವಾ ತೂಕ ಮಾಡಿ (ಜನರಿಗೆ) ಕೊಡುವಾಗ ಕಡಿಮೆ ಕೊಡುತ್ತಾರೆ. ಇವರನ್ನು ಎಬ್ಬಿಸಿ ತರಲಾಗುವುದೆಂದು ಇವರು ಗ್ರಹಿಸುವುದಿಲ್ಲವೇ? ಒಂದು ಮಹಾದಿನದಂದು. ಅದು ಎಲ್ಲ ಜನರು ಸರ್ವಲೋಕಗಳ ಪಾಲಕ ಪ್ರಭುವಿನ ಮುಂದೆ ನಿಲ್ಲುವ ದಿನವಾಗಿದೆ.'' (ಪವಿತ್ರ ಕುರ್‌ಆನ್ 83:1–6)

''ಬಡ್ಡಿ ತಿನ್ನುವವರ ಅವಸ್ಥೆಯು ಶೈತಾನನ ಸೋಂಕಿನಿಂದ ಹುಚ್ಚನಾದವನಂತಿದೆ.''
(ಪವಿತ್ರ ಕುರ್‌ಆನ್ 2:275)

ಬಡ್ಡಿಯು ಮಹಾಪಾಪವೆಂದೂ, ಅದನ್ನು ತಿನ್ನುವವರು ನರಕವಾಸಿಗಳೆಂದು ಇಸ್ಲಾಮ್ ಕಲಿಸುತ್ತದೆ. ಜೂಜಾಟದಂತಹ ಆರ್ಥಿಕ ಶೋಷಣೆಯನ್ನು ಅದು ಬಲವಾಗಿ ನಿಷೇಧಿಸುತ್ತದೆ. ಪ್ರವಾದಿ(ಸ)ರು ಹೇಳಿರುವರು : ''ಯಾರು ವಂಚಿಸುವನೋ ಅವನು ನಮ್ಮವನಲ್ಲ.'' (ಅಹ್ಮದ್, ತಿರ್ಮಿದಿ)

'ಆಕ್ರಮವಾಗಿ ಸಂಪಾದಿಸಿದವನು ಪಾಪಿಯಾಗಿದ್ದಾನೆ.' (ಮುಸ್ಲಿಮ್, ಅಬೂದಾವುದ್)
''ಕಾರ್ಮಿಕರಿಗೆ ಸಂಬಳ ಕೊಡದೆ ಸತಾಯಿಸುವವನಿಗೆ ಅಲ್ಲಾಹನು ಅಂತ್ಯದಿನದಲ್ಲಿ ಶತ್ರುವಾಗಿರುತ್ತಾನೆ.'' (ಬುಖಾರಿ)

ಹೀಗೆ ಆರ್ಥಿಕ ಶೋಷಣೆಯ ದ್ವಾರಗಳನ್ನೆಲ್ಲಾ ಮುಚ್ಚಿಬಿಡುವ ಇಸ್ಲಾಮ್ ಜಿಪುಣತೆಯನ್ನು ತೀವ್ರವಾಗಿ ವಿರೋಧಿಸುತ್ತದೆ. ಅವರಿಗೆ ಕಠಿಣ ಶಿಕ್ಷೆಯ ಎಚ್ಚರಿಕೆಯನ್ನು ನೀಡುತ್ತದೆ. ಅಲ್ಲಾಹನು

ತನ್ನ ಅನುಗ್ರಹದ ಅನಂತರವೂ ಜಿಪುಣತೆ ತೋರಿಸುವವರು -ಈ ಲೋಭವು ತಮ್ಮ ಪಾಲಿಗೆ ಶುಭಕರವೆಂದೆಣಿಸದಿರಲಿ. ಇದು ಅವರ ಮಟ್ಟಿಗೆ ಅತ್ಯಂತ ಅಶುಭಕರವಾದಗಿರುವುದು. ಅವರು ತಮ್ಮ ಜಿಪುಣತೆಯಿಂದ ಸಂಗ್ರಹಿಸಿಡುವ ವಸ್ತುವೇ ಪುನರುತ್ಥಾನ ದಿನಂದು ಅವರ ಕಂಠಕಡಗವಾಗುವುದು. ಭೂಮಿ-ಆಕಾಶಗಳ ಅಂತಿಮ ಒಡೆತನ ಅಲ್ಲಾಹನಿಗಾಗಿಯೇ ಇದೆ ನೀವು ಮಾಡುವುದನ್ನೆಲ್ಲಾ ಅಲ್ಲಾಹ್ ಬಲ್ಲವನಾಗಿರುತ್ತಾನೆ. (ಪವಿತ್ರ ಕುರ್‌ಆನ್ 3:180)

5. ಮರ್ದಿತರು, ಶೋಷಿತರು, ದರಿದ್ರರು ಅದೇ ಪರಿಸ್ಥಿತಿಯಲ್ಲಿರಬೇಕೆಂದು ಧರ್ಮ ಬಯಸುವುದಿಲ್ಲ, ಬದಲಾಗಿ ಅವರನ್ನು ಅಂತಹ ಸ್ಥಿತಿಯಿಂದ ಪಾರುಗೊಳಿಸಲು ಹೋರಾಡದವರಲ್ಲಿ ಕುರ್‌ಆನ್ ಹೇಳುತ್ತದೆ: ''ಮರ್ದನಕ್ಕೊಳಗಾದ ಪುರುಷರು, ಸ್ತ್ರೀಯರು ಮತ್ತು ಮಕ್ಕಳಿಗಾಗಿ, ನೀವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡದಿರಲು ಕಾರಣವೇನು? ಆ ಜನರು ಹೇಳುತ್ತಾರೆ: '' ಓ ನಮ್ಮ ಪ್ರಭೂ, ಅಕ್ರಮಿಗಳು ವಾಸಿಸುವ ನಾಡಿನಿಂದ ನಮ್ಮನ್ನು ಪಾರುಗೊಳಿಸು; ನೀನು ನಿನ್ನ ಕಡೆಯಿಂದ ನಮಗೊಬ್ಬ ಮೇಲ್ವಿಚಾರಕನನ್ನು ಮತ್ತು ಒಬ್ಬ ಸಹಾಯಕನನ್ನು ನಿಯೋಜಿಸು.'' (ಪವಿತ್ರ ಕುರ್‌ಆನ್ 4:75)

ಪ್ರವಾದಿ (ಸ) ಹೇಳುತ್ತಾರೆ: ''ವಿಧವೆಯರು ಮತ್ತು ದುರ್ಬಲರಿಗಾಗಿ ದುಡಿಯುವನು ಅಲ್ಲಾಹನ ಮಾರ್ಗದಲ್ಲಿ ಹೋರಾಟ ಮಾಡುವವನಂತೆ.''(ಬುಖಾರಿ)

''ಎಲ್ಲಾ ಕಾಲುಗಳು ಎಡವಿ ನರಕಕ್ಕೆ ಬೀಳುವ ದಿನ ಮರ್ದಿತರ ಪರವಾಗಿ ಹೋರಾಡಿ, ಅವರ ಹಕ್ಕನ್ನು ಒದಗಿಸಲು ಪ್ರಯತ್ನಿಸುವವನ ಎರಡು ಕಾಲುಗಳು ಗಟ್ಟಿಯಾಗಿ ನಿಲ್ಲುತ್ತದೆ.''

ಧರ್ಮವು ಸೂಚಿಸಿರುವ ಸ್ವರ್ಗ-ನರಕ ವಿಶ್ವಾಸವು ಎಲ್ಲಾ ರೀತಿಯ ಶೋಷಣೆಗಳನ್ನು ಕೊನೆಗೊಳಿಸಿ, ಆರ್ಥಿಕ ಹಾಗೂ ಸಾಮಾಜಿಕ ನ್ಯಾಯವನ್ನು ಸ್ಥಾಪಿಸಬಯಸುತ್ತದೆಂದು ಈ ವಾಸ್ತವಿಕತೆಗಳು ಸ್ಪಷ್ಟಪಡಿಸುತ್ತದೆ. ಧರ್ಮದ ನೈಜ ಉದ್ದೇಶ ಮರ್ದಿತರ ವಿಮೋಚನೆಯಾಗಿದೆ. ಇತಿಹಾಸದಲ್ಲಿ ಎಲ್ಲೆಡೆಯೂ ಪ್ರವಾದಿಗಳ ಹಾಗೂ ಅವರ ಅನುಯಾಯಿಗಳ, ಸಂದೇಶ ಪ್ರಚಾರಕರ ಮುಖ್ಯ ವಿರೋಧಿಗಳಲ್ಲಿ ಶ್ರೀಮಂತ ವರ್ಗ ಹಾಗೂ ಮರ್ದಕ ಆಡಳಿತಗಾರರು ಅಧಿಕವಾಗಿದ್ದರು. ಮರ್ದಕರು, ಶೋಷಕರು ನರಕ ಪ್ರವೇಶಿಸುವರೆಂದೂ, ಸಜ್ಜನರು ಹಾಗೂ ಸತ್ಕರ್ಮಿಗಳು ಮಾತ್ರ ಸ್ವರ್ಗಕ್ಕೆ ಅರ್ಹರೆಂದೂ ತಿಳಿಸುವ ಧಾರ್ಮಿಕ ವಿಶ್ವಾಸ ವಂಚನೆಗೆ ಕಡಿವಾಣ ಹಾಕುತ್ತದೆ. ಬದಲಾಗಿ ಶೋಷಕ ವರ್ಗವನ್ನು ಬೆಂಬಲಿಸುವುದಿಲ್ಲವೆಂದು ಹಗಲಿನಷ್ಟೆ ಸ್ಪಷ್ಟ ವಿಚಾರವಾಗಿದೆ.

## 15 ಆತ್ಮಸಾಕ್ಷಿ ಮತ್ತು ದೇವಸಂದೇಶ

**ಮಾನವನ ಮಾರ್ಗದರ್ಶನಕ್ಕೆ ದಿವ್ಯ ಸಂದೇಶ ಅನಿವಾರ್ಯವೆಂಬ ವಾದ ಸರಿಯೇ? ಪ್ರತಿಯೊಬ್ಬರೂ ತಮ್ಮ ಆತ್ಮಸಾಕ್ಷಿಯಂತೆ ಬಾಳಿದರೆ ಸಾಕಾಗದೇ?**

ಮನಸ್ಸಿನ ಇಚ್ಛೆ ಎಂಬುದು ಒಂದು ಮಹತ್ತರವಾದ ಸಿದ್ಧಿಯಾಗಿದೆ. ಹಾಗಾದರೆ ಈ ಆತ್ಮಸಾಕ್ಷಿ ಎಂದರೇನು? ಎಲ್ಲರ ಆತ್ಮಸಾಕ್ಷಿ ಒಂದೇ ರೀತಿ ಇರುವುದೇ? ಅದು ದೋಷಮುಕ್ತವೆಂದು ಎಲ್ಲರಿಗೂ ನಂಬಿಕೆಯಿದೆಯೇ? ಇವೆಲ್ಲಾ ಗಮನಿಸಬೇಕಾದ ಪ್ರಶ್ನೆಗಳಾಗಿವೆ. ನಾವು ಹುಟ್ಟಿದ ಕುಟುಂಬ ಹಾಗೂ ಬೆಳೆಯುವ ವಾತಾವರಣವು ನಮ್ಮ ಆತ್ಮಸಾಕ್ಷಿಯನ್ನು ಗಾಢವಾಗಿ ಸ್ವಾಧೀನಪಡಿಸುತ್ತದೆ. ದೇಶ, ವಂಶ, ಕಾಲ, ಜಾತಿ ಹಾಗೂ ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳು ಕೂಡಾ ಪ್ರಭಾವ ಬೀರುತ್ತದೆ.

ಎಲ್ಲರ ವಿಚಾರಗಳು, ಶೈಲಿಯೂ ಒಂದೇ ತೆರನಾಗಿಲ್ಲ, ಮನುಷ್ಯರು ವಿಭಿನ್ನ ಪ್ರಕೃತಿಯವರೂ, ಸ್ವಭಾವವುಳ್ಳವರೂ ಆಗಿದ್ದಾರೆ. ಅವರ ಆಶೆ, ಅಭಿಲಾಷೆಗಳು ವಿಭಿನ್ನವಾಗಿದೆ. ವೈಜ್ಞಾನಿಕ ಹಾಗೂ ಯುಕ್ತಿಪೂರ್ಣ ನಿಲುವುಗಳಲ್ಲೂ ಅಂತರವಿದೆ. ಎಲ್ಲರೂ ತಮ್ಮದೇ ರೀತಿಯಲ್ಲಿ ತಮ್ಮದೇ ಯೋಚನೆಯಂತೆ ವಿಷಯಗಳನ್ನು ಗಮನಿಸುತ್ತಾರೆ. ಎಲ್ಲರ ಚಿಂತನೆಯೂ ಒಂದೇ ರೀತಿಯಾಗಲು ಸಾಧ್ಯವಿಲ್ಲ, ಅವರ ಗ್ರಹಿಕೆಯಲ್ಲಿ ವ್ಯತ್ಯಾಸ ಅನಿವಾರ್ಯ.

ಸೌಂದರ್ಯವು ಅಪೇಕ್ಷಣೀಯವಾಗಿದೆ. ಆದರೆ ವ್ಯಕ್ತಿಗಳ ಆಸ್ವಾದನೆ ರೀತಿಗಳು ವಿಭಿನ್ನವಾಗಿರುತ್ತದೆ. ಹಲವರಿಗೆ ಸುಂದರವಾಗಿ ಗೋಚರಿಸಿದ್ದು ಇನ್ನು ಕೆಲವರಿಗೆ ಕುರೂಪವಾಗಿರುತ್ತದೆ. ಮಾನವರ ಅಭಿರುಚಿಗಳಲ್ಲಿ ಬಹಳ ಅಂತರಗಳಿರುತ್ತದೆ. ಕೆಲವರು ಇಷ್ಟಪಡುವ ವಸ್ತುಗಳು ಇನ್ನು ಕೆಲವರಿಗೆ ಜಿಗುಪ್ಸೆ ಮೂಡಿಸುತ್ತದೆ. ಹಾಗಾದರೆ ಒಳಿತು –ಕೆಡುಕುಗಳು ಇದೇ ರೀತಿಯೇ? ವ್ಯಕ್ತಿಗಳ ಅಭಿರುಚಿಗೆ ತಕ್ಕಂತೆ ಅವುಗಳಲ್ಲಿ ವ್ಯತ್ಯಾಸವಿದೆಯೇ? ಖಂಡಿತ ಅದು ಅಸಾಧ್ಯವಲ್ಲವೆ? ಒಳಿತು ಎಂದೆಂದೂ ಒಳಿತೇ ಆಗಿರುತ್ತದೆ. ಕೆಡುಕು ಕೆಡುಕೇ ಆಗಿರುತ್ತದೆ. ಇದನ್ನು ಮಾನವರ ಅಭಿರುಚಿಗೆ ಬಿಟ್ಟರೆ ಮೌಲ್ಯಪ್ರಜ್ಞೆಯಿಲ್ಲದಂತಾಗುವುದು. ಒಳಿತು–ಕೆಡುಕು, ಸರಿ–ತಪ್ಪೆಂಬ ಭಾವನೆ ಮಾಯವಾಗುತ್ತದೆ. ಹೀಗೆ ಸಮಾಜ ಅರಾಜಕತೆಯತ್ತ ಸಾಗುತ್ತದೆ.

ಒಳಿತು ಕೆಡುಕುಗಳು ಸಾಮಾಜಿಕ,ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬದಲಾಗುವುದಿಲ್ಲ. ಒಳಿತೆಂದರೆ ಕೇವಲ ಒಂದು ನಾಮ ಮಾತ್ರ ಎಂದು ಹೇಳಿದ ನಿಕೋಲೊ ಮಾಕ್ಯವಲ್ಲಿಯವರ

ದೃಷ್ಟಿಕೋನ ಹಾಗೂ ಒಳಿತೆಂಬುದು ಒಂದು ಕಟ್ಟುಕತೆಯಂಬ ಝೂನ್ ಪೋಲ್ ಸಾರ್ತ್ರೆಯವರ ವಾದಗಳಲ್ಲೂ ಇದನ್ನೇ ಅನಾವರಣ ಗೊಳಿಸುತ್ತದೆ.

ಒಳಿತು-ಕೆಡುಕುಗಳು, ಕಾಲ-ದೇಶ-ಭಾಷೆ, ವರ್ಗ, ವರ್ಣ, ಜಾತಿ, ಲಿಂಗಗಳನ್ನು ಮೀರಿ ಸುಭದ್ರ ಹಾಗೂ ಶಾಶ್ವತವಾಗಿರಬೇಕು. ಅದು ಮನುಷ್ಯನ ಆತ್ಮಸಾಕ್ಷಿಗೆ ಅಥವಾ ಆರ್ಥಿಕ, ದೇಶೀಯ ಹಿತಾಸಕ್ತಿಗಳಿಗೆ ಅನುಗುಣವಾಗಿರಬೇಕು ಮತ್ತು ಸಮಕಾಲೀನ ಬೇಡಿಕೆಗಳು ಅವನ್ನು ನಿಶ್ಚಯಿಸುತ್ತದೆಯೆಂದಾದರೆ ಅದು ಅಸಾಧ್ಯ. ಆದ್ದರಿಂದ ಒಳಿತು-ಕೆಡುಕು, ನ್ಯಾಯ ಅನ್ಯಾಯಗಳನ್ನು ಮನುಷ್ಯನ ಆತ್ಮಸಾಕ್ಷಿಗೆ ಬಿಟ್ಟರೆ ಅದು ಬುದ್ಧಿವಂತಿಕೆಯಲ್ಲ. ಮನುಷ್ಯನ ಆತ್ಮಸಾಕ್ಷಿಯಲ್ಲಿ ದೌರ್ಬಲ್ಯವಿಲ್ಲವೆಂದು ನಂಬಲು ಸಾಧ್ಯವಿಲ್ಲ. ಆದ್ದರಿಂದ ಮನುಷ್ಯ ದೇಹೇಚ್ಛೆಯ ಗುಲಾಮನಾಗಿ ಬಿಡುತ್ತಾನೆ.

ಒಳಿತು-ಕೆಡುಕುಗಳನ್ನು ಎಲ್ಲಾ ಕಾಲದ, ದೇಶದ ಹಾಗೂ ಸರ್ವ ಮನುಷ್ಯರ ಸೃಷ್ಟಿಕರ್ತನಾದ ದೇವನೇ ನಿರ್ಧರಿಸಬೇಕು. ಆತ ಅದನ್ನು ಬಹಳ ಸ್ಪಷ್ಟವಾಗಿ, ನಿಸ್ಪಕ್ಷಪಾತವಾಗಿ ನಿರ್ಣಯಿಸಿದ್ದಾನೆ. ಆದ್ದರಿಂದ ಒಳಿತು-ಕೆಡುಕು, ಸರಿ-ತಪ್ಪು ದೇವ ನಿಶ್ಚಿತವಾಗಿದೆ. ಅದು ಕಾಲ ಹಾಗೂ ದೇಶಗಳನ್ನು ಮೀರಿ ನಿಂತಿದೆ. ಮಾನವರಿಗೆ ಅದನ್ನು ತಿಳಿಯಲು ಇರುವ ಏಕೈಕ ಮಾರ್ಗ ದೇವಸಂದೇಶವಾಹಕರ ದಿವ್ಯಬೋಧನೆಗಳಾಗಿವೆ.

ನಾನು ಯಾರು? ಎಲ್ಲಿಂದ ಬಂದೆ? ಎಲ್ಲಿ ಹೋಗಬೇಕಾಗಿದೆ? ಜೀವನವೆಂದರೇನು? ಅದರ ಉದ್ದೇಶವೇನು? ಅದು ಯಾವ ರೀತಿಯಿರಬೇಕು? ಮೊದಲಾದ ವಿಷಯಗಳನ್ನು ದಿವ್ಯಸಂದೇಶದ ಹೊರತು ಯಾರಿಗೂ ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ತತ್ವಜ್ಞಾನಿಗಳು ಹಾಗೂ ಸಂಶೋಧಕರು ಕೂಡ ಮನುಷ್ಯರ ಕುರಿತು ಗೊಂದಲದಲ್ಲೇ ಇದ್ದಾರೆ. ಏಕೆಂದರೆ ಕೆಲವು ಬಹಿರಂಗವಾದ ವಿಷಯಗಳಿಂದ ಮಾತ್ರ ವಿಷಯಗಳನ್ನು ಗ್ರಹಿಸಲು ಅವರಿಗೆ ಸಾಧ್ಯವಾಗುವುದು. ಮನುಷ್ಯರ ಕುರಿತು ಹೆಚ್ಚಿನ ವಿಷಯಗಳು ಇಂದಿಗೂ ಅಜ್ಞಾತವಾಗಿಯೇ ಉಳಿದಿದೆ. ಮನುಷ್ಯನಿಗೆ ಸೀಮಿತ ಬುದ್ಧಿಸಾಮರ್ಥ್ಯವಿರುವುದರಿಂದ ಸಂಶೋಧನೆಗಳು ಇನ್ನೂ ಕೊನೆಗೊಂಡಿಲ್ಲ. ವಿಜ್ಞಾನಿಗಳು ಹಾಗೂ ಸಂಶೋಧಕರು ಮನುಷ್ಯರ ಕುರಿತು ಹೊಸ ಹೊಸ ವಿಚಾರಗಳು ತಿಳಿದು ಬಂದಂತೆ ತಮ್ಮ ಅಜ್ಞಾನದ ಆಳವನ್ನು ತಿಳಿದುಕೊಳ್ಳುವುದು ವಾಡಿಕೆ. ಚಾರ್ಲ್ಸ್ ಡಾರ್ವಿನ್, ಸಿಗ್‌ಮಂಡ್ ಫ್ರಾಯ್ಡ್, ಹೇಗಲ್, ಮಾರ್ಕ್ಸ್... ಮೊದಲಾದವರು ಮನುಷ್ಯನನ್ನು ಬೇರೆ ಬೇರೆ ರೀತಿಯಿಂದ ಅರ್ಥಮಾಡಿಕೊಂಡರು. ಕೆಲವರು ತಮ್ಮ ಸಂಶೋಧನೆಯಲ್ಲಿ ತಮ್ಮ ಎಲ್ಲಾ ಗಮನವನ್ನೂ ದೇಹಪ್ರಕೃತಿಯಲ್ಲೂ ರೂಪಭಾವಗಳಲ್ಲೂ ಕೇಂದ್ರೀಕರಿಸಿದರು. ಆದ್ದರಿಂದ ದೇಹವನ್ನು ಕೇಂದ್ರೀಕರಿಸಿ ಕೆಲವು ಅಭಿಪ್ರಾಯಗಳಿಗೆ ತಲುಪಿದರು. ಇನ್ನು ಕೆಲವರು ಉದ್ಯೋಗದ ಪರಿಣಾಮಕ್ಕೆ ವಿಧೇಯನಾದ ಪ್ರಾಣಿಯಂತೆ ಕಂಡುದು ಮತ್ತು ಕೆಲವು ಸಂಶೋಧಕರ ಗಮನ ಅವರ ಹೊಟ್ಟೆಯ ಕಡೆಗೆ ನೆಟ್ಟಿತು. ಅವರು ಅದೇ ರೀತಿಯ ಸಂಶೋಧನೆಯಲ್ಲಿ ನಿರತರಾದರು. ಎಲ್ಲವನ್ನೂ ಅದರೊಂದಿಗೆ ಜೋಡಿಸಿದರು. ಹೊಟ್ಟೆಯೇ ಪ್ರಧಾನವೆಂದು ವಾದಿಸಿದರು.

ಅದೇ ವಿಚಾರವನ್ನು ಹಿಗ್ಗಿಸಿದರು. ಹಸಿವೆಯೇ ಎಲ್ಲಾ ಸಮಸ್ಯೆಗಳ ಮೂಲ ಎಂದರು. ಅದು ನಿವಾರಣೆಯಾದರೆ ಎಲ್ಲಾ ಸರಿಯಾಗುತ್ತದೆಂದು ವಾದಿಸಿದರು. ಲೈಂಗಿಕತಯೇ ಮನುಷ್ಯನ ಮೊದಲ ಪ್ರಾಶಸ್ತ್ಯವೆಂದು ಕೆಲವರು ನಂಬಿದರು. ಹೀಗೆ ನಮಗೆ ಕಾಣುವ, ತೋರುವ, ಕೆಲವು ವಿಚಾರಗಳೊಂದಿಗೆ ಜೋಡಿಸಿ ಅದಕ್ಕೆ ಸೀಮಿತಗೊಳಿಸಿದರು. ಮನುಷ್ಯ ಜೀವನದ ಎಲ್ಲಾ ವಿಷಯಗಳು ಅಂಗಕ್ಕೆ ಸಂಬಂಧಿಸಿದ್ದೆಂದು ಘೋಷಿಸಿದರು.ಲೈಂಗಿಕ ನಿಯಂತ್ರಣವನ್ನು ತೆಗೆದು ಹಾಕಿದರೆ ಎಲ್ಲವೂ ಸರಿಯಾಗುತ್ತದೆಂಬ ನಿಲುವಿಗೆ ಕೆಲವರು ತಲುಪಿದರು. ಇನ್ನು ಕೆಲವರು ಆಧ್ಯಾತ್ಮಿಕತೆಗೆ ಹೆಚ್ಚಿನ ಮಹತ್ವ ನೀಡಿದರು. ದೇಹ ಮತ್ತು ಅದರ ಅಗತ್ಯಗಳನ್ನು ನಿರ್ಲಕ್ಷಿಸಿದರು. ಆದ್ದರಿಂದಲೇ ದಿವ್ಯ ಸಂದೇಶವನ್ನು ಅವಲಂಬಿಸಿದ ಮಾನವನನ್ನು ಅರಿಯಲು ಯತ್ನಿಸಿದರು. ಆನೆ ಹೇಗಿದೆಯೆಂದು ತಿಳಿಯಲು ಪ್ರಯತ್ನಿಸಿದ ಕುರುಡರಂತೆ ಆಗಿದ್ದಾರೆ. ಅಪೂರ್ಣವೂ, ಅಸಂಬಂಧವೂ, ಜಟಿಲವೂ ಆದ ನಿಲುವಿಗೆ ತಲುಪಲು ಮಾತ್ರ ಅವರಿಗೆ ಸಾಧ್ಯವಾಯಿತು.

ಮನುಷ್ಯನನ್ನು ಅರಿಯದವರಿಗೆ ಅವನು ಹೇಗೆ ಜೀವಿಸಬೇಕೆಂದು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ತಾನು ಯಾವ ರೀತಿ ಬದುಕು ಸಾಗಿಸಬೇಕೆಂದು ಗ್ರಹಿಸಲು ಅಗತ್ಯವಾದ ಪ್ರಾಥಮಿಕ ಜ್ಞಾನವಾದರೂ ಇರಬೇಕು. ದಿವ್ಯ ಸಂದೇಶದಿಂದ ಮಾತ್ರ ಅದು ಲಭಿಸಲು ಸಾಧ್ಯ. ಮನುಷ್ಯನಿಗೆ ಆತನ ಅಸ್ತಿತ್ವ, ಗುರಿ, ಉದ್ದೇಶ ಹಾಗೂ ಆಗಮನದ ಕುರಿತು ಧರ್ಮವೇ ಕಲಿಸಿಕೊಟ್ಟಿದೆ. ಜೀವನದ ಮಾರ್ಗವನ್ನು ಅದುವೇ ನಿರ್ಣಯಿಸಿದೆ. ದಿವ್ಯ ಸಂದೇಶವನ್ನು ಅವಲಂಬಿಸದವರಿಗೆ ಮರಣಾನಂತರ ಏನು? ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅವರಿಗೆ ಜೀವನವೆಂಬದು ಹುಟ್ಟಿನಿಂದ ಆರಂಭವಾಗಿ ಮರಣದೊಂದಿಗೆ ಕೊನೆಗೊಳ್ಳುವ ಒಂದು ಪ್ರಕ್ರಿಯೆ ಮಾತ್ರ. ಇದು ಜೀವನದ ದೃಷ್ಟಿಕೋನ ಹಾಗೂ ಉದ್ದೇಶದ ಮೇಲೆ ಪ್ರಬಲ ಪರಿಣಾಮ ಬೀರುತ್ತದೆ. ಜೀವನದ ಎಲ್ಲಾ ರಂಗಗಳನ್ನು ಸ್ವಾಧೀನ ಪಡಿಸುತ್ತದೆ. ಆದರೆ ದೇವಸಂದೇಶವು ಇನ್ನೊಂದು ಲೋಕದ ಕುರಿತು ಮಾತನಾಡುತ್ತದೆ. ಮರಣದ ಬಳಿಕದ ಜೀವನವೇ ಮುಖ್ಯ ಎಂದು ಹೇಳುತ್ತದೆ. ಈ ಲೋಕವು ಕರ್ಮಭೂಮಿಯೆಂದೂ, ವಿಚಾರಣೆ, ನ್ಯಾಯತೀರ್ಮಾನ ಹಾಗು ಪ್ರತಿಫಲ ಪರಲೋಕದಲ್ಲಿ ದೊರೆಯುತ್ತದೆಂದೂ ಹೇಳುತ್ತದೆ. ಇಂತಹ ವಿಶ್ವಾಸ ಇಲ್ಲದಿದ್ದರೆ ಭೂಮಿಯಲ್ಲಿ ಮಾಡುವ ಸತ್ಕರ್ಮಗಳೆಲ್ಲ ನಿರರ್ಥಕವಾಗಿ ಬಿಡುತ್ತದೆ. ಕರ್ಮಗಳಿಗೆ ದೊರೆಯುವ ಲೌಕಿಕ ಪ್ರತಿಫಲಗಳನ್ನು ನೋಡಿ ತೀರ್ಮಾನಿಸುವುದು ಸರಿಯಾಗುವುದಿಲ್ಲ. ನದಿಗೆ ಬಿದ್ದ ಮಗುವನ್ನು ರಕ್ಷಿಸಲು ಹೊಳೆಗೆ ಧುಮುಕಿದ ವ್ಯಕ್ತಿ ಶಕ್ತಿ ಮೀರಿ ಪ್ರಯತ್ನಿಸಿದರೂ ಆತನ ಶ್ರಮ ವಿಫಲವಾಯಿತೆಂದು ಅರ್ಥವಲ್ಲ. ನಮಗೆ ಅದು ಸೋಲಿನಂತೆ ಭಾಸವಾಗಬಹುದು. ಆದರೆ ಅದು ಉದಾತ್ತ ಮೌಲ್ಯದಿಂದ ಕೂಡಿದೆ. ಮಗುವನ್ನು ರಕ್ಷಿಸುವಾಗ ನೀರಿನ ಸುಳಿಗೆ ಸಿಲುಕಿ ಆತನು ನೀರುಪಾಲಾದರೆ ನಮಗೆ ಅದು ಒಬ್ಬನ ಬದಲಿಗೆ ಇಬ್ಬರ ಮರಣವಾಯಿತೆಂದು ತೋರುತ್ತದೆ. ಇದು ಲೌಕಿಕ ದೃಷ್ಟಿಯಲ್ಲಿ ದೊಡ್ಡ ನಷ್ಟವಾಗಿದೆ. ಆದರೆ ವಾಸ್ತವದಲ್ಲಿ ಅದು ಶೌರ್ಯದ ಪರಕಾಷ್ಠೆಯ ವೀರ ಮರಣವಾಗಿದೆ. ಮರಣದಿಂದ ಎಲ್ಲವೂ ಕೊನೆಗೊಳ್ಳುವುದಾದರೆ

ಆದರ್ಶಕ್ಕಾಗಿ ವೀರ ಮರಣಹೊಂದಿದವರ ಹೋರಾಟ ಅರ್ಥಶೂನ್ಯವೆನಿಸುತ್ತದೆ. ನ್ಯಾಯದ ಹೋರಾಟದಲ್ಲಿ ವಿಫಲನಾದ ವ್ಯಕ್ತಿಗೆ ಸಿಗುವ ಪ್ರತಿಫಲಕ್ಕೆ ಈ ಲೋಕದೊಂದಿಗೆ ಸಂಬಂಧವಿಲ್ಲ.

ಮರಣದಿಂದ ಜೀವನ ಕೊನೆಗೊಳ್ಳುವುದಾದರೆ ಅಂತಹ ತ್ಯಾಗ ವ್ಯರ್ಥವಾಗಿದೆ ಅಥವಾ ನಾವದನ್ನು ಪ್ರತಿಫಲಾರ್ಹವೆಂದು ಹೇಳವುದಾದರೆ ಅದು ಪರಲೋಕ ಪ್ರಜ್ಞೆಯ ಫಲವಾಗಿದೆ. ಸತ್ಯ, ನ್ಯಾಯ ಮಾರ್ಗದಲ್ಲಿ ಸ್ಥಿರವಾಗಿ ನಿಂತು ಹೋರಾಡಿ ಸೋತ ವೀರನಾಯಕನನ್ನು ಬೆಂಬಲಿಸುವುದು, ಸಮರ್ಥಿಸುವುದು ಅಥವಾ ಹೊಗಳುವುದು ಪರಲೋಕದ ಕುರಿತ ಯಾವುದೋ ನಂಬಿಕೆಯ ಫಲವಾಗಿದೆ. ಘಟನಾವಳಿಗಳ ಕುರಿತ ನಮ್ಮ ಸ್ವಂತ ಅಭಿಪ್ರಾಯವೇ ನಮ್ಮನ್ನು ಸ್ವಾಧೀನಗೊಳಿಸಿರುತ್ತದೆ. ದಿವ್ಯ ಸಂದೇಶದ ಸ್ವಾಧೀನತೆಯಿಂದ ಮುಕ್ತವಾದ ಮನಃ ಸಾಕ್ಷಿಗೆ ತ್ಯಾಗದ ಬೆಲೆಯ ಅರ್ಥವಾಗುವುದಿಲ್ಲ. ಗಣಿತ ಶಾಸ್ತ್ರದ ಲಾಭ-ನಷ್ಟಗಳಿಗೆ ಹೊರತಾಗಿ ಬೇರೆ ತೀರ್ಮಾನಕ್ಕೆ ಬರಲು ಅವರಿಗೆ ಸಾಧ್ಯವಾಗುವುದಿಲ್ಲ.

ದಿವ್ಯ ಸಂದೇಶದ ಅಭಾವದಿಂದ ಮನುಷ್ಯನಿಗೆ ತನ್ನ ಕುರಿತು ಮಾತ್ರವಲ್ಲ ತನ್ನ ಸೃಷ್ಟಿಕರ್ತನ ಕುರಿತೂ ಅರಿವಾಗುವುದಿಲ್ಲ. ಅವನು ತಂದೆಯೊಂದಿಗೆ ಬದುಕು ಸಾಗಿಸಿದರೂ ಸ್ವಂತ ತಂದೆಯನ್ನು ಅರ್ಥಮಾಡಿಕೊಳ್ಳದ ಮಗನಿಗಿಂತ ಅನೇಕ ಪಟ್ಟು ದೌರ್ಭಾಗ್ಯವಂತನಾಗಿದ್ದಾನೆ. ದೇವನ ಕುರಿತ ಅಜ್ಞಾನವು ಅವನ ಜೀವನದ ಉದ್ದೇಶದ ಅಜ್ಞಾನಕ್ಕೂ ಈ ಮೂಲಕ ಅವನ ನಾಶಕ್ಕೂ ಕಾರಣವಾಗುತ್ತದೆ.

ಜಗತ್ತು ಹೊಸ ಹೊಸ ಸಂಶೋಧನೆಗಳಿಂದ ಆಧುನಿಕ ತಂತ್ರಜ್ಞಾನದತ್ತ ದಾಪುಗಾಲು ಹಾಕುತ್ತಿರುವಾಗಲೂ, ಮಾನವ ತನ್ನ ಹಾಗೂ ತಾನು ಬದುಕುತ್ತಿರುವ ಈ ಲೋಕದ ಕುರಿತು ಅಜ್ಞನಾಗಿದ್ದಾನೆ. ಪ್ರತಿಯೊಂದು ಸಂಶೋಧನೆಗಳಿಂದ ಲಭಿಸುವ ಹೊಸ ತಿಳುವಳಿಕೆಯು ತನ್ನ ಅಜ್ಞಾನದ ಆಳವನ್ನು ಅರಿಯಲು ಸಹಾಯಕವಾಗುತ್ತದೆ. ತನ್ನನ್ನು ತನ್ನ ನಿವಾಸವಾದ ಈ ಲೋಕದ ಕುರಿತು ತಿಳಿಯದೆ ಇಲ್ಲಿ ಸ್ವಸ್ಥ, ಶಾಂತಿಯುತ ಜೀವನ ಸಾಧ್ಯವಿಲ್ಲ. ಆದ್ದರಿಂದ ನವ ಆತ್ಮಸಾಕ್ಷಿಗೆ ಜೀವನದ ಮಾರ್ಗದರ್ಶಕವಾಗಲು ಅಸಾಧ್ಯ.

ಸ್ವಾರ್ಥದಿಂದ ಮುಕ್ತನಾದವನು ಯಾರೂ ಇಲ್ಲ. ಸಮಾಜದಲ್ಲಿ ಕಾನೂನು ವ್ಯವಸ್ಥೆಗಳು ನ್ಯಾಯನೀತಿ, ಶಿಸ್ತುಗಳನ್ನು ನಿರ್ಧರಿಸುವುದು ಪುರಾವೆಯೆಂದಾದರೆ, ಆತನ ಇಚ್ಛೆ ಹೆಚ್ಚು ಪ್ರಾಧಾನ್ಯತೆ ಲಭಿಸುತ್ತದೆ. ಸ್ತ್ರೀಯರೆಂದಾದರೆ ಅದಕ್ಕೆ ವಿರುದ್ಧವಾಗಿರುತ್ತದೆ. ಕರಿಯ ವರ್ಣದವರು ನಿರ್ಮಿಸುವ ಕಾನೂನು ನಿಯಮಗಳು ಅವರಿಗೆ ಅನುಕೂಲನಾಗಿರುತ್ತದೆ ಬಿಳಿಯರು ಅವರ ಹಿತಾಸಕ್ತಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡುತ್ತಾರೆ. ಯಜಮಾನ-ಕಾರ್ಮಿಕ ವಿಚಾರವು ಇದಕ್ಕಿಂತ ಭಿನ್ನವಲ್ಲ. ಪ್ರತಿಯೊಂದು ದೇಶದ, ರಾಜ್ಯದ ಜನತೆಯೂ ತಮ್ಮಿಚ್ಛೆಗೆ ಹೆಚ್ಚಿ ಪ್ರಾಮುಖ್ಯತೆ ನೀಡುತ್ತಾರೆ. ದೇಶೀಯ ವಾದದ ತಳಹದಿಯೂ ಅದೇ ಆಗಿದೆ. ನಿಕೋಲೆ ಮಾಕ್ಯವಲ್ಲಿ ಹೇಳುತ್ತಾರೆ, 'ಒಳಿತೆಂಬುದು ಹೆಸರು ಮಾತ್ರ, ವಾಸ್ತವದಲ್ಲಿ ಕೆಡುಕುಗಳೇ ಇವೆ ಆದ್ದರಿಂದ ದೇಶವನ್ನು ಬಲಗೊಳಿಸಬೇಕೆಂಬ ಬಯಕೆಯಿರುವ ಯಾವುದೇ ಆಡಳಿತಗಾರನ ಕೆಡುಕು ಮಾಡುವುದು ಹೇಗೆಂದು ಚೆನ್ನಾಗಿ ತಿಳಿದಿರಬೇಕು.'

ವೇಯಿನ್‌ಫ್ಲೆಗ್ಲ್‌ರ ನಿಲುವು ಅದೇ ಆಗಿತ್ತು. ಸನ್ಮಾರ್ಗಿಯಾದ ಓರ್ವರಿಗೆ ರಾಷ್ಟ್ರವನ್ನು ಮುನ್ನಡೆಸಲು ಸಾಧ್ಯವಿಲ್ಲ, ಏಕೆಂದರೆ ರಾಷ್ಟ್ರದ ರಕ್ಷಣೆಗಾಗಿ ಮಾಡಬೇಕಾದ ಲೌಕಿಕ ಕಾರ್ಯಗಳನ್ನು ಓರ್ವ ಸನ್ಮಾರ್ಗಿಗೆ ಮಾಡಲು ಸಾಧ್ಯವಿಲ್ಲ. ದೇಶ ಹಿತಕ್ಕಾಗಿ ಆಡಳಿತಗಾರನು ಯಾವುದೇ ಕಾರ್ಯವನ್ನು ಮಾಡಲು ಸಿದ್ಧನಿರಬೇಕು. ಒಳಿತು ಕೆಡುಕುಗಳ ಕುರಿತು ಚಿಂತಿಸುವ ಸನ್ಮಾರ್ಗಿಗೆ ಅದು ಅಸಾಧ್ಯ.

ಯಾವುದೇ ರೀತಿಯ ಸ್ವಾರ್ಥ ಇಲ್ಲದವರು ಇರುವುದಿಲ್ಲ. ಆದ್ದರಿಂದ ಅವರು ರೂಪಕೊಡುವ ಕಾನೂನುವ್ಯವಸ್ಥೆಯಲ್ಲೂ ಅದು ಪ್ರಭಾವ ಬೀರುತ್ತದೆ. ಇಡೀ ಲೋಕವನ್ನೂ ಅದರಲ್ಲಿರುವ ಮನುಷ್ಯವರ್ಗವನ್ನೂ ಒಂದೇ ರೀತಿಯಲ್ಲಿ ಕಾಣಲು ಅವುಗಳ ಸೃಷ್ಟಿಕರ್ತ ಹಾಗೂ ಸಂರಕ್ಷಕನಾದ ದೇವನಿಗೆ ಮಾತ್ರ ಸಾಧ್ಯ. ಎಲ್ಲ ಕಾಲ, ದೇಶಗಳ ಮನುಷ್ಯರಿಗೆ ನ್ಯಾಯ ವ್ಯವಸ್ಥೆಯನ್ನು ನೀಡಬೇಕಾದದ್ದು ಅವನೇ. ದೇವನ ಸನ್ಮಾರ್ಗದ ಸಂದೇಶ ಲಭಿಸದೆ ಕೇವಲ ಆತ್ಮಸಾಕ್ಷಿಯ ಆಧಾರದಲ್ಲಿ ಸ್ವಸ್ಥ ಜೀವನ ನಡೆಸಲು ಸಾಧ್ಯವಿಲ್ಲ ಎಂದು ಹೇಳಲು ಕಾರಣವು ಇದೇ ಆಗಿದೆ. ತನ್ನ ಸಂದೇಶವಾಹಕರಾದ ಪ್ರವಾದಿಗಳ ಮೂಲಕ ಸರ್ವಶಕ್ತನು ಜೀವನ ವ್ಯವಸ್ಥೆಯನ್ನು ನಮಗೆ ತಲುಪಿಸಿದ್ದಾನೆ. ವ್ಯಕ್ತಿ, ಕುಟುಂಬ, ಸಮೂಹ, ರಾಷ್ಟ್ರ ಹಾಗೂ ವಿಶ್ವದ ಅಸ್ತಿತ್ವವೂ ಅದೇ ಆಧಾರದಲ್ಲಿ ಆಗಬೇಕೆಂದು ಧರ್ಮವು ಕಲಿಸುತ್ತದೆ.

## 16 ಶ್ರೀರಾಮ ಮತ್ತು ಶ್ರೀಕೃಷ್ಣ ಪ್ರವಾದಿಗಳಾಗಿದ್ದರೇ?

**ದೇವಸಂದೇಶವು ಈ ಕಾಲದಲ್ಲೂ ಲಭಿಸುತ್ತಿದೆಯೇ? ದೀರ್ಘಕಾಲದ ತಪಸ್ಸಿನ ಮೂಲಕ ದಿವ್ಯಜ್ಞಾನ ಪಡೆಯಲು ಸಾಧ್ಯ ಹಾಗಾದರೆ ಅದು ಈಗಲೂ ಸಾಧ್ಯವಿಲ್ಲವೇ?**

ದಿವ್ಯ ಸಂದೇಶಗಳನ್ನು ಇಂದ್ರಿಯಗಳಿಂದ ಗ್ರಹಿಸಲು ಅಥವಾ ಧ್ಯಾನದ ಮೂಲಕ ಗಳಿಸಲು ಸಾಧ್ಯವಿಲ್ಲ, ಇದು ಓರ್ವನ ಆಗ್ರಹ ಅಥವಾ ಆಶೆಯಿಂದ ಲಭಿಸುವಂತಹದಲ್ಲ, ಎಲ್ಲಾ ರೀತಿಯ ಲೌಕಿಕ ಚರ್ಚೆಗಳನ್ನು ಮೀರಿನಿಂತ ಅತ್ಯಂತ ಸೂಕ್ಷ್ಮವಾದ ಒಂದು ವಿಸ್ಮಯವಾಗಿದೆ. ದಿವ್ಯಸಂದೇಶವನ್ನು ಅದರೊಂದಿಗೆ ಹೋಲಿಸಬಹುದಾದರೂ ಪ್ರವಾದಿಗಳಿಗೆ ಲಭಿಸುವ ದಿವ್ಯಸಂದೇಶವು ಎಂದೂ ಮಿಥ್ಯವಾಗಲು ಸಾಧ್ಯವಿಲ್ಲ, ಅದು ಎಲ್ಲ ದೌರ್ಬಲ್ಯಗಳಿಂದಲೂ ಮುಕ್ತವಾಗಿದೆ. ಪ್ರವಾದಿತ್ವವು ದೇವನ ಕೊಡುಗೆಯಾಗಿದೆ. ಅವನು ತನ್ನಿಚ್ಛೆ ಪ್ರಕಾರ ಸಂದೇಶವಾಹಕರನ್ನು ಆಯ್ದುಕೊಳ್ಳುತ್ತಾನೆ. ಅವರನ್ನು ಮಾನವ ಸಮಾಜದ ಮಾರ್ಗದರ್ಶಕರಾಗಿ ನಿಯೋಜಿಸಲಾಗುತ್ತದೆ. ಅದರಲ್ಲಿ ಮಾನವನ ಇಚ್ಛೆ ಅಥವಾ ಪ್ರಯತ್ನಕ್ಕೆ ಯಾವುದೇ ಪಾತ್ರವಿರುವುದಿಲ್ಲ, ಅಲ್ಲಾಹನು ಹೇಳುತ್ತಾನೆ: **''ನಿಮ್ಮ ಮೇಲೆ ಗ್ರಂಥವು ಇಳಿಸಲ್ಪಡುವುದೆಂದು ನೀವು ಖಂಡಿತ ನಿರೀಕ್ಷಿಸಿರಲಿಲ್ಲ, ಇದು ಕೇವಲ ನಿಮ್ಮ ಪ್ರಭುವಿನ ಕೃಪೆಯಿಂದ (ನಿಮ್ಮ ಮೇಲೆ ಅವತೀರ್ಣಗೊಂಡಿದೆ) ಆದ್ದರಿಂದ ನೀವು ಸತ್ಯನಿಷೇಧಿಗಳ ಸಹಕಾರಿಗಳಾಗಬೇಡಿರಿ.''**

(ಪವಿತ್ರ ಕುರ್‌ಆನ್ 28: 86)

**''ಇದು ಆತನ ಅನುಗ್ರಹ. ಇದನ್ನು ಅವನು ತಾನಿಚ್ಛಿಸಿದವರಿಗೆ ನೀಡುತ್ತಾನೆ ಮತ್ತು ಅವನು ಮಹಾ ಅನುಗ್ರಹದಾನಿ.''** (ಪವಿತ್ರ ಕುರ್‌ಆನ್ 62: 4)

ದಿವ್ಯ ಸಂದೇಶವೆನೆಂದು ಅಥವಾ ದೇವಗ್ರಂಥವೇನೆಂದು ಮುಹಮ್ಮದ್(ಸ) ರಿಗೆ ಮೊದಲು ತಿಳಿದಿರಲಿಲ್ಲ ಎಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸುತ್ತದೆ: **''ನಾವು ನಮ್ಮ ಅಪ್ಪಣೆಯಿಂದ ಒಂದು ರೂಹನ್ನು ನಿಮ್ಮ ಕಡೆಗೆ ವಹ್ಯ್ ಮಾಡಿರುತ್ತೇವೆ. ಗ್ರಂಥವೆಂದರೆ ಏನೆಂದು ಸತ್ಯವಿಶ್ವಾಸ ಎಂದರೆ ಏನೆಂದು ನಿಮಗೆ ಗೊತ್ತಿರಲಿಲ್ಲ, ಆದರೆ ಆ ರೂಹನ್ನು ನಾವು ಒಂದು ಪ್ರಕಾಶವಾಗಿ ಮಾಡಿದೆವು. ಆ ಮೂಲಕ ನಾವು ನಮ್ಮ ದಾಸರ ಪೈಕಿ ನಾವಿಚ್ಛಿಸುವವರಿಗೆ ದಾರಿ ತೋರಿಸುತ್ತೇವೆ.''** (ಪವಿತ್ರ ಕುರ್‌ಆನ್ 42:52)

## ಪ್ರವಾದಿ ಮುಹಮ್ಮದ(ಸ)ರ ಹಿರಾವಾಸದ ಕಾರಣವೇನು?

ಮುಹಮ್ಮದ್(ಸ)ರು ಪ್ರವಾದಿತ್ವಕ್ಕೆ ಮುಂಚೆ ಹಿರಾಗುಹೆಯಲ್ಲಿ ಏಕಾಂಗಿಯಾಗಿ ಧ್ಯಾನನಿರತರಾಗಲು ಕಾರಣವೇನು?

ದಿವ್ಯ ಸಂದೇಶವನ್ನು ಪಡೆಯುವ ವ್ಯಕ್ತಿಯು ಅದಕ್ಕೆ ಅರ್ಹನಾಗಿರಬೇಡವೇ? ಆತ ಸಜ್ಜನನೂ ಸಚ್ಚಾರಿತ್ರ್ಯವಂತನೂ ಆಗಿರಬೇಕು. ಬೇರೆ ಎಲ್ಲಾ ಪ್ರವಾದಿಗಳಂತೆ ಪ್ರವಾದಿ ಮುಹಮ್ಮದ್(ಸ)ರನ್ನು ದಿವ್ಯ ಸಂದೇಶವನ್ನು ವಹಿಸಲು ಅರ್ಹನಾಗಿರುವ ರೀತಿಯಲ್ಲಿ ಬೆಳೆಸಲಾಗಿತ್ತು. ಅವರು ಅಗತ್ಯವಾದ ಎಲ್ಲಾ ಯೋಗ್ಯತೆಗಳಿಂದಲೂ ಅನುಗ್ರಹಿಸಲ್ಪಟ್ಟಿದ್ದರು. ಆದ್ದರಿಂದ ಸುಳ್ಳು, ಮೋಸ, ವಂಚನೆಯು ಸೋಂಕದಂತೆ ಪರಿಶುದ್ಧರಾಗಿ ಅವರು ಬೆಳೆದು ಬಂದರು. ಸತ್ಯಸಂಧ, ಪ್ರಾಮಾಣಿಕನೆಂದು ಸಮಾಜದಲ್ಲಿ ಹೊಗಳಲ್ಪಡುವ ವ್ಯಕ್ತಿತ್ವವಾಗಿದ್ದರು. 40 ವರ್ಷವಾಗುವಾಗ ದೇವನ ಒಳಕರೆಯನ್ನು ಸ್ವೀಕರಿಸಿ, ಕೆಡುಕು ತುಂಬಿದ ಸಮಾಜದಿಂದ ದೂರವಾಗಿ ಹಿರಾಗುಹೆಯಲ್ಲಿ ಏಕಾಂತವಾಸ ಮಾಡಿದರು. ಪ್ರವಾದಿತ್ವಕ್ಕೆ ಅಗತ್ಯವಾದ ಪರಿಪೂರ್ಣತೆಯನ್ನುಗಳಿಸಿದರು ಅಥವಾ ಅಲ್ಲಾಹನು ಅಂತ್ಯ ಸಂದೇಶವಾಹಕರಾಗಿ ಆರಿಸಿರುವ ವ್ಯಕ್ತಿಯನ್ನು ಅವನು ಅದಕ್ಕೆ ಅರ್ಹನಾಗಿಸಿದನು. ಹಿರಾಗುಹೆಯ ಧ್ಯಾನಭರಿತ ದಿನಗಳು ಅದರ ಒಂದು ಭಾಗವಾಗಿತ್ತು.

## ಸಂದೇಶವಾಹಕರೆಂದು ಗುರುತಿಸಲ್ಪಡುವುದು ಹೇಗೆ?

ಸಂದೇಶವಾಹಕರು ಸಮಕಾಲೀನ ಸಮೂಹದ ಸತ್ಯಸಂಧನಾದ ಯಾವುದೇ ವ್ಯಕ್ತಿಯೂ ಗುರುತಿಸಲು ಸಾಧ್ಯವಾಗುವಂತಹ ವ್ಯಕ್ತಿತ್ವದವರಾಗಿರುತ್ತಾರೆ. ಅವರು ಪರಿಶುದ್ಧರಾಗಿರುತ್ತಾರೆ. ಜೀವನದಲ್ಲಿ ಸುಳ್ಳು, ಅಸಭ್ಯ, ದುಷ್ಕೃತ್ಯಗಳು, ಸಂದೇಶವಾಹಕರಲ್ಲಿ ಸಂಭವಿಸುವುದಿಲ್ಲ. ಸತ್ಯ, ನ್ಯಾಯ, ಸತ್ಕರ್ಮವನ್ನು ಇತರರಿಗೆ ಉಪದೇಶಿಸುವುದರೊಂದಿಗೆ ಸ್ವತಃ ಅನುಸರಿಸುತ್ತಾರೆ. ಅವರು ತಮ್ಮ ಮಾತಿಗೆ ವಿರುದ್ಧವಾದ ವರ್ತನೆ ತೋರಿದ ಉದಾಹರಣೆಯಿಲ್ಲ. ಯಾವಾಗಲು ಸತ್ಯನಿಷ್ಠೆ, ಸ್ತುತ್ಯರ್ಹ, ಸಂಶಯರಹಿತ ಮಾರ್ಗವನ್ನು ಅವಲಂಬಿಸುತ್ತಾರೆ. ಎಲ್ಲ ರೀತಿಯ ಸ್ವಾರ್ಥತೆಯಿಂದ ಮುಕ್ತರಾಗಿರುತ್ತಾರೆ. ಯಾರನ್ನೂ ವಂಚಿಸದ, ಹಕ್ಕನ್ನು ಕಸಿದುಕೊಳ್ಳದ ಮಹಾನ್ ವ್ಯಕ್ತಿಗಳಾಗಿದ್ದಾರೆ. ಯಾರು ಎಷ್ಟೇ ಪ್ರಯತ್ನಿಸಿದರೂ ದೇವಸಂದೇಶವಾಹಕರ ಬದುಕಿನಲ್ಲಿ ನ್ಯೂನ್ಯತೆ ಗೋಚರಿಸಲು ಸಾಧ್ಯವಿಲ್ಲ.

ಕವಿಗಳನ್ನು ಅವರ ಕವಿತೆಗಳಿಂದಲೂ, ಕಲಾಕಾರರನ್ನು ಅವರ ಚಿತ್ರಗಳಿಂದಲೂ ಗುರುತಿಸುವಂತೆ ಸಮಾಜವು ಪ್ರವಾದಿಗಳನ್ನು ಅವರಿಗೆ ಅವತೀರ್ಣವಾಗುವ ಬೋಧನೆಗಳಿಂದ ಮನವರಿಕೆ ಮಾಡುತ್ತದೆ. ಇತರರು ಊಹಿಸಲಸಾಧ್ಯ ಕಾರ್ಯಗಳು ದೇವಸಂದೇಶವಾಹಕರ ಮನದಲ್ಲಿ ಮೂಡುತ್ತದೆ. ಅದು ಸತ್ಯವೆಂದು ಜನರಿಗೆ ಅರ್ಥವೂ ಆಗುತ್ತದೆ. ಹೀಗೆ ಎಲ್ಲಾ ಸಂದೇಶವಾಹಕರು ತಮ್ಮ ಸಮೂಹದ ಎಲ್ಲಾ ಸನ್ಮನಸ್ಸುಗಳಿಂದ ಗುರುತಿಸಲ್ಪಡುತ್ತಾರೆ.

## ಶ್ರೀರಾಮ ಹಾಗೂ ಶ್ರೀಕೃಷ್ಣ

ಈ ಮಾನದಂಡದ ಆಧಾರದಂತೆ ಇಸ್ಲಾಮೀ ದೃಷ್ಟಿಕೋನದಲ್ಲಿ ಶ್ರೀರಾಮ ಹಾಗೂ ಶ್ರೀಕೃಷ್ಣ ಪ್ರವಾದಿಗಳಾಗಿದ್ದರೇ? ಸಂದೇಶವಾಹಕರು ಆಗಮಿಸದ ಯಾವುದೇ ಜನಾಂಗವು ಗತಿಸಿಹೋಗಿಲ್ಲವೆಂದು ಇಸ್ಲಾಮ್ ಸ್ಪಷ್ಟವಾಗಿ ಹೇಳುತ್ತದೆ. ಪವಿತ್ರಕುರ್‌ಆನ್‌ನಲ್ಲಿ ಅಲ್ಲಾಹನು ಹೇಳುತ್ತಾನೆ. ''ಎಲ್ಲಾ ಸಮುದಾಯಗಳಿಗೂ ನಾವು ಸಂದೇಶವಾಹಕರನ್ನು ನಿಯೋಗಿಸಿ ದ್ದೇವೆ.' (ಪವಿತ್ರ ಕುರ್‌ಆನ್16:36) **ನಾವು ನಿಮ್ಮನ್ನು ಸುವಾರ್ತೆ ಮತ್ತು ಎಚ್ಚರಿಕೆ ನೀಡುವವರಾಗಿ ಸತ್ಯಸಹಿತ ಕಳುಹಿಸಿರುತ್ತೇವೆ. ಎಚ್ಚರಿಕೆ ಕೊಡುವವರಾರೂ ಬಂದಿರದಂತಹ ಸಮುದಾಯವೊಂದು ಗತಿಸಿಲ್ಲ.** (ಪವಿತ್ರ ಕುರ್‌ಆನ್ 35:24)

ಸಾವಿರಾರು ವರ್ಷಗಳ ಇತಿಹಾಸವಿರುವ ಭಾರತದಲ್ಲಿಸಂದೇಶವಾಹಕರು ಆಗಮಿಸಿದ್ದರು ಮತ್ತು ದೇವಸಂದೇಶವು ಅವತೀರ್ಣಗೊಂಡಿದೆಯೆಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ ಆ ಪ್ರವಾದಿಗಳು ಯಾರೆಂದು ತಿಳಿಯಲು ಸಾಧ್ಯವಾಗುವಂತಹ ಯಾವುದೇ ಸಾಕ್ಷ್ಯಾಧಾರಗಳು ಲಭ್ಯವಿಲ್ಲ. ನಮ್ಮ ದೇಶದ ಪೂರ್ವಿಕರಿಗೆ, ಮಹಾಪುರುಷರಿಗೆ ಸಂಬಂಧಿಸಿ ನಂಬಲು ಸಾಧ್ಯವಾಗದಂತಹ, ಅತಿಶಯೋಕ್ತಿಯೆನಿಸುವ, ಹಲವಾರು ವರ್ಣನೆಗಳು ಮಾತ್ರ ಇವೆ. ಸತ್ಯಾಸತ್ಯತೆಯನ್ನು ಬೇರ್ಪಡಿಸಲಾಗದ ರೀತಿಯಲ್ಲಿ ಅವು ಬಹಳ ಸಂಕೀರ್ಣತೆಯಿಂದ ಕೂಡಿದೆ. ಶ್ರೀರಾಮ, ಶ್ರೀಕೃಷ್ಣಹಾಗೂ ಬುದ್ಧರ ಚರಿತ್ರೆಯೂ ಇದಕ್ಕಿಂತ ಭಿನ್ನವಲ್ಲ. ಅವರ ಕುರಿತು ಹೇಳಲಾಗುವ ವಿಷಯಗಳು ಸತ್ಯವಾಗುವ ಸಾಧ್ಯತೆಯಿಲ್ಲ. ಆದ್ದರಿಂದ ಈಗಿರುವ ನಂಬಿಕೆ ಹಾಗೂ ಐತಿಹ್ಯವನ್ನು ಅವಲಂಬಿಸಿ ಅವರು ಪ್ರವಾದಿಯೋ ಅಲ್ಲವೋ ಎಂದು ನಿರ್ಧರಿಸಲು ಸಾಧ್ಯವಿಲ್ಲ. ಆದರೆ, ಆ ಸಾಧ್ಯತೆಯನ್ನು ಸಂಪೂರ್ಣ ತಳ್ಳಿಹಾಕುವಂತಿಲ್ಲ. ನಮ್ಮ ದೇಶದ ಪೂರ್ವಿಕರಾದ ಮಹಾನ್ ವ್ಯಕ್ತಿಗಳ ನೈಜ ಚರಿತ್ರೆಯನ್ನು ಅನುಯಾಯಿಗಳು ಹಾಗೂ ಎದುರಾಳಿಗಳ ಕಪೋಲಕಲ್ಪಿತ ಕಥೆಗಳಿಂದ ದೂರವಾಗಿ ತೆರೆದಿಡಲು ಏನಾದರೂ ದಾರಿಯಿದೆಯೆಂದಾದರೆ ಅದು ದೊಡ್ಡ ವಿಜಯವಾಗಿರುತ್ತದೆ. ಸತ್ಯನಿಷ್ಠೆ ಹಾಗೂ ನಿಷ್ಪಕ್ಷವಾದ ಅಧ್ಯಯನಗಳಿಂದ ಅವರ ನೈಜ ಜೀವನವು ಬಹಿರಂಗವಾಗಿ ಅವರು ದೇವಪ್ರವಾದಿಯಾಗಿದ್ದರೆಂದು ಮನದಟ್ಟಾದರೆ ಅದರಿಂದ ಈ ದೇಶದಲ್ಲಿ ಹೆಚ್ಚಿನ ಸಂತೋಷ ಮುಸ್ಲಿಮರಿಗೆ ದೊರೆಯುತ್ತದೆ. ಏನಿದ್ದರೂ ಅಂತಹ ಒಂದು ಸಂಶೋಧನೆ ಅತಿ ಅಗತ್ಯವೆಂಬುದರಲ್ಲಿ ಸಂಶಯವಿಲ್ಲ.

## 17 ಪ್ರವಾದಿ ಮುಹಮ್ಮದ್(ಸ) ಮತ್ತು ವಿಗ್ರಹ ಧ್ವಂಸ

**'ಅಲ್ಲಾಹ್' ಎಂದು ಕರೆಯಲು ಕಾರಣವೇನು?**

**ಮುಸ್ಲಿಮರು ಸೃಷ್ಟಿಕರ್ತನನ್ನು ಅನ್ಯಭಾಷೆಯಾದ ಅರಬಿಯಲ್ಲಿ 'ಅಲ್ಲಾಹ್' ಎಂದು ಸಂಬೋಧಿಸುವುದು ಏಕೆ? ಪ್ರತಿಯೊಬ್ಬರೂ ಅವರ ಮಾತೃಭಾಷೆಯಲ್ಲಿ ಸೂಕ್ತ ಹೆಸರು ನೀಡಿದರೆ ಸಾಲದೆ ?** (ಉದಾಹರಣೆಗೆ ನಾವು ದೇವರು, ಈಶ್ವರ ಎಂದು ಹೇಳುತ್ತೇವೆ.)

ಇಡೀ ಪ್ರಪಂಚವನ್ನೂ ಅದರಲ್ಲಿರುವ ಸಕಲವನ್ನೂ ಸೃಷ್ಟಿಸಿ,ಪರಿಪಾಲಿಸುತ್ತಿರುವ ಶಕ್ತಿಯ ಹೆಸರು 'ಅಲ್ಲಾಹ್' ಎಂದಾಗಿದೆ. ದೇವರು, ಈಶ್ವರ, ಗಾಡ್, ಸೃಷ್ಟಿಕರ್ತ, ಖುದಾ ಮೊದಲಾದ ಹೆಸರುಗಳನ್ನು ಸೃಷ್ಟಿಕರ್ತನನ್ನು ಪರಿಚಯಿಸಲು ಉಪಯೋಗಿಸಬಹುದು. ಆದರೆ ಏಕನೂ ನಿರಾಕಾರನೂ ಆದ ಶಕ್ತಿಯನ್ನು ಪ್ರತಿನಿಧಿಸಲು ಅತ್ಯಂತ ಸೂಕ್ತವಾದ ಪದ ಅಲ್ಲಾಹ್ ಎಂದಾಗಿದೆ. ಅರಬಿ ಭಾಷೆಯಲ್ಲಿ ಈ ಪದಕ್ಕೆ ಬಹುವಚನವೋ, ಲಿಂಗಭೇದವೋ ಇಲ್ಲ, ಆದ್ದರಿಂದ 'ಅಲ್ಲಾಹ್' ಎಂಬ ಪದಕ್ಕೆ ಸರಿಸಮಾನವಾದ ಅನುವಾದ ವಿಶ್ವದ ಯಾವ ಭಾಷೆಯಲ್ಲೂ ಇಲ್ಲ, ದೇವರು, ಗಾಡ್, ಖುದಾ ಎಂಬವುಗಳೆಲ್ಲಾ ಅರಬಿಯ ಇಲಾಹ್ ಎಂಬ ಪದದ ಭಾವಾರ್ಥವಾಗಿದೆ. ಬದಲಾಗಿ ಅದು ಅಲ್ಲಾಹ್ ಎಂಬ ಪದದ ಭಾಷಾರ್ಥವಲ್ಲ, ದೇವ ಎಂಬ ಪದಕ್ಕೆ ದೇವರು ದೇವಿ ಎಂದೂ, ಗೋಡ್, ಗೋಡಸ್ಎಂಬೆಲ್ಲಾ ಪ್ರಯೋಗ ಸಾಧ್ಯವಿದೆಯಲ್ಲವೇ? ದೇವ, ಈಶ್ವರ, ಗಾಡ್, ಖುದಾಗಳಿಗೆ 'ಅಲ್ಲಾಹ್' ಎಂಬ ಪದದಂತೆ ಗೌರವ ಖಂಡಿತ ಲಭಿಸುವುದಿಲ್ಲ, ಕೋಟಿಗಳ ಒಡೆಯನನ್ನು ಕೋಟೀಶ್ವರನೆಂದು ' ಗಾಡ್ ಆಫ್ ಸ್ಮೋತ್ ಕಿಂಗ್ಸ್' ಎಂದೆಲ್ಲಾ ನಾವು ಸುಲಭವಾಗಿ ಹೇಳಿಬಿಡುತ್ತೇವೆ. ಅಲ್ಲಾಹ್ ಎಂಬುದು ಇಂತಹ ಎಲ್ಲ ಪದ ಪ್ರಯೋಗಗಳಿಗೂ, ವಚನ,ಲಿಂಗ ಬದಲಾವಣೆಗೂ ಅತೀತವಾದ ನಾಮ ಪದವಾಗಿದೆ. ಆದ್ದರಿಂದ ಸೃಷ್ಟಿಕರ್ತನ ವಿಶೇಷತೆಗಳನ್ನು ನೇರವಾಗಿ ಪ್ರತಿನಿಧಿಸಲು ಅತ್ಯಂತ ಸೂಕ್ತ ಹೆಸರು ಇದುವೇ ಆಗಿದೆ. ಆದ್ದರಿಂದ ವಿಶ್ವದ ಜನತೆಗೆ ಸೃಷ್ಟಿಕರ್ತನನ್ನು ಪರಿಚಯಿಸಲು ಅಲ್ಲಾಹ್ ಎಂಬ ಹೆಸರನ್ನು ಸೂಚಿಸಲಾಗಿದೆ. ಅಂತ್ಯ ಪ್ರವಾದಿಯ ಮೂಲಕ ಈ ಹೆಸರನ್ನು ನಿಶ್ಚಯಿಸಲಾಗಿದೆ. ಅದರೊಂದಿಗೆ ನಿಶ್ಚಿತ, ಆರಾಧನಾ ಕರ್ಮಗಳನ್ನು ಹೊರತು ಪಡಿಸಿ, ಸೃಷ್ಟಿಕರ್ತನನ್ನು ಪರಿಚಯಿಸಲು, ಅಭಿಸಂಬೋದಿಸಲು 'ಅಲ್ಲಾಹ್' ಎಂಬ ಪದವೇ ಆಗಬೇಕೆಂದಿಲ್ಲ, ಅದನ್ನು ಪ್ರಾದೇಶಿಕ ಭಾಷೆಯಲ್ಲೋ ಇತರ ಭಾಷೆಗಳಲ್ಲೋ ಪ್ರಯೋಗಿಸಬಹುದು.

## ವಿಗ್ರಹ ಧ್ವಂಸ

ಭಾರತದ ಹಿಂದೂಗಳಂತೆ ಮಕ್ಕಾದ ಅರಬರು ವಿಗ್ರಹಾರಾಧಕರಾಗಿದ್ದರು. ಕಅಬಾದಲ್ಲಿ ನೂರಾರು ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿತ್ತು. ಮುಹಮ್ಮದ್(ಸ)ರಿಗೆ ಅಧಿಕಾರ ದೊರೆತಾಗ ಬಲಪ್ರಯೋಗದಿಂದ ವಿಗ್ರಹಗಳನ್ನು ಧ್ವಂಸಗೊಳಿಸಲಾಯಿತು. ಇದರ ಕುರಿತು ಏನೆನ್ನುತ್ತೀರಿ ?

ವಿಶ್ವದಲ್ಲಿ ಯಾವುದೇ ಧರ್ಮ ಬಹುದೇವಾರಾಧನೆಯನ್ನು ಅಂಗೀಕರಿಸಿಲ್ಲ. ವಿಗ್ರಹಾರಾಧನೆಯನ್ನು ಆದೇಶಿಸಲೂ ಇಲ್ಲ. ಹಿಂದೂ ಧರ್ಮದ ಸ್ಥಿತಿಯೂ ಇದಕ್ಕಿಂತ ಭಿನ್ನವಾಗಿಲ್ಲ. ಹಿಂದುಗಳು ಮೊದಲು ವಿಗ್ರಹಗಳನ್ನು ಆರಾಧಿಸುತ್ತಿರಲಿಲ್ಲ. ಕಾಲ ಕ್ರಮೇಣ ಅದು ಅವರಲ್ಲಿ ಸೇರಿಕೊಂಡ ಅನಾಚಾರವಾಗಿದೆ. ಪ್ರಮುಖ ಪಂಡಿತರು, ಹಿಂದೂ ಪುನರುತ್ಥಾನವಾದಿಗಳು ಇದನ್ನು ಬಹಳ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಶ್ರೀ ದಯಾನಂದ ಸರಸ್ವತಿಯವರ ನಿಲುವನ್ನು ಕೆ. ಗೋಕುಲಾನಂದನ್ ಹೀಗೆ ವಿವರಿಸುತ್ತಾರೆ: ಈಶ್ವರನಿಂದ ಭಿನ್ನವಾದ ಪದಾರ್ಥಗಳನ್ನು ಪೂಜಿಸುವುದರ ಪ್ರತಿಫಲವು ದುಃಖವಾಗಿರುತ್ತದೆ. ಈಶ್ವರನಿಗೆ ಹಲವು ನಾಮಗಳಿವೆ. ಆದರೆ ಅವೆಲ್ಲಾ ಒಂದೇ ಶಕ್ತಿಯ ಪರ್ಯಾಯವಾಗಿದೆ. ಈಶ್ವರನು ಸರ್ವವ್ಯಾಪಿಯೂ, ಸ್ವಯಂಭುವೂ ಅನಾದಿಯೂ, ಅನಂತವೂ ಆಗಿದ್ದಾನೆ. 'ಅಜ ಏಕ ಪಾತ್' (ಯಜುರ್ 34-53) 'ಸಪರ್ಯಗಾಯ್‌ಚೃಶ್ರಮಕಾಯ್‌ಮ' (ಯಜುರ್ 40-8) ಎಂಬ ಯಜುರ್ವೇದದ ವಚನಗಳಿಂದ ಈಶ್ವರನು ಜನ್ಮ ತಾಳುವುದಿಲ್ಲವೆಂಬುದು ಸ್ಪಷ್ಟವಾಗುತ್ತಿದೆಯೆಂದು ಎತ್ತಿ ತೋರಿಸಿದರು. ಆದ್ದರಿಂದ ಅವತಾರವೆಂಬ ನಂಬಿಕೆಯೂ, ಅದರ ಆಧಾರದಲ್ಲಿ ವೈಷ್ಣವರು ಪ್ರಚುರಪಡಿಸುವ ಅವತಾರ ಕಥೆಗಳೂ ಕಟ್ಟುಕಥೆಗಳಾಗಿವೆ. ಆದ್ದರಿಂದ ಗೀತೆ 4-7 ರ:

**ಯದಾ ಯದಾ ಹಿ ಧರ್ಮಸ್ಯ**
**ಗ್ಲಾನಿರ್ಭವತಿ ಭಾರತ !**
**ಅಭ್ಯುತ್ಥಾನ ಮಧರ್ಮಹಸ್ಯ**
**ತದಾತ್ಮನಂ ಸೃಜಾಮ್ಯೆಹಂ**

ಎಂಬ ವಚನವು ಸ್ವೀಕರಾರ್ಹವಲ್ಲ. ಅಸಂಖ್ಯಾತ ಸದ್ಗುಣ ಸಂಪನ್ನತೆಯ ಸ್ವಭಾವಗಳಿರುವ ಈಶ್ವರನು ಕಂಸ ರಾವಣರನ್ನು ಕೊಲ್ಲಲು ಅವತರಿಸಬೇಕಾದ ಅಗತ್ಯವಿಲ್ಲ. ಈಶ್ವರನು ಅತ್ಯಂತ ನೀಚ ವ್ಯಕ್ತಿಯನ್ನು ಕೊಲ್ಲಲು ಹುಟ್ಟು ಸಾವನ್ನು ಸ್ವೀಕರಿಸುತ್ತಾನೆಂಬ ವಿಶ್ವಾಸ ಮೂರ್ಖತನದ್ದಾಗಿದೆ. 'ತಂದೆತಾಯಿಗಳು ಆಚಾರ್ಯರು, ಅತಿಥಿಗಳ ಸೇವೆ ಮಾಡುವುದೇ ದೇವ ಪೂಜೆ ಬದಲಾಗಿ ಶಿಲೆಗಳನ್ನು ಪೂಜಿಸುವುದಲ್ಲ.'

ಮಹಾಭಾರತದ 4400 ಶ್ಲೋಕಗಳನ್ನು ವ್ಯಾಸರು ರಚಿಸಿದ್ದಾರೆ. ಶಿಷ್ಯರು 5600 ಶ್ಲೋಕಗಳನ್ನು ಸೇರಿಸಿದರು. ಒಟ್ಟು 4000 ಶ್ಲೋಕಗಳು ನೈಜ ಮಹಾಭಾರತದಲ್ಲದೆ ಉಳಿದವುಗಳು ಹಲವು ಕಾಲಗಳಲ್ಲಿ ಸೇರಿಸಲಾಗಿದೆ. ಜ್ಯೋತಿಷಿಗಳು, ಮಂತ್ರವಾದಿಗಳು

ಮೂಢರನ್ನು ವಂಚಿಸುತ್ತಾರೆ. ಜ್ಯೋತಿರ್ಗೋಳಗಳೆಂದರೆ ಅಚೇತನ ವಸ್ತುಗಳು. ಅವುಗಳು ಕೋಪಿಸುವುದೂ, ದುಃಖಿಸುವುದೂ ಇಲ್ಲ. ಗ್ರಹ, ನಕ್ಷತ್ರ, ಜಾತಕ, ರಾಶಿ, ಮುಹೂರ್ತಗಳನ್ನು ನೋಡಿ ಫಲಗಳನ್ನು ಹೇಳುವವರು ವಂಚಕರು. ಇಂತಹವರು ಗಣಿತಶಾಸ್ತ್ರ ಹಾಗು ಜ್ಯೋತಿಷ್ಯ ಶಾಸ್ತ್ರವನ್ನು ಮರೆಯಾಗಿಸಿ ವಂಚಿಸುತ್ತಿದ್ದಾರೆ. ಮಾಟ, ಮಂತ್ರ, ವಶೀಕರಣ, ಸಮ್ಮೋಹನ ಕರ್ಮಗಳಲ್ಲಿ ವಿಶ್ವಾಸವಿರಿಸುವವರು ಮೂರ್ಖರಾಗಿದ್ದಾರೆ.

''ಯಜುರ್ವೇದ 32-3 ರಂತೆ ಪ್ರಪಂಚವೆಂಬ ವಿಸ್ಮಯಕ್ಕೆ ಒಂದು ಪ್ರತಿಮೆಯನ್ನು ನಿರ್ಮಿಸಲು ಸಾಧ್ಯವಿಲ್ಲ. ವೈದಿಕರು ವಿಗ್ರಹಾರಾಧಕರಾಗಿರಲಿಲ್ಲ. ಜೈನ ಧರ್ಮೀಯರು ತೀರ್ಥಂಕರರ ಪ್ರತಿಮೆಯನ್ನು ನಿರ್ಮಿಸಿದರು. ಅವರಿಂದಾಗಿ ಭಾರತದಲ್ಲಿ ವಿಗ್ರಹಾರಾಧನೆ ಪರಂಪರೆ ಆರಂಭವಾಯಿತು. ವಿಗ್ರಹಾರಾಧನೆಯಿಂದ ತಮ್ಮ ಆಶೆ ಅಭಿಲಾಷೆಗಳನ್ನು ಪೂರೈಸಬಹುದೆಂದೂ ಈಶ್ವರ ಅನುಗ್ರಹಿಸುತ್ತಾನೆಂದೂ ವಿಶ್ವಾಸವಿರಿಸುವವರು ಅದೇ ವೇಳೆ ಸರಿಯಾದ ಕಾರ್ಯವನ್ನು ನಿರ್ವಹಿಸದೆ ಸಮಯ ಹಾಗೂ ಸಂಪತ್ತನ್ನು ಪೋಲು ಮಾಡುತ್ತಿದ್ದಾರೆ. ದೇವಾಲಯಗಳ ಪೂಜಾರಿಗಳು, ಪುರೋಹಿತರು ಭಕ್ತರನ್ನು ವಂಚಿಸಿ ಹಣ ಲಪಟಾಯಿಸುತ್ತಿದ್ದಾರೆ.

''ನಿರ್ಜೀವ ಶಿಲೆಯನ್ನು ಪೂಜಿಸುವುದರಿಂದ ಮಾನಸಿಕ ಶಕ್ತಿಯು ಪೋಲಾಗುತ್ತದೆ. ಮನಸ್ಸು ಕಲ್ಲಾಗಿ ಸ್ವತಂತ್ರವಾಗಿ ಚಿಂತಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ (ಗೋಕುಲಾನಂದನ್.ಕೆ-ಆಧುನಿಕ ಭಾರತೀಯ ಚರಿತ್ರೆ, ಜನರಲ್ ಎಡಿಟರ್ ಡಾ. ಸಿ. ವಿಶ್ವನಾಥನ್ ನಾಯರ್, ಯೂನಿವರ್ಸಿಟಿ ಬುಕ್ಸ್ ಪಬ್ಲಿಕೇಶನ್ ಕ್ಯಾಲಿಕಟ್, ಪುಟ 58)

ಮಕ್ಕಾದ ಅರಬರು ಮೊದಲು ವಿಗ್ರಹ ಪೂಜಕರಾಗಿರಲಿಲ್ಲ. ಜನವಾಸವಿಲ್ಲದ ನೀರಿನ ಒರತೆಯಿಲ್ಲದ, ಫಲಶೂನ್ಯವಾದ ಮರಭೂಮಿಯಲ್ಲಿ ಪ್ರವಾದಿ ಇಬ್ರಾಹೀಮ್ ಹಾಗೂ ಅವರ ಕುಟುಂಬದ ಆಗಮನದೊಂದಿಗೆ ಜನವಾಸ ಆರಂಭವಾಯಿತು. ಇಬ್ರಾಹೀಮ್(ಅ) ವಿಗ್ರಹರಾಧನೆಯನ್ನು ಖಂಡಿಸುವವರೂ, ಏಕದೇವಾರಾಧಕರೂ ಆಗಿದ್ದರೆಂಬುದು ಎಲ್ಲರಿಗೂ ತಿಳಿದ ವಿಚಾರವಾಗಿದೆ.

ಪ್ರವಾದಿ ಇಬ್ರಾಹೀಮ್(ಅ) ತನ್ನ ಮಗ ಪ್ರವಾದಿ ಇಸ್ಮಾಯೀಲ್‌ರೊಂದಿಗೆ ಸೇರಿ ಕಅಬಾ ನಿರ್ಮಿಸಿದರು. ಅದನ್ನು ಏಕದೇವಾರಾಧನೆಗಾಗಿ ನಿರ್ಮಿಸಲಾಗಿತ್ತು. ಮಾತ್ರವಲ್ಲ ಏಕದೇವಾರಾಧನೆಗಾಗಿ ಭೂಮಿಯಲ್ಲಿ ನಿರ್ಮಿಸಲ್ಪಟ್ಟ ಪ್ರಥಮ ಭವನವೂ ಅದುವೇ ಆಗಿದೆ. ಕುರ್‌ಆನ್ ಹೇಳುತ್ತದೆ: **''ನಿಶ್ಚಯವಾಗಿಯೂ ಮಾನವರಿಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಆರಾಧನಾಲಯವು ಮಕ್ಕಾದಲ್ಲಿರುವುದೇ ಆಗಿರುತ್ತದೆ. ಅದಕ್ಕೆ ಶುಭ ಸಮೃದ್ಧಿಗಳನ್ನು ನೀಡಲಾಗಿತ್ತು ಮತ್ತು ಅದು ಸಮಗ್ರ ಲೋಕದವರಿಗೆ ಸನ್ಮಾರ್ಗದರ್ಶನದ ಕೇಂದ್ರವನ್ನಾಗಿ ಮಾಡಲ್ಪಟ್ಟಿತು.'' (3:96)**

ಪವಿತ್ರ ಕಅಬಾ ಭವನದಲ್ಲಿ ವಿಗ್ರಹಗಳನ್ನು ತಂದಿರಿಸಿದವನು ಖುಝಾಅ ಗೋತ್ರದ ಸರದಾರನಾದ ಅಮ್ರ್ ಇಬ್ನುಲು ಅಯ್ಯ ಎಂಬುವನಾಗಿದ್ದನು. ಅವನು ಮುಆಬ್ ಎಂಬ

ಪ್ರದೇಶದಿಂದ ತಂದ ಹುಬಲ್ ವಿಗ್ರಹವನ್ನು ಅಲ್ಲಿ ಪ್ರತಿಷ್ಠಾಪಿಸಿದನು. ಇಸಾಫ್ ಹಾಗೂ ನಾಯಿಲ ವಿಗ್ರಹಗಳು ಕಅಬಾದಲ್ಲಿ ಸ್ಥಾಪಿಸಲ್ಪಟ್ಟವು. ಹೀಗೆ ಏಕದೇವಾರಾಧನೆಗಾಗಿ ನಿರ್ಮಿತವಾದ ಕಅಬಾವು ವಿಗ್ರಹಾಲಯವಾಗಿ ಪರಿವರ್ತಿತವಾಯಿತು. ಪ್ರವಾದಿ ಮುಹಮ್ಮದ್ (ಸ)ರ ಕಾಲದಲ್ಲಿ ಅಲ್ಲಿ ಮುನ್ನೂರಕ್ಕಿಂತ ಅಧಿಕ ವಿಗ್ರಹಗಳಿದ್ದವು. ಪ್ರವಾದಿತ್ವ ಲಭಿಸಿದ ಬಳಿಕ ಹದಿಮೂರು ವರ್ಷ ಪ್ರವಾದಿಗಳು ಮಕ್ಕಾದಲ್ಲೇ ಜೀವಿಸಿದರು. ಬಹುದೇವಾರಾಧನೆಯ ವಿರುದ್ಧ ಜನರಲ್ಲಿ ಜಾಗೃತಿ ಮೂಡಿಸುತ್ತಿದ್ದ ಪ್ರವಾದಿಯವರು ತಮ್ಮ ಪೂರ್ವ ಪಿತಾಮಹರಾದ ಇಬ್ರಾಹೀಮ್ ಹಾಗೂ ಇಸ್ಮಾಯೀಲ್‌ರು ನಿರ್ಮಿಸಿದ ಕಅಬಾದಲ್ಲಿ ತುಂಬಿಸಲಾಗಿದ್ದ ವಿಗ್ರಹವನ್ನು ತೆರವುಗೊಳಿಸಿರಲಿಲ್ಲ. ನಂತರ ಅಲ್ಲಿನ ಜನತೆ ಸಂಪೂರ್ಣವಾಗಿ ಇಸ್ಲಾಮಿನ ಅನುಯಾಯಿಗಳಾದರು. ಅಲ್ಲಿ ವಿಗ್ರಹಾರಾಧಕರು ಯಾರೂ ಉಳಿದಿರಲಿಲ್ಲ. ಇಸ್ಲಾಮಿನ ವಿರುದ್ಧ ರಣರಂಗದಲ್ಲಿ ಹೋರಾಡಿದವರೂ ಕೂಡಾ ಪ್ರವಾದಿಯವರ ಆತ್ಮೀಯ ಅನುಯಾಯಿಗಳಾಗಿ ಬದಲಾದರು. ಅಂತಹ ಸಂದರ್ಭದಲ್ಲಿ ಪ್ರವಾದಿವರ್ಯರು ಕಅಬಾದ ವಿಗ್ರಹಗಳನ್ನು ತೆಗೆದುಹಾಕಿದರು. ವಿಗ್ರಹಾರಾಧನೆಗಾಗಿ ಪ್ರವಾದಿಯವರ ವಿರುದ್ಧ ಯುದ್ಧರಂಗದಲ್ಲಿ ಹೋರಾಟಕ್ಕೆ ನೇತೃತ್ವ ನೀಡಿದ್ದ ಅಬೂಸುಫ್ಯಾನ್ ಇಸ್ಲಾಮ್ ಸ್ವೀಕರಿಸ ಬಳಿಕ 'ಮನಾತ್' ಎಂಬ ವಿಗ್ರಹವನ್ನು ತೆಗೆದುಹಾಕಿದ್ದರು. ಹೀಗೆ ಮಕ್ಕಾದ ವಿಗ್ರಹಾರಾಧಕರಾಗಿದ್ದವರೇ ತಮ್ಮ ಸರ್ವಸ್ವವೆಂದು ಬಗೆದಿದ್ದ ವಿಗ್ರಹಗಳನ್ನು ಕಅಬಾದಿಂದ ಅಳಿಸಿಹಾಕಿದರು ಮತ್ತು ಕಅಬಾವನ್ನು ಪೂರ್ವಸ್ಥಿತಿಗೆ ತಲುಪಿಸಿದರು. ವಿಗ್ರಹಗಳಿರುವಾಗ ಕಅಬಾದ ಕೀಲಿಕೈಯನ್ನು ಜೋಪಾನವಾಗಿರಿಸಿದ್ದ ಉಸ್ಮಾನ್ ಬಿನ್ ತಲ್ಹಾ ವಿಗ್ರಹಗಳ ತೆರವಿನ ಬಳಿಕವೂ ಕಅಬಾದ ಕೀಲಿಕೈಯ ಸಂರಕ್ಷಕರಾಗಿದ್ದರೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ತಮ್ಮ ಆರಾಧ್ಯ ವಸ್ತುಗಳಿರುವ ಸಂದರ್ಭದಲ್ಲಿ ಕಅಬಾದ ರಕ್ಷಣೆಗೆ ನೇತೃತ್ವ ನೀಡಿದವರು ಅದರ ನಾಶದ ಬಳಿಕವೂ ಅದರ ರಕ್ಷಣೆಯ ಹೊಣೆಯನ್ನು ಮುಂದುವರಿಸಿದರೆಂದರೆ ಅವರ ಆದರ್ಶದಲ್ಲಾದ ಬದಲಾವಣೆ ಎಷ್ಟು ಪ್ರಬಲವಾಗಿರಬಹುದೆಂದು ಊಹಿಸಬಹುದು. ಆದರ್ಶ ಕ್ರಾಂತಿಯಿಂದ ಮಕ್ಕಾವಾಸಿಗಳ ಮನದಲ್ಲಿದ್ದ ವಿಗ್ರಹಗಳನ್ನು ಅಳಿಸಿದ ಬಳಿಕ ಪ್ರವಾದಿಯವರು ಅವರಿಂದಲೇ ಆರಾಧಕರಾರೂ ಇಲ್ಲದಂತಾದ ವಿಗ್ರಹಗಳನ್ನು ಅಳಿಸಿದರು.

ಇಸ್ಲಾಮ್ ಏಕದೇವಾರಾಧನೆಯನ್ನು ಸಾರಿ, ವಿಗ್ರಹಾರಾಧನೆಯನ್ನು ಅಷ್ಟೇ ಸ್ಪಷ್ಟವಾಗಿ ನಿಷೇಧಿಸುತ್ತದೆ. ಆದರೆ ವಿಗ್ರಹಗಳನ್ನು ಅಥವಾ ಇತರ ಆರಾಧ್ಯ ವಸ್ತುಗಳನ್ನು ನಿಂದಿಸುವುದನ್ನು ಮತ್ತು ಅವಹೇಳನ ಮಾಡುವುದನ್ನು ನಾಶಗೊಳಿಸುವುದನ್ನು ಖಂಡಿತ ಅನುಮತಿಸುವುದಿಲ್ಲ. ಪವಿತ್ರ ಕುರ್‌ಆನ್ ಹೇಳುತ್ತದೆ : **''ಓ ಮುಸ್ಲಿಮ್‌ರೇ, ಅವರು ಅಲ್ಲಾಹನ ಹೊರತು ಯಾರನ್ನು ಪ್ರಾರ್ಥಿಸುತ್ತಿರುವರೋ ಅವರನ್ನು ತೆಗಳಬೇಡಿರಿ.'' (6:108)** ವಿಶ್ವಾಸ, ನಂಬಿಕೆ, ಆರಾಧನೆಯ ವಿಷಯಗಳಲ್ಲಿ ಯಾವುದೇ ರೀತಿಯ ಬಲಪ್ರಯೋಗ ಸಲ್ಲದು. ಪ್ರತಿಯೊಬ್ಬರೂ ತಾವಿಚ್ಛಿಸಿದ ದಾರಿಯನ್ನು ಆಯ್ದುಕೊಳ್ಳಬಹುದು. ಸತ್ಯ, ಅಸತ್ಯ, ಸರಿ, ತಪ್ಪು, ಸನ್ಮಾರ್ಗ,

ದುರ್ಮಾರ್ಗವನ್ನು ಬೇರ್ಪಡಿಸಿ ತಿಳಿಸುವ ಜವಾಬ್ದಾರಿ ಮಾತ್ರ ವಿಶ್ವಾಸಿಗಳಿಗಿದೆ. ಪವಿತ್ರ ಕುರ್ಆನ್‌ನಲ್ಲಿ ಹೇಳಲಾಗಿದೆ: ''ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ, ಇಷ್ಟವಿಲ್ಲದವರು ನಿರಾಕರಿಸಲಿ.'' (ಪವಿತ್ರ ಕುರ್ಆನ್ 18:29)

ಧರ್ಮದ ವಿಷಯದಲ್ಲಿ ಯಾವುದೇ ಬಲಾತ್ಕಾರಗಳಿಲ್ಲ, ಸನ್ಮಾರ್ಗವು ದುರ್ಮಾರ್ಗಗಳಿಂದ ಬೇರ್ಪಡಿಸಲ್ಪಟ್ಟಿದೆ. ಇನ್ನು 'ತಾಗೂತ್'(ಅತಿಕ್ರಮ)ನ್ನು ನಿರಾಕರಿಸಿ ಅಲ್ಲಾಹನಲ್ಲಿ ವಿಶ್ವಾಸವಿಟ್ಟಾತನು ಎಂದೆಂದಿಗೂ ಮುರಿಯದಂತಹ ಬಲವಾದ ಆಧಾರವನ್ನು ನೆಚ್ಚಿಕೊಂಡನು. ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ. (ಪವಿತ್ರ ಕುರ್ಆನ್2:256)

## 18 ವೇದ ಮತ್ತು ಗೀತೆ ದೈವಿಕವೇ?

**ಭಾರತದ ಹಿಂದೂ ವೇದಗ್ರಂಥಗಳು ದೇವನಿಂದ ಅವತೀರ್ಣವಾದದ್ದೆಂದು ಅಂಗೀಕರಿಸುವಿರಾ?**

ವಿದ್ಯೆ, ಜ್ಞಾನ ಎಂಬುದು ವೇದ ಎಂಬ ಪದದ ಅರ್ಥ ಆಧ್ಯಾತ್ಮಿಕ ಜ್ಞಾನವೆಂದಾಗಿದೆ. ಅದು ದೇವದತ್ತವೆಂದು ಕೆಲವು ವೇದಪಂಡಿತರು ಹೇಳುತ್ತಾರೆ. ಆದರೆ ವೇದಗಳು ಸ್ವತಃ ಅದನ್ನು ಘೋಷಿಸಿಕೊಳ್ಳುವುದಿಲ್ಲ. ಇತಿಹಾಸದಲ್ಲಿ ಎಲ್ಲಾ ಜನಾಂಗಗಳಿಗೆ ದೇವಸಂದೇಶವಾಹಕರು ಬಂದಿದ್ದಾರೆಂದೂ ಅವರಿಗೆ ದೇವಸಂದೇಶಗಳು ಲಭಿಸಿದೆಯೆಂದೂ ಇಸ್ಲಾಮ್ ವಾದಿಸುತ್ತದೆ. ಆದ್ದರಿಂದ ವೇದಗಳು ಆರ್ಯರಿಗೆ ಅವತೀರ್ಣವಾದ ದಿವ್ಯ ಸಂದೇಶದ ಭಾಗವಾಗಿರುವ ಸಾಧ್ಯತೆಯನ್ನು ನಿರಾಕರಿಸುವುದು ಸರಿಯಲ್ಲ. ಅಂತಹ ಒಂದು ಸಾಧ್ಯತೆ ಖಂಡಿತವಾಗಿಯೂ ಇದೆ.

(ವಿ.ಸೂ: ಮಲಯಾಳದಲ್ಲಿ ದೇವನನ್ನು ಈಶ್ವರ ಎಂದು ಸಂಬೋಧಿಸುವುದರಿಂದ ನಾನು ಹಾಗೆಯೇ ಮಾಡಿದ್ದೇನೆ. ಈಶ್ವರ ಎಂದು ಹೇಳುವುದು ತಪ್ಪೆಂದಾದರೆ ತಿದ್ದಿಕೊಳ್ಳಿ. ಸರ್ವೇಶ್ವರ ಅಂತಲೂ ಬಳಸಬಹುದು)

ಆದರೆ ಈಗ ಚಾಲ್ತಿಯಲ್ಲಿರುವ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವ ವೇದ ಎಂಬ ನಾಲ್ಕು ವೇದಗ್ರಂಥಗಳನ್ನು ದೈವಿಕವೆಂದು ಭಾವಿಸುವಂತಿಲ್ಲ. ಅವು ಮಾನವನ ಹಸ್ತಕ್ಷೇಪದಿಂದ ಅದರ ಮೂಲಸಿದ್ಧಾಂತಕ್ಕೆ ಧಕ್ಕೆಯುಂಟಾಗಿ, ಮಾನವೀಯತೆಯನ್ನು ಕಳಕೊಂಡಿದೆ. ವೇದದ ವಿಶ್ವಾಸಿಗಳೇ ಇದನ್ನು ಸ್ಪಷ್ಟಪಡಿಸಿದ್ದಾರೆ. ಡಾ। ರಾಧಾಕೃಷ್ಣನ್ ಬರೆಯುತ್ತಾರೆ: ಆರ್ಯರ ಬಳಿ ತಮ್ಮ ಮೂಲ ವಾಸಸ್ಥಳದಿಂದ ತಮ್ಮ ಬೆಲೆಬಾಳುವ ಸಂಪತ್ತೆಂಬ ರೀತಿಯಲ್ಲಿ ಭಾರತಕ್ಕೆ ತಂದ ದಿವ್ಯ ಸಂದೇಶಗಳನ್ನೊಳಗೊಂಡ ಗಾನಗಳು ಇದ್ದವು. ಹೊಸ ದೇಶದಲ್ಲಿ ಇತರ ದೇವರುಗಳನ್ನು ಆರಾಧಿಸುವ ಜನರೊಂದಿಗೆ ಬೆರೆಯಬೇಕಾಗಿ ಬಂದಾಗ ತಾವು ತಂದ ಗಾನಗಳನ್ನು ಸಂರಕ್ಷಿಸುವುದು ಅನಿವಾರ್ಯವಾಯಿತು. ಹೀಗೆ ವೇದಗಳು ಆ ಗಾನಗಳನ್ನು ಶೇಖರಿಸಿ, ಕ್ರೋಡೀಕರಿಸಿದ ಗಾನಗಳ ಸಮಾಹಾರವೆಂದು ನಂಬಲಾಗುತ್ತದೆ.

ಬಹಳ ಕಾಲದವರೆಗೆ ಅಥರ್ವ ವೇದಕ್ಕೆ ಒಂದು ವೇದಕ್ಕೆ ದೊರೆಯುವ ಸ್ಥಾನ ಲಭಿಸಿರಲಿಲ್ಲ. ಆದರೂ ನಮ್ಮ ಈಗಿನ ಉದ್ದೇಶಕ್ಕೆ ಸಂಬಂಧಿಸಿ ಋಗ್ವೇದದಂತೆ ಅಥರ್ವ ವೇದವೂ ಸ್ವತಂತ್ರ ನಿಲುಮೆಯಿಂದ ಕೂಡಿದೆ. ಐತಿಹ್ಯಗಳ ಸಮಾಹಾರವಾಗಿದೆ. ಪುರಾತನ ಚಿಂತನೆಗಳ ಕಾಲದಲ್ಲಿ

ರಚಿತವಾದ ಈ ಗ್ರಂಥದಲ್ಲಿ ವಿಭಿನ್ನ ಮನೋಭಾವಗಳು ಗೋಚರಿಸುತ್ತದೆ. ತಾವು ಮೆಲ್ಲ ಮೆಲ್ಲನೆ ಆಕ್ರಮಿಸಿಕೊಳ್ಳುತ್ತಿರುವ ದೇಶದ ಜನತೆಯು ಆರಾಧಿಸುತ್ತಿದ್ದ ದೇವರುಗಳ, ಭೂತಪ್ರೇತಗಳ ಕುರಿತು ವೈದಿಕರು ತಗೆದುಕೊಂಡ ರಾಜಿ ನಿರ್ಧಾರಗಳು ಅವರ ಮನೋಭಾವದಲ್ಲಿ ಪ್ರತಿಫಲಿಸುವುದು ಕಂಡುಬರುತ್ತದೆ. (ಭಾರತೀಯ ದರ್ಶನಂ ಮಾತೃಭೂಮಿ ಪ್ರಿಂಟಿಂಗ್ ಆ್ಯಂಡ್ ಪಬ್ಲಿಶಿಂಗ್ ಕಂಪೆನಿ ಲಿಮಿಟೆಡ್ ಕಲ್ಲಿಕೋಟೆ ಪುಟ 44-45)

ವೇದಗಳಲ್ಲಿನ ದೇವರ ನಂಬಿಕೆಯಲ್ಲಿಯೂ ಬಹಳ ಗಂಭೀರ ಬದಲಾವಣೆಗಳು ಸಂಭವಿಸಿದೆಯೆಂದು ಡಾ। ರಾಧಾಕೃಷ್ಣನ್ ಹೇಳುತ್ತಾರೆ:

1017 ಸೂಕ್ತಗಳು 10472 ಋತುಗಳು, 8 ಅಷ್ಟಕಗಳು, 10 ಮಂಡಲಗಳಿರುವ ಋಗ್ವೇದದ 10ನೇ ಮಂಡಲದ ಕುರಿತು ಡಾ। ರಾಧಾಕೃಷ್ಣನ್ ಹೇಳುತ್ತಾರೆ.

10 ನೇ ಮಂಡಲವು ನಂತರದ ಕಾಲದಲ್ಲಿ ಸೇರಿಸಲ್ಪಟ್ಟಂತೆ ಕಾಣುತ್ತದೆ. ವೇದ ಸೂಕ್ತಗಳ ಪುನರ್ನಿರ್ಮಾಣದ ಕೊನೆಯ ಕಾಲದಲ್ಲಿ ಪ್ರಚಾರದಲ್ಲಿದ್ದ ದೃಷ್ಟಿಕೋನಗಳು ಅದರಲ್ಲಿ ಸೇರಿಕೊಂಡಿವೆಯೆಂಬುದರಲ್ಲಿ ಸಂದೇಹವಿಲ್ಲ, ಆರಂಭಿಕ ಕಾಲದ ದೇವಭಕ್ತಿ ತುಂಬಿದ ಕವಿತೆಯ ನೈಜ ಸಿದ್ಧಾಂತಗಳಿಗೆ ದಾರ್ಶನಿಕ ಚಿಂತನೆಯು ಕಲಬೆರಕೆಗೊಂಡು ರೋಗಬಾಧಿತವಾದಂತೆ ಕಂಡುಬರುತ್ತದೆ.

ಸೃಷ್ಟಿಯ ಉದ್ಭವದಂತಹ ವಿಷಯಗಳ ಕುರಿತು ಊಹೆ ಪ್ರಧಾನವಾದ ಸೂಕ್ತಗಳು ಇದರಲ್ಲಿದೆ. ಈ ರೀತಿಯ ಸಿದ್ಧಾಂತದ ಚರ್ಚೆಗಳೊಂದಿಗೆ ಅಥರ್ವ ವೇದಕಾಲದಲ್ಲಿದ್ದ ಮೂಢ ನಂಬಿಕೆಗಳಾದ ಆಕರ್ಷಣೋಚ್ಚಾಟನ ಮಂತ್ರಗಳು ಇದರಲ್ಲಿ ಕಾಣುತ್ತದೆ. ಭಾವ ಪ್ರಧಾನವಾದ ಸೂಕ್ತಗಳಲ್ಲಿ ಸ್ವಯಂ ಅನಾವರಣಗೊಂಡ ಮನಸ್ಸನ್ನು ಸೂಚಿಸುವ ಊಹೆಯಾಧಾರಿತ ಸೂಕ್ತಗಳೇ ಇದೆ. ಇನ್ನು ಅಂಧವಿಶ್ವಾಸಿಗಳ ಸೂಕ್ತಗಳನ್ನು ಗಮನಿಸಿದಾಗ ಭಾರತದ ಆದಿವಾಸಿಗಳ ಸಿದ್ಧಾಂತಗಳು ಹಾಗೂ ಆಚಾರಗಳ ಪರಿಚಯ ವೈದಿಕರಿಗಾಗಿತ್ತು ಎಂಬ ಅರಿವಾಗುತ್ತದೆ. ಹತ್ತನೇ ಮಂಡಲವು ನಂತರದ ಕಾಲದಲ್ಲಿ ರಚಿತವಾಗಿದೆಯೆಂದು ಇದು ಸಾಕ್ಷ್ಯವಹಿಸುತ್ತದೆ. (Ibid ಪುಟ 47) ಋಗ್ವೇದದಲ್ಲೂ ಒಂದು ದೈವಿಕ ಗ್ರಂಥಕ್ಕೆ ಭೂಷಣವಲ್ಲದ ಕೋಮುವಾದವು ಕೂಡಿಕೊಂಡಿರುವುದು ಕಂಡುಬರುತ್ತದೆ.

**'ಬ್ರಾಹ್ಮಣೋಸ್ಯ ಮುಖಮಾಸೀದ್ ಬಹು ರಾಜನ್ಯ ಕೃತಃ**
**ಊರು ತದಸ್ಯ ಯದ್ವೈಶ್ಯಃ ಪದ್ ಬ್ಯಾಂ ಶೂದ್ರೋ ಅಜಾಯತ'**
**(ಋಗ್ವೇದ 10:90:12)**

(ಆ ಪ್ರಜಾಪತಿಗೆ ಬ್ರಾಹ್ಮಣನು ಮುಖವಾಗಿ, ಮುಖದಿಂದ ಆತ ಉತ್ಪನ್ನವಾಗಿ ಕ್ಷತ್ರಿಯನು ಬಾಹುಗಳಿಂದ ಉಂಟಾದವನಾಗಿ ವೈಶ್ಯನೂ ಉಂಟಾದ ಮತ್ತು ಅವರ ಪಾದಗಳಿಂದ ಶೂದ್ರನು ಜನಿಸಿದನು. ಋಗ್ವೇದದ ಎರಡನೇ ಭಾಗದ ಅವತರಣಿಕೆಯಲ್ಲಿ ವೇದಗಳ ಸಂಪೂರ್ಣ ಭಾಗವು ಇಂದು ಲಭ್ಯವಿಲ್ಲದೆಯೂ, ಅವುಗಳಲ್ಲಿ ಹಲವನ್ನು ಸೇರಿಸಿಕೊಳ್ಳಲಾಗಿದೆಯೆಂದೂ

ಅಸ್ಪಷ್ಟ ಹಾಗೂ ಸಂಶಯಾಸ್ಪದ ವಿಷಯಗಳು ಸೇರಿದೆಯೆಂದೂ ಎನ್.ವಿ. ಕೃಷ್ಣವಾರಿಯರ್ ಸ್ಪಷ್ಟಪಡಿಸಿದ್ದಾರೆ.

ವೇದಗಳು ದೋಷರಹಿತ ಅಥವಾ ಪರಿಪೂರ್ಣ ಗ್ರಂಥವಲ್ಲವೆಂದು ಡಾ| ಎಸ್. ರಾಧಾಕೃಷ್ಣನ್ ತನ್ನ Indian Religions (ಪುಟ 22)ನಲ್ಲಿ ವಿವರಿಸಿದ್ದಾರೆ. ನರೇಂದ್ರ ಭೂಷಣ್ ಬರೆಯುತ್ತಾರೆ, 'ಕಾಲಕ್ರಮೇಣ ಪದಗಳು, ಪಾಠಭಾಗಗಳಲ್ಲಿ ಕಂಡು ಬಂದವು. ಕೆಲವು ಬ್ರಾಹ್ಮಣ ತತ್ವಗಳನ್ನು ವೇದಗಳಲ್ಲಿ ಸೇರಿಸಲಾಯಿತು. ಹೀಗೆ ವೇದಸಂಹಿತೆಯೂ, ಬ್ರಾಹ್ಮಣ್ಯವೂ ಕಲಬೆರೆಕೆಯಾದಾಗ ವ್ಯಾಸರು ಅದನ್ನು ಪುನರ್ರಚಿಸರಬಹುದು. ಹೀಗೆ ಕುಮಾರ ವ್ಯಾಸರು ವೇದಗಳನ್ನು ರಚಿಸಿದರೆಂದು ಪ್ರಚಲಿತವಾಗಿರಬಹುದು! ಹೀಗೆ ನಾಮ ಪುರಾಣಗಳು, ಬ್ರಾಹ್ಮಣ್ಯಗಳ ಕಲಬೆರಕೆಗಳಲ್ಲಿ ನಿಜ ವೇದ ಯಾವುದು? ಮಂತ್ರ ಯಾವುದು? ಶಾಖೆಗಳು ಯಾವುವು ಎಂದು ತಿಳಿಯಬಹುದಾಗಿದ್ದ ಕಾಲವೊಂದಿತ್ತು ಎಂಬುದಾಗಿದೆ.' (ವೈದಿಕ ಸಾಹಿತ್ಯ ಚರಿತ್ರೆ ಪುಟ 51–53) ಸತ್ಯವ್ರತ ಪಟೇಲರ ಭಾಷೆಯಲ್ಲಿ ''ಹಿಂದೂ ಧರ್ಮದ ಮೂಲ ಸ್ರೋತ ವೇದಗಳಾಗಿವೆ. ಎಲ್ಲಾ ವಿಭಾಗಗಳು ಅದನ್ನು ಬೆಂಬಲಿಸುತ್ತದೆಯಲ್ಲದೆ ಅದರ ಮೌಲ್ಯಗಳನ್ನು ಅಂಗೀಕರಿಸುತ್ತದೆ. ಕೆಲವು ವೇದದ ಸೂಕ್ತಗಳು ಕಳೆದು ಹೋಗಿದೆ. ಆದರೆ ಈಗ ಇರುವುದೇ ಧಾರಾಳ ಸಾಕು'' (Hindhusum Religion and way of life Page 5)

ಋಗ್ವೇದದ 10ನೇ ಕಾಂಡದ 10ನೇ ಸೂಕ್ತದಲ್ಲಿ ಸ್ವಂತ ಸಹೋದರನನ್ನು ಲೈಂಗಿಕ ಕ್ರಿಯಗೆ ಆಹ್ವಾನಿಸುವ ಸಹೋದರಿಯ ಭಾಷೆ ಹಾಗೂ ಶೈಲಿಯು ಒಂದು ದೇವಗ್ರಂಥಕ್ಕೆ ಖಂಡಿತ ಯೋಗ್ಯವಲ್ಲ, ಅದೇ ವೇಳೆ ಸೂರ್ಯಗ್ರಹಣ ಹಾಗೂ ಚಂದ್ರಗ್ರಹಣದ ಕುರಿತು ಋಗ್ವೇದ ಮತ್ತು ಅಥರ್ವಣ ವೇದದಲ್ಲಿರುವ ವಿಚಾರಗಳು ಅಸಂಬದ್ಧ, ಸಂಕೀರ್ಣತೆಯಿಂದ ಹಾಗೂ ಅಂಧವಿಶ್ವಾಸದಿಂದ ಕೂಡಿದೆ. ಆದ್ದರಿಂದ ವೇದಗಳಿಂದ ಅಳಿಸಿ ಹಾಕಬೇಕಾದ ಹಲವು ವಿಷಯಗಳಿವೆಯೆಂದು ಪ್ರಮುಖ ಹಿಂದೂ ಪಂಡಿತರು ಪ್ರಬಲವಾಗಿ ವಾದಿಸಿದ್ದಾರೆ. ಗುರು ನಿತ್ಯಚೈತನ್ಯಯತಿ ಬರೆಯುತ್ತಾರೆ: ವೇದಗಳು ಅತ್ಯಂತ ನಿಕೃಷ್ಟವಾದ ಹಿಂಸೆಗೆ ಅನುಮತಿ ನೀಡುತ್ತದೆ. ಮಾತ್ರವಲ್ಲ ಅವೆಲ್ಲವನ್ನೂ ಕಾರ್ಯಗತಗೊಳಿಸಬೇಕೆಂದು ವಿವರಿಸುವ ಹಲವಾರು ಮಂತ್ರಗಳಿವೆ. ನಿಷ್ಪಕ್ಷಮತಿಗಳಾದ ಯಾರೂ ಇದನ್ನು ಕಂಡಿಲ್ಲವೆಂದು ನಟಿಸಲು ಸಾಧ್ಯವಿಲ್ಲ, ಹಿಂದೂಗಳ ಅತ್ಯಂತ ಉತ್ಕೃಷ್ಟವಾದ ಶೃತಿವೇದವೆಂದು ಹೇಳುವ ಅದೇ ನಾಲಿಗೆಯಿಂದ ಅದರಲ್ಲಿ ಅತ್ಯಂತ ನಿಕೃಷ್ಟವಾದ ಮಂತ್ರಗಳು ಇವೆಯಂದು ಹೇಳಲು ಯಾವುದೇ ಹಿಂದೂ ಪಂಡಿತನಿಗೂ ನೋವೆನಿಸಬಹುದು. ಆದರೆ ಕೆಲವು ಪಂಡಿತರು ಐತಿಹಾಸಿಕ ಸತ್ಯದೊಂದಿಗೆ ನ್ಯಾಯ ತೋರದೆ ವೇದಗಳಿಂದ ಅಳಿಸಿ ಹಾಕಬೇಕಾದ ಇಂತಹ ಮಂತ್ರಗಳನ್ನು ಸಮರ್ಥಿಸಲು ಶ್ರಮಿಸಿರುವುದು ಕ್ಷಮಾರ್ಹವಲ್ಲ, ( ಗುರುಕುಲ ಮಾಸಿಕ, ಉದ್ಧರಣೆ: ಭಾರತೀಯ ನವೋತ್ಥಾನದ ರೂಪರೇಷೆ ಪುಟ 212) ಒಟ್ಟಿನಲ್ಲಿ ಚಾಲ್ತಿಯಲ್ಲಿರುವ ವೇದಗಳು ದೇವದತ್ತವೋ, ಅಪೌರುಷೇಯವೋ ಎಂದು ವೇದ ವಿಶ್ವಾಸಿಗಳು ಕೂಡಾ ವಾದಿಸುವುದಿಲ್ಲ, ಅದರಲ್ಲಿ ಹಲವನ್ನು ಸೇರಿಸಿ ಅದು

ಶಸ್ತ್ರಕ್ರಿಯಗೆ ಒಳಗಾಗಿದೆ. ಹಲವು ಅಳಿದು ಹೋಗಿವೆ. ಆದರೆ ಇದರಲ್ಲಿ ಆಶ್ಚರ್ಯಪಡುವಂತ ಹದ್ದು ಇಲ್ಲ. ಏಕೆಂದರೆ ವೇದದ ಇತಿಹಾಸ ಯಾರಿಗೂ ತಿಳಿದಿಲ್ಲವಲ್ಲಾ. ಅದರ ಕಾಲದ ಕುರಿತು ಬಹಳ ಅಂತರದ ಅಭಿಪ್ರಾಯ ವ್ಯತ್ಯಾಸವಿದೆ. ಕ್ರಿಸ್ತನಿಗಿಂತ 6000 ವರ್ಷ ಮೊದಲು ಎಂದೂ 4500 ಎಂದೂ, 3000 ಎಂದೂ, 1500 ಎಂದೂ ವಾದಿಸುವವರಿದ್ದಾರೆ. ಆದ್ದರಿಂದ ಯಾವುದಕ್ಕೂ ಸ್ಪಷ್ಟ ಆಧಾರಗಳಿಲ್ಲ. ಆದರೆ ಆರ್ಯರು ಭಾರತಕ್ಕೆ ಬಂದ ಬಳಿಕ ವೇದಗಳನ್ನು ಕ್ರೋಡೀಕರಿಸಲಾಯಿತೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿಲ್ಲ. ವೇದವು ಅವತೀರ್ಣಗೊಂಡ ಹಾಗೂ ಅದರ ಕ್ರೋಡೀಕರಣದ ನಡುವೆ ಸುದೀರ್ಘ ಕಾಲ ವ್ಯತ್ಯಾಸವು ಅದರಲ್ಲಿ ಬಹಳ ಗಂಭೀರವಾದ ಬದಲಾವಣೆಗೂ ಕತ್ತರಿಪ್ರಯೋಗಕ್ಕೂ ಕಾರಣವಾಯಿತೆಂಬುದು ಸ್ವಾಭಾವಿಕ. ಡಾ। ರಾಧಾಕೃಷ್ಣನ್ ಬರೆಯುತ್ತಾರೆ: ಆರ್ಯರು ತಾವು ತಂದ ಆಚಾರ, ವಿಚಾರ, ವಿಶ್ವಾಸಗಳನ್ನು ಭಾರತದ ಮಣ್ಣಿನಲ್ಲಿ ಪುನಃ ವಿಕಾಸಗೊಳಿಸಿದರು. ಈ ಸೂಕ್ತಗಳನ್ನು ರಚಿಸಿದ ಬಹಳ ದೀರ್ಘಕಾಲದ ಬಳಿಕ ಅದನ್ನು ಕ್ರೋಡೀಕರಿಸಲಾಯಿತು ( ಭಾರತೀಯ ದರ್ಶನಂ ಪುಟ 46)

ವೇದಗಳು ಪ್ರಕಟವಾದ ಪ್ರೋಕ್ತನ ವೈದಿಕ ಭಾಷೆಯೇ, ಈಗಿಲ್ಲವೆಂದೂ, ಈಗಿರುವ ಸಂಸ್ಕೃತವು ಅದರ ರೂಪಾಂತರವೆಂದೂ, ವೇದಕಾಲ ಕಳೆದು ಬಹಳ ವರ್ಷಗಳ ನಂತರ ಅದನ್ನು ರಚಿಸಲಾಯಿತೆಂದು ನರೇಂದ್ರ ಭೂಷಣ್ ಸೇರಿದಂತೆ ಹಲವು ಪಂಡಿತರು ಸ್ಪಷ್ಟಪಡಿಸಿದ್ದಾರೆ. (ವೈದಿಕ ಸಾಹಿತ್ಯ ಚರಿತ್ರೆ ಪುಟ 27-39)

ಇಂತಹ ಎಲ್ಲ ರೀತಿಯ ಮಾನವ ಹಸ್ತಕ್ಷೇಪದಿಂದ ಮುಕ್ತವಾದ, ಅದರ ಅವತೀರ್ಣಕಾಲದಿಂದ ಒಂದು ಪದದ ವ್ಯತ್ಯಾಸವಿಲ್ಲದೆ ಮಾನವ ಕುಲದ ಮುಂದೆ ಬೆಳಕು ಚೆಲ್ಲಿನಿಂತ ಗ್ರಂಥ ಕುರ್‌ಆನ್. ಆದ್ದರಿಂದ ಅದನ್ನು ಈಗಿರುವ ಏಕೈಕ ದೇವಗ್ರಂಥ ಎನ್ನಲಾಗುತ್ತದೆ. ಅದು ಪೂರ್ವಗ್ರಂಥಗಳನ್ನು ದೃಢೀಕರಿಸುತ್ತದೆ.

## ಭಗವದ್ಗೀತೆಯು ದೇವಗ್ರಂಥವಲ್ಲವೆಂದು ನಿಮ್ಮ ಅಭಿಪ್ರಾಯವೇ?

ಈಗ ಚಾಲ್ತಿಯಲ್ಲಿರುವ ವೇದಗಳು ಮಾನವ ಹಸ್ತಕ್ಷೇಪಕ್ಕೆ ಗುರಿಯಾಗಿದ್ದವೆಂದು ಡಾ। ರಾಧಾಕೃಷ್ಣನ್, ಎನ್.ವಿ. ಕೃಷ್ಣ ವಾರಿಯರ್, ನರೇಂದ್ರ ಭೂಷಣ್, ಸತ್ಯವ್ರತ ಪಟೇಲ ಮುಂತಹ ವೇದಪಂಡಿತರು ಸುಸ್ಪಷ್ಟವಾಗಿ ವಿವರಿಸಿದ್ದಾರೆ. ಮಹಾಭಾರತದ ಕುರುಕ್ಷೇತ್ರ ಯುದ್ಧದಲ್ಲಿ ಕೌರವರೊಂದಿಗೆ ಯುದ್ಧ ಮಾಡಲು ಪಾಂಡವರು ಒಂದಾದಾಗ ಪಾಂಡವ ವೀರನಾದ ಅರ್ಜುನನಿಗೆ ಸೋದರ ಸಂಬಂಧಿಗಳನ್ನು ಕೊಲ್ಲಲು ದುಃಖವಾಯಿತು. ಆಗ ಅರ್ಜುನನ ಗುರುವಾದ ಶ್ರೀಕೃಷ್ಣನು ಅರ್ಜುನನ ಆಗಿನ ಹೃದಯ ದೌರ್ಬಲ್ಯವನ್ನು ಹೋಗಲಾಡಿಸಲು ಹೇಳಿದ ತತ್ವೋಪದೇಶಗಳು ಗೀತೆಗಳೆಂದು ನಂಬಲಾಗುತ್ತಿದೆ. ವ್ಯಾಸ ಮಹರ್ಷಿಯು ಗೀತೆಯೂ ಸೇರಿದಂತೆ ಮಹಾಭಾರತವನ್ನು ರಚಿಸಿದರು. ಶ್ರೀ ಕೃಷ್ಣನು ಭಗವಾನರ ಅವತಾರವಾದುದರಿಂದ ಗೀತೆಯು ಭಗವದ್ಗೀತೆಯಂದೂ ಪ್ರಚುರಪಡಿಸಲಾಗುತ್ತದೆ. ಆದರೆ ಭಗವಾನ್ ಎಂದೂ

ಮಾನವ ರೂಪದಲ್ಲಿ ಅವತರಿಸುವುದಿಲ್ಲವೆಂದು ಪ್ರಮುಖ ಹಿಂದೂ ದಾರ್ಶನಿಕರು ಸ್ಪಷ್ಟಪಡಿಸುತ್ತಾರೆ.

ಸ್ವಾಮಿ ದಯಾನಂದ ಸರಸ್ವತಿಯವರು ಪ್ರಶ್ನೋತ್ತರ ರೂಪದಲ್ಲಿ ಅದನ್ನು ತಿಳಿದ್ದಾರೆ:

ಪ್ರಶ್ನೆ: ಈಶ್ವರನು ಅವತಾರ ಸ್ವೀಕರಿಸುತ್ತಾನೆಯೇ?

ಉತ್ತರ: ಇಲ್ಲ, ಏಕೆಂದರೆ 'ಅಜ ಏಕ ಪಾತ್'(35–53)

'ಸಪರ್‌ಯಗಾತು ಕ್ರಮಕಾಯಂ'(40–8) ಎಂದು ಆರಂಭವಾದ ಯಜುರ್ವೇದ ವಚನಗಳಿಂದ ಪರಮೇಶ್ವರನು ಜನ್ಮತಾಳುವುದಿಲ್ಲವೆಂದು ವ್ಯಕ್ತವಾಗುತ್ತದೆ.

ಪ್ರಶ್ನೆ: ಯದಾ ಯದಾ ಹಿಧರ್ಮಸ್ಯ ಗ್ಲಾನಿರ್ಭವತಿ ಭಾರತ

ಅಭ್ಯೋತ್ಥಾನಮಧರ್‌ಮಸ್ಯ, ತದಾತ್ಮಾನಂ ಸೃಜಾಮ್ಯಹಂ

( ಭಗವದ್ಗೀತೆ ಅಧ್ಯಾಯ 4 ಶ್ಲೋಕ 7)

ಧರ್ಮಕ್ಕೆ ಲೋಪ ಬರುವಾಗಲೆಲ್ಲಾ ನಾನು ಶರೀರ ಧರಿಸುತ್ತೇನೆ ಎಂದು ಶ್ರೀ ಕೃಷ್ಣನು ಹೇಳುತ್ತಾನಲ್ಲವೇ?

ಉತ್ತರ: ವೇದ ವಿರೋಧಿಯಾದುದರಿಂದ ಇದು ಆಧಾರವಾಗುವುದಿಲ್ಲ.

ಧರ್ಮಾತ್ಮ ಹಾಗೂ ಧರ್ಮವನ್ನು ರಕ್ಷಿಸಬಯಸುವ ಶ್ರೀಕೃಷ್ಣನು 'ನಾನು ಯುಗ ಯುಗಾಂತರಗಳಲ್ಲಿ ಜನ್ಮತಾಳಿ ಸಜ್ಜನರನ್ನು ಪರಿಪಾಲಿಸುವೆನೆಂದೂ ದುಷ್ಟರನ್ನು ಸಂಹರಿಸ ಬೇಕೆಂದೂ ಬಯಸಿರಬಹುದು. ಹೀಗೆ ಬಯಸುವುದರಲ್ಲಿ ತಪ್ಪೇನಿಲ್ಲ. ಏಕೆಂದರೆ ಪರೋಪಕಾರನಾದ ಸತಾಂ ವಿಭೂತಯ :- ಸಜ್ಜನರ ಶರೀರ, ಮನಸ್ಸು, ಧನ ಎಲ್ಲಾ ಪರೋಪಕಾರಕ್ಕಾಗಿಯೇ ಮೀಸಲಾಗಿರುವುದಲ್ಲವೇ? ಆದರೆ ಶ್ರೀಕೃಷ್ಣನು ಈ ಕಾರಣದಿಂದ ದೇವರೆಂದು ಹೇಳುವುದರಲ್ಲಿ ಅರ್ಥವಿಲ್ಲ. ( ಸತ್ಯಾರ್ಥಪ್ರಕಾಶ ಪುಟ 304–305)

ಈಶ್ವರನಿಗೆ ಅವತಾರವಿಲ್ಲವೆಂದು ಶ್ರೀವಾಗ್ಭಟಾನಂದ ಗುರುವೂ ಸ್ಪಷ್ಟಪಡಿಸಿದ್ದಾರೆ. (ವಾಗ್ಭಟಾನಂದರ ಸಂಪೂರ್ಣ ಕೃತಿಗಳು ಪುಟ 357–359) (751,752 ಮಾತೃಭೂಮಿ ಪ್ರಿಂಟಿಂಗ ಆ್ಯಂಡ್ ಪಬ್ಲಿಶಿಂಗ್ ಕಂಪೆನಿ (ಲಿ) ಕಲ್ಲಿಕೋಟೆ)

ಗೀತೆಯು ಅವತಾರ ಸಿದ್ಧಾಂತವನ್ನು ನಿರಾಕರಿಸುತ್ತದೆ.

**ಅವಜಾನಂತಿ ಮಾಂ ಮೂಢಾ ಮನುಷಿಂ ತನುಮಾಶ್ರಿತಮ್॥**

**ಪರಂಭಾವ ಮಜಾನಂತೋ ಮಮ ಭೂಕಮಹೇಶ್ವರಮ್॥**

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ॥**

**ರಾಕ್ಷಿಸೀ ಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ॥**

---

ವಿ.ಸೂ (ಈ ಶ್ಲೋಕಕ್ಕೆ ಭಗವದ್ಗೀತೆಯನ್ನು ನೋಡಿದಾಗ ಅದು ಗ್ರಂಥಕರ್ತರ ಅನುವಾದಕ್ಕೆ ವಿರುದ್ಧವಾ ಕಂಡಿದೆ. ಅದಕ್ಕಾಗಿ ಅದನ್ನು ಇಲ್ಲಿ ಸೇರಿಸುತ್ತೇನೆ; ಇಡೀ ಮಾನವ ಕೋಟಿಗೆಲ್ಲಾ ಮಹೇಶ್ವರನಾದ ನ ಪರಮಭಾವವನ್ನು ತಿಳಿಯದ ಮೂಢರು ಮನುಷ್ಯ ರೂಪವನ್ನು ಅರ್ಥಾತ್ ಮಾನವ ಶರೀರವನ ಧರಿಸಿರುವ ಪರಮಾತ್ಮನಾದ ನನ್ನನ್ನು ಕೀಳಾಗಿ ಕಾಣುತ್ತಾರೆ.

(ಭೂತಗಳ ಮಹೇಶ್ವರನಾದ ಪರಮನಾದ ನನ್ನ ಭಾವವನ್ನು ಅರಿಯದ ಮೂಢರು ನನ್ನನ್ನು ಮನುಷ್ಯ ಶರೀರವನ್ನು ಆಶ್ರಯಿಸಿರುವವನಾಗಿ ತಪ್ಪಾಗಿ ಅರ್ಥೈಸುತ್ತಾರೆ. ಹೀಗೆ ವ್ಯರ್ಥವಾದ ಆಸೆ, ವ್ಯರ್ಥವಾದ ಕಾರ್ಯ ಮತ್ತು ವ್ಯರ್ಥವಾದ ಜ್ಞಾನನವುಳ್ಳ) ಅಜ್ಞಾನಿಗಳು ರಾಕ್ಷಸರ ಮತ್ತು ಅಸುರರಂತಹ ಮೋಹಕಾರಿ ತಾಮಸ ಸ್ವಭಾವವನ್ನೇ ಆಶ್ರಯಿಸಿರುತ್ತಾರೆ.

( ರಾಜ ಗುಹ್ಯ ಯೋಗಂ ಶ್ಲೋಕ 11-12)

ಗೀತೆಯ ಇಂತಹ ಸೂಕ್ತಗಳು ದಿವ್ಯವಚನಗಳಾಗುವ ಸಾಧ್ಯತೆಯನ್ನು ನಿರಾಕರಿಸಲಾಗದು. ಆದರೆ ಶ್ರೀ ಕೃಷ್ಣನು ಭಗವಾನ್ ಎಂಬ ನಂಬಿಕೆಯು ಅರ್ಥಹೀನವಾದದು. ಇದು ಗೀತೆಯ ಆಶಯಕ್ಕೆ ತೀರಾ ವಿರುದ್ಧವಾಗಿದೆ. ಶ್ರೀ ಕೃಷ್ಣನು ದೇವಸಂದೇಶವಾಹಕ ಎಂಬ ಸಾಧ್ಯತೆಗಳು ಹೆಚ್ಚಾಗಿದೆ. ಆದರೆ ಕೃಷ್ಣನ ನೈಜ ಹಾಗೂ ಮೂಲ ಚರಿತ್ರೆಯು ಲಭ್ಯವಿಲ್ಲದ ಕಾರಣ ಅದನ್ನು ಖಂಡಿತ ಒಪ್ಪಿಕೊಳ್ಳಲು ಸಾಧ್ಯವಿಲ್ಲ.

ಗೀತೆಯ ಸ್ಪಷ್ಟವಾದ ಚರಿತ್ರೆಯೂ ಲಭ್ಯವಿಲ್ಲ. ಅದು ಮಹಾಭಾರತದ ಯುದ್ಧಕ್ಕೆ ಸಂಬಂಧಿಸಿ ರಚನೆಯಾಗಿದೆಯೇ ಎಂಬ ವಿಷಯದಲ್ಲೂ ಭಿನ್ನಾಭಿಪ್ರಾಯವಿದೆ. ಗೀತೆರಚನೆಯ ಕಾಲವೂ ವಾದಾತ್ಮಕವಾಗಿದೆ. ಕ್ರಿ.ಪೂ 5ನೇ ಶತಮಾನ, 4ನೇ ಶತಮಾನ, 3ನೇ ಶತಮಾನವೆಂದೂ, ಕ್ರಿ.ಶ 2ನೇ ಶತಮಾನ 4ನೇ ಶತಮಾನವೆಂದೂ ಅಭಿಪ್ರಾಯ ಇದೆ. ಇದರ ಅಸ್ಪಷ್ಟತೆಯ ಕುರಿತು ಡಾ। ರಾಧಾಕೃಷ್ಣನ್ ಹೇಳುತ್ತಾರೆ. 'ಭಗವದ್ಗೀತೆಯು ಮಹಾಭಾರತದ ನೈಜ ಭಾಗವೆಂದು ಒಪ್ಪಿಕೊಂಡರೂ ಅದರಲ್ಲಿ ಹಲವು ಕಾಲಘಟ್ಟಗಳ ಕೃತಿಗಳನ್ನು ಸೇರಿಸಿರುವುದರಿಂದ ನಮಗೆ ಗೀತೆಗಳ ಕಾಲದ ಕುರಿತು ನಿರ್ಧಾರಕ್ಕೆ ಬರಲಾಗುವುದಿಲ್ಲ.'

(ಭಾರತೀಯ ದರ್ಶನ ಭಾಗ-1 ಪುಟ 481)

ಗೀತೆಯ ರಚನೆಕಾರರು ತನ್ನ ಕಾಲದ ವಿವಿಧ ಚಿಂತನೆಗಳನ್ನು ಸಮನ್ವಯಗೊಳಿಸಿ ಕ್ರೋಢೀಕರಿಸಿದ್ದಾರೆಂದು ಡಾ। ರಾಧಾಕೃಷ್ಣನ್ ಮುಂದುವರಿಸುತ್ತಾರೆ 'ಏನಿದ್ದರೂ ಗೀತೆ ದೈವಿಕವೆಂಬುದರಲ್ಲಿ ಅವರಿಗೆ ಭಿನ್ನಾಭಿಪ್ರಾಯವಿಲ್ಲ. 'ದರ್ಶನ, ಧರ್ಮ, ಸದಾಚಾರ ಮೌಲ್ಯಗಳನ್ನೊಳಗೊಂಡ ಗ್ರಂಥವನ್ನು ಶೃತಿಯೆಂದೂ ಅಥವಾ ದೇವರ ವಚನಗಳೆಂದೋ ಭಾವಿಸಲಾಗದು. ಸ್ಮೃತಿ ಎಂದು ಹೇಳಬಹುದು.' (Ibid ಪುಟ 473)

ಸಂಕ್ಷಿಪ್ತದಲ್ಲಿ ದೇವ ಸಂದೇಶದ ಅಂಶಗಳು, ಆಶಯಗಳು ಇರಬಹುದಾದದರೂ ಅದೊಂದು ದೇವಗ್ರಂಥವಲ್ಲ. ತನ್ನನ್ನು ದೇವಗ್ರಂಥವೆಂದು ಗೀತೆಯೂ ಸ್ವಯಂ ಹೇಳಿಕೊಳ್ಳುವುದಿಲ್ಲ.

❖❖❖❖

## 19 ಕುರ್‌ಆನ್ ಬೈಬಲ್‌ನ ಪ್ರತಿರೂಪವೇ?

ಪ್ರವಾದಿ ಮುಹಮ್ಮದ್‌ರು(ಸ) ತಮ್ಮ ಕಾಲದ ಯಹೂದಿ-ಕ್ರೈಸ್ತ ಪಂಡಿತರೊಂದಿಗೆ ಕಲಿತ ವಿಚಾರಗಳನ್ನು ತನ್ನ ಸ್ವಂತ ಭಾಷೆಯಲ್ಲಿ ತನ್ನದೇ ಶೈಲಿಯಲ್ಲಿ ಪ್ರಕಟಿಸಿದ್ದಾರೆ. ಗತಸಮುದಾಯಕ್ಕೆ ಸಂಬಂಧಿಸಿ ಕುರ್‌ಆನ್ ಮತ್ತು ಬೈಬಲ್‌ನ ವಿವರಣೆಗಳು ಒಂದೇ ರೀತಿಯಾಗಲು ಇದೇ ಕಾರಣ. ಒಂದಕ್ಕಿಂತ ಹೆಚ್ಚು ಇಂಗ್ಲಿಷ್ ಪುಸ್ತಕಗಳಲ್ಲಿ ಇಂತಹ ವಿಮರ್ಶೆಗಳು ಕಂಡು ಬಂತು. ಇದಕ್ಕೇನು ಕಾರಣ ಹೇಳುವಿರಿ.?

ಇಸ್ಲಾಮನ್ನು ಶತ್ರುವಿನಂತೆ ದ್ವೇಷಿಸುವ ಪಾಶ್ಚಾತ್ಯಬರಹಗಾರರು ಹುಟ್ಟು ಹಾಕಿದ ಸುಳ್ಳಾರೋಪವಿದು. ಈ ಆರೋಪದಲ್ಲಿ ಸ್ವಲ್ಪವೂ ಸತ್ಯಾಂಶವಿಲ್ಲವೆಂದು ಬೈಬಲ್ ಮತ್ತು ಕುರ್‌ಆನ್ ಓದುವ ಯಾರಿಗೂ ತಿಳಿಯಲು ಸಾಧ್ಯವಿದೆ. ಮಾನವ ಕೋಟಿಗೆ ದೇವನು ನಿಶ್ಚಯಿಸಿದ ಜೀವನ ವ್ಯವಸ್ಥೆಯನ್ನು ತಿಳಿಸಿಕೊಡಲು ಪ್ರವಾದಿಗಳನ್ನು ನೇಮಿಸಲಾಗಿತ್ತು. ಆದ್ದರಿಂದ ಅವರುಗಳಿಂದ ಅರ್ಪಿತವಾದ ದೈವಿಕ ಸನ್ಮಾರ್ಗದಲ್ಲಿ ಸಾಮ್ಯತೆ ಗೋಚರಿಸುವುದು ಸ್ವಾಭಾವಿಕವಾಗಿದೆ. ಸಂದೇಶವಾಹಕರನ್ನು ಬೇರೆ ಬೇರೆ ಕಾಲಗಳಲ್ಲಿ ಕಳಿಸಿದ ಉದ್ದೇಶವೇ ಪೂರ್ವಿಕರ ಮಾರ್ಗದಿಂದ ಅವರ ಅನುಯಾಯಿಗಳು ದೂರ ಸರಿದ ಕಾರಣವಾಗಿತ್ತು.

ಮುಹಮ್ಮದ್‌ರ(ಸ) ನಿಯೋಗದ ಸಂದರ್ಭದಲ್ಲಿ ಯೇಸು ಅಥವಾ ಮೋಶಸ್‌ರ ಸಂದೇಶಗಳು ಹಾಗೂ ಭೋದನೆಗಳು ನೈಜ ರೀತಿಯಲ್ಲಿ ಲಭ್ಯವಿರಲಿಲ್ಲ. ಯಹೂದಿ-ಕ್ರೈಸ್ತ ಸಮುದಾಯಗಳು ಅವುಗಳಲ್ಲಿ ಹಲವು ತಿದ್ದುಪಡಿಗಳನ್ನು ಮಾಡಿದ್ದವು. ಆದ್ದರಿಂದ ಪ್ರವಾದಿಗಳ ನೈಜ ಬೋಧನೆಗಳು ಸಣ್ಣ ಪ್ರಮಾಣದಲ್ಲಿ ಬೈಬಲ್‌ನಲ್ಲಿವೆ. ಅವುಗಳೊಂದಿಗೆ ಪ್ರವಾದಿಯ ವರ(ಸ) ಬೋಧನೆಗಳಿಗೂ ಸಾಮ್ಯತೆ ಇರುವುದು ಸ್ವಾಭಾವಿಕ. ನಿಜವಾಗಿ ಸಂಭವಿಸಿರುವುದು ಕೂಡಾ ಅದೇ. ಕುರ್‌ಆನ್ ಮತ್ತು ಬೈಬಲ್‌ನಲ್ಲಿ ಕಂಡುಬರುವ ಸಾಮ್ಯತೆಗೂ ಇದೇ ಕಾರಣ.

ಧರ್ಮದ ಮೂಲಭೂತ ಸಿದ್ಧಾಂತವಾದ ದೇವವಿಶ್ವಾಸದಲ್ಲೇ ಯಹೂದಿ-ಕ್ರೈಸ್ತ ದೃಷ್ಟಿಕೋನ ಮತ್ತು ಪ್ರವಾದಿ ಮುಹಮ್ಮದ(ಸ)ರ ಬೋಧನೆಗಳಲ್ಲಿ ಬಹಳ ವ್ಯತ್ಯಾಸ ಕಂಡುಬರುತ್ತದೆ. ಪ್ರವಾದಿಯವರು ಏಕದೇವ ಸಿದ್ಧಾಂತವನ್ನು ಪರಿಚಯಿಸಿಕೊಟ್ಟರು. ಆದರೆ ಯಹೂದಿ ಮತ್ತು ಕ್ರೈಸ್ತರಲ್ಲಿ ಅವರ ದೇವವಿಶ್ವಾಸದಲ್ಲಿ ನ್ಯೂನ್ಯತೆಯಿದೆ. ಪ್ರವಾದಿವರ್ಯರು ಅದನ್ನು ಅಂಗೀಕರಿಸಲಿಲ್ಲ, ಮಾತ್ರವಲ್ಲ ಅದರ ಮೂಲಕ ಅವತೀರ್ಣಗೊಂಡ ಕುರ್‌ಆನ್ ಅದನ್ನು ತೀವ್ರವಾಗಿ ವಿರೋಧಿಸಿತು. 'ಉಝೈರ್' ದೇವಪುತ್ರನೆಂದು ಯಹೂದಿಯರು

ಹೇಳುತ್ತಾರೆ. ಮಸೀಹ್ (ಈಸಾ) ದೇವಪುತ್ರನೆಂದು ಕ್ರೈಸ್ತರು ಹೇಳುತ್ತಾರೆ. ಅವರು ತಮಗಿಂತ ಹಿಂದೆ ಸತ್ಯನಿಷೇಧಿಗಳಾಗಿದ್ದವರನ್ನು ಅನುಕರಿಸುತ್ತಾ ತಮ್ಮ ಬಾಯಿಗಳಿಂದ ಹೊರಡಿಸುವ ಅಸಂಬದ್ಧ ಮಾತುಗಳಿವು. ಅವರ ಮೇಲೆ ದೇವನ ಪ್ರಹಾರವಿದೆ. (ಕುರ್‌ಆನ್ 9:30)

ಅಲ್ಲಾಹನು ಯಾರನ್ನಾದರೂ ತನ್ನ ಪುತ್ರರನ್ನಾಗಿಸಿದ್ದಾನೆಂದು ಹೇಳುವವರನ್ನು ಎಚ್ಚರಿಸಲಿಕ್ಕಾಗಿ ಈ ಗ್ರಂಥ ಅವತೀರ್ಣವಾಗಿದೆ. ಅವರಿಗೆ ಇದರ ಕುರಿತು ಜ್ಞಾನವೇನೂ ಇಲ್ಲ, ಅವರ ಬಾಯಿಯಿಂದ ಹೊರಡುವ ಈ ಮಾತು ಬಹಳ ಘೋರವಾದದು. ಅವರು ಕೇವಲ ಹುಸಿಯನ್ನಾಡುತ್ತಿದ್ದಾರೆ. (ಪವಿತ್ರ ಕುರ್‌ಆನ್ 18:4-5)

'ಅಲ್ಲಾಹನು ಮೂವರಲ್ಲೊಬ್ಬನೆಂದು ಹೇಳಿದವರು ನಿಶ್ಚಯವಾಗಿಯೂ 'ಸತ್ಯ ನಿಷೇಧ' ಕೈಗೊಂಡರು. ವಾಸ್ತವದಲ್ಲಿ ಏಕದೇವನಲ್ಲದೆ ಅನ್ಯದೇವರಿಲ್ಲ, ಇವರು ಇಂತಹ ಮಾತುಗಳಿಂದ ದೂರವಿರದಿದ್ದರೆ, ಇವರ ಪೈಕಿ ಸತ್ಯನಿಷೇಧ ನೀತಿಯನ್ನು ಅನುಸರಿಸುವವರಿಗೆ ವೇದನನಾಯುಕ್ತ ಯಾತನೆ ನೀಡಲಾಗುವುದು. ಇವರು ಇನ್ನು ಅಲ್ಲಾಹನೊಡನೆ ಪಶ್ಚಾತ್ತಾಪಪಟ್ಟು ಅವನೊಡನೆ ಕ್ಷಮಾಯಾಚನೆ ಮಾಡಲಾರರೇ? ಅಲ್ಲಾಹನು ಮಹಾ ಕ್ಷಮಾಶೀಲನೂ ಕರುಣಾನನಿಧಿಯೂ ಆಗಿರುತ್ತಾನೆ.' (ಪವಿತ್ರ ಕುರ್‌ಆನ್ 5:73-74)

ಇಂದಿನ ಯಹೂದಿ ಹಾಗೂ ಕ್ರೈಸ್ತರಂತೆ ಅಂದಿನ ಯಹೂದಿ, ಕ್ರೈಸ್ತರೂ ಏಸುಕ್ರಿಸ್ತರನ್ನು ಶಿಲುಬೆಗೇರಿಸಿದರೆಂಬುದರ ಮೇಲೆ ವಿಶ್ವಾಸವಿರಿಸಿದ್ದಾರೆ. ಆದರೆ ಕುರ್‌ಆನ್ ಅದನ್ನು ತೀವ್ರವಾಗಿ ನಿರಾಕರಿಸುತ್ತದೆ. ಯಹೂದಿಗಳು ಹೇಳಿದರು: 'ನಾವು ಅಲ್ಲಾಹನ ಸಂದೇಶವಾಹಕರಾದ ಮರ್ಯಮರ ಪುತ್ರ ಈಸಾ ಮಸೀಹರನ್ನು ವಧಿಸಿದೆವೆಂದು ಅವರು ಹೇಳಿದರು. ವಸ್ತುತಃ ಅವರು ಈಸಾರನ್ನು ವಧಿಸಲೂ ಇಲ್ಲ, ಶಿಲುಬೇಗೇರಿಸಲೂ ಇಲ್ಲ, ನಿಜವಾಗಿ ಆ ಪ್ರಕರಣವು ಅವರಿಗೆ ಅಸ್ಪಷ್ಟಗೊಳಿಸಲ್ಪಟ್ಟಿತ್ತು, ಈ ವಿಷಯದಲ್ಲಿ ಭಿನ್ನಾಭಿಪ್ರಾಯ ತೋರಿದವರು ವಾಸ್ತವದಲ್ಲಿ ಸಂಶಯಗ್ರಸ್ಥರಾಗಿರುತ್ತಾರೆ. ಅವರಿಗೆ ಈ ಪ್ರಕರಣದ ಅರಿವೇನೂ ಇಲ್ಲ, ಕೇವಲ ಗುಮಾನಿಯನ್ನೇ ಅನುಸರಿಸಲಾಗುತ್ತಿದೆ. ಅವರು ಮಸೀಹರನ್ನು ಖಂಡಿತವಾಗಿಯೂ ವಧಿಸಲಿಲ್ಲ.'

(ಪವಿತ್ರ ಕುರ್‌ಆನ್ 4:157)

ದೇವತ್ವ ಹಾಗು ಸಂದೇಶವಾಹಕರ ಕುರಿತು ಬೈಬಲ್‌ನಲ್ಲಿ ಹಲವು ಅಸಂಬದ್ಧ ಹಾಗೂ ಸಂಕೀರ್ಣವಾದ ಪ್ರಸ್ತಾಪಗಳಿವೆ. ಅವೆಲ್ಲಾ ಕುರ್‌ಆನಿನಲ್ಲಿಲ್ಲ, ಮಾತ್ರವಲ್ಲ ಅವುಗಳ ಕುರಿತು ಸತ್ಯಸಂಧವಾದ, ವಸ್ತುನಿಷ್ಠ ವಿವರಗಳನ್ನು ಕುರ್‌ಆನ್ ನೀಡುತ್ತದೆ. ಬೈಬಲಿನಿಂದ ಕೆಲವು ಸೂಕ್ತಗಳನ್ನು ಇಲ್ಲಿ ಸೂಚಿಸುತ್ತೇನೆ.

''ಯಹೋವ ದೇವರು ಸಂಜೆಯ ತಂಗಾಳಿಯಲ್ಲಿ ತೋಟದೊಳಗೆ ಸಂಚರಿಸುತ್ತಿರುವಾಗ ಆ ಸ್ತ್ರೀ ಪುರುಷರು ಆತನ ಸಪ್ಪಳವನ್ನು ಕೇಳಿ ಆತನಿಗೆ ಕಾಣಿಸಬಾರದೆಂದು ತೋಟದ ಮರಗಳ ಹಿಂದೆ ಅಡಗಿಕೊಂಡರು.'' (ಆದಿಕಾಂಡ 3:8-9)

''ಯಹೋವನು ಈ ಮನುಷ್ಯನು ಒಳಿತು-ಕೆಡುಕುಗಳ ಭೇದವರಿತು ನಮ್ಮಲ್ಲಿ ಒಬ್ಬನಂತಾದನಲ್ಲಾ, ಇದರಿಂದ ಇವನು ಕೈಚಾಚಿ ಜೀವ ವೃಕ್ಷದ ಫಲವನ್ನು ಸಹ ತೆಗೆದು ತಿಂದು ಶಾಶ್ವತವಾಗಿ ಬದುಕುವಂತಾಗಬಾರದು ಅಂದುಕೊಂಡನು.'' (ಆದಿಕಾಂಡ 3:22)

ಇಸ್ಲಾಮಿನ ದೇವವಿಶ್ವಾಸಕ್ಕೆ ಇದು ತೀರಾ ವಿರುದ್ಧವಾಗಿದೆ. ದೇವಸಂದೇಶವಾಹಕರ ಕುರಿತು ಬೈಬಲ್‌ನಲ್ಲಿರುವ ವಿಷಯಗಳು ನಂಬಲಸಾಧ್ಯ. ಅತ್ಯಂತ ಅವಹೇಳನಕಾರಿಯಾಗಿ ಆರೋಪಿಯಾಗಿ ಅವರನ್ನು ಚಿತ್ರೀಕರಿಸಲಾಗಿದೆ. ನೋಹರ ಕುರಿತು ಹೇಳಲಾಗುತ್ತದೆ: ನೋಹನು ದ್ರಾಕ್ಷಾರಸವನ್ನು ಕುಡಿದು ಅಮಲೇರಿದ್ದರಿಂದ ಗುಡಾರದಲ್ಲಿ ಬೆತ್ತಲೆಯಾಗಿ ಬಿದ್ದಿದ್ದನು. ಕಾನಾನನ ತಂದೆಯಾದ ಹಾಮನು ತಂದೆಯು ಬೆತ್ತಲೆಯಾಗಿರುವುದನ್ನು ಕಂಡು ಹೊರಗಿದ್ದ ಅಣ್ಣತಮ್ಮಂದಿರಾದ ಶೇಮ್ ಯಾಫೆತ್‌ರಿಗೆ ತಿಳಿಸಿದನು. ಇವರಿಬ್ಬರು ಕಂಬಳಿಯನ್ನು ತೆಗೆದುಕೊಂಡು ತಮ್ಮಿಬ್ಬರ ಬೆನ್ನಿನ ಮೇಲೆ ಹಾಕಿಕೊಂಡು ಹಿಂದಿಂದಕ್ಕೆ ನಡೆದು ತಂದೆಗೆ ಹೊದಿಸಿ ಅವನ ಮಾನವನ್ನು ಕಾಪಾಡಿದರು. ಅವರು ಹಿಮ್ಮುಖರಾಗಿದ್ದರಿಂದ ತಂದೆಯೂ ಬೆತ್ತಲೆಯಾಗಿರುವುದನ್ನು ನೋಡಲಿಲ್ಲ, ನೋಹನು ಅಮಲಿಳಿದೆದ್ದು ಕಿರಿ ಮಗನು ಮಾಡಿದ್ದನ್ನು ತಿಳಿದು ಕಾನಾನನು ಶಾಪಗ್ರಸ್ತನಾಗಲಿ, ಅವನು ತನ್ನ ಅಣ್ಣತಮ್ಮಂದಿರಿಗೆ ದಾಸನು ದಾಸನಾಗಲಿ ಅಂದನು. ( ಅದಿಕಾಂಡ 9:21-26)

ಮದ್ಯಪಾನದ ಲಹರಿಯಿಂದ ನಗ್ನನಾಗಿ, ಯಾವುದೇ ತಪ್ಪೆಸಗದ ಕಿರಿಮಗನನ್ನು ಶಪಿಸಿದ ನೋಹ, ಕುರ್‌ಆನ್ ಪರಿಚಯಿಸುವ ಪರಿಶುದ್ಧ ವ್ಯಕ್ತಿತ್ವದ ನೂಹ(ಅ)ರಿಗೆ ವಿರುದ್ಧವಾಗಿದೆ.

ಪ್ರವಾದಿ ಅಬ್ರಹಾಮರ ಕುರಿತು ಬೈಬಲ್ ಹೇಳುತ್ತದೆ: ತೀವ್ರ ಬರಗಾಲ ಎದುರಾದಾಗ ಅಬ್ರಹಾಂ ಈಜಿಪ್ಟ್‌ಗೆ ಹೊರಟು ಹೋದನು. ಈಜಿಪ್ಟಿನ ಹತ್ತಿರಕ್ಕೆ ಬಂದಾಗ, ತನ್ನ ಹೆಂಡತಿಯಾದ ಸಾರಾಳಿಗೆ ಕೇಳು, ನೀನು ಸುಂದರಿ ಎಂದು ನಾನು ಬಲ್ಲೆ; ಈ ದೇಶದವರು ನಿನ್ನನ್ನು ಕಂಡು ಈಕೆಯು ಇವನ ಹೆಂಡತಿ ಎಂದು ನನ್ನನ್ನು ಕೊಂದು ನಿನ್ನನ್ನು ಉಳಿಸುವರು. ಆದ ಕಾರಣ ನೀನು ನನಗೆ ತಂಗಿಯಾಗಬೇಕೆಂದು ಅವರಿಗೆ ಹೇಳು. ಹೀಗೆ ಹೇಳಿದರೆ ನಿನ್ನಿಂದ ನನಗೆ ಒಳಿತಾಗುವುದು. ನಿನ್ನ ದೆಸೆಯಿಂದ ನಾನು ಸಾಯದೆ ಬದುಕುವೆನು ಎಂದು ಹೇಳಿದನು ಅಬ್ರಹಾಂನು ಈಜಿಪ್ಟ್‌ಗೆ ಬಂದಾಗ ಅಬ್ರಹಾಮನ ಸಂಗಡವಿದ್ದ ಸ್ತ್ರೀಯನ್ನು ನೋಡಿ ಆಕೆಯ ಸೌಂದರ್ಯವನ್ನು ಫರೋಹನ ಪ್ರಧಾನರು ಫರೋಹನ ಮುಂದೆ ಹೊಗಳಿದರು. ಫರೋಹನ ಆ ಸ್ತ್ರೀಯನ್ನು ಅರಮನೆಗೆ ಕರೆತರಿಸಿ ಆಕೆಯ ನಿಮಿತ್ತ ಅಬ್ರಹಾಮನಿಗೆ ಉಪಕಾರ ಮಾಡಿದನು ಆಗ ಅಬ್ರಹಾಮನಿಗೆ ಕುರಿ ದನಗಳು ಗಂಡು ಹೆಣ್ಣು ಕತ್ತೆಗಳು, ದಾಸ ದಾಸಿಯರೂ ಒಂಟೆಗಳ ದೊರೆತವು. (ಆದಿಕಾಂಡ 12:10-16)

ತನ್ನ ಪತ್ನಿಯನ್ನು ರಾಜನಿಗೆ ಒಪ್ಪಿಸಿ, ಉಡುಗೊರೆಗಳನ್ನು ಸ್ವೀಕರಿಸಿದ ಅತ್ಯಂತ ನೀಚವ್ಯಕ್ತಿಯಾದ ಬೈಬಲ್‌ನ ಅಬ್ರಹಾಂನನ್ನು ಕುರ್‌ಆನ್ ಪರಿಚಯಿಸಿದ ಸಚ್ಚಾರಿತ್ರ್ಯ ಆದರ್ಶದ ವಾಹಕರಾದ, ತ್ಯಾಗೋಜ್ವಲ ಜೀವನದ ಮೇರು ವ್ಯಕ್ತಿತ್ವದ ಪ್ರವಾದಿ ಇಬ್ರಾಹೀಮ್‌ರಿಗೆ ಹೋಲಿಸಲು ಖಂಡಿತ ಸಾಧ್ಯವಿಲ್ಲ.

ಪ್ರವಾದಿ ಲೂತ್(ಅ) ರ ಕುರಿತು ಬೈಬಲ್ ಹೇಳುತ್ತದೆ : ಲೂತನು ಚೋಗರಿನಲ್ಲಿರುವುದಕ್ಕೆ ಅಂಜಿ ತನ್ನಿಬ್ಬರು ಹೆಣ್ಣುಮಕ್ಕಳನ್ನು ಕರೆದುಕೊಂಡು ಬೆಟ್ಟವನ್ನು ಹತ್ತಿ ಅಲ್ಲಿ ವಾಸಮಾಡಿದನು. ಅವನೂ ಅವನ ಇಬ್ಬರು ಹೆಣ್ಣುಮಕ್ಕಳೂ ಒಂದು ಗವಿಯಲ್ಲಿ ವಾಸಿಸಿದರು. ಹೀಗಿರುವಲ್ಲಿ ಹಿರೀಮಗಳು ತನ್ನ ತಂಗಿಗೆ –ನಮ್ಮ ತಂದೆ ಮುದುಕನಷ್ಟೆ, ಸರ್ವಲೋಕದ ಪದ್ಧತಿಯ ಮೇರೆಗೆ ನಮ್ಮನ್ನು ಮದುವೆಮಾಡಿಕೊಳ್ಳಲು ಪುರುಷರು ಎಲ್ಲಿಯೂ ಇಲ್ಲ. ನಾವು ತಂದೆಗೆ ದ್ರಾಕ್ಷಾರಸವನ್ನು ಕುಡಿಸಿ, ಅವನ ಸಂಗಡ ಮಲಗಿಕೊಂಡು ತಂದೆಯಿಂದ ಸಂತಾನವನ್ನು ಪಡೆದುಕೊಳ್ಳೋಣ ಎಂದು ಹೇಳಿದಳು. ಆ ರಾತ್ರಿ ಅವರು ತಂದೆಗೆ ದ್ರಾಕ್ಷಾರಸವನ್ನು ಕುಡಿಸಿದಾಗ ಹಿರೀಮಗಳು ಅವನ ಸಂಗಡ ಮಲಗಿಕೊಂಡಳು; ಯಾವಾಗ ಮಲಗಿಕೊಂಡಳೋ ಯಾವಾಗ ಎದ್ದು ಹೋದಳೋ ಅವನಿಗೇನೂ ತಿಳಿಯಲಿಲ್ಲ. ಮೂರನೇ ದಿನ ಹಿರಿಯವಳು ಕಿರಿಯವಳಿಗೆ–ನಿನ್ನೆ ರಾತ್ರಿ ನಾನು ಅಪ್ಪನೊಂದಿಗೆ ಮಲಗಿಕೊಂಡೆನು. ಈ ರಾತ್ರಿಯೂ ಅವನಿಗೆ ದ್ರಾಕ್ಷಾರಸವನ್ನು ಕುಡಿಸೋಣ, ಆ ಮೇಲೆ ನೀನು ಅವನ ಸಂಗಡ ಮಲಗಿಕೋ. ಹೀಗೆ ನಮ್ಮ ತಂದೆಯಿಂದ ಸಂತಾನವನ್ನು ಪಡೆದುಕೊಳ್ಳೋಣ ಎಂದು ಹೇಳಿದಳು. ಆ ರಾತ್ರಿಯೂ ಅವರು ತಂದೆಗೆ ದ್ರಾಕ್ಷಾರಸವನ್ನು ಕುಡಿಸಿದ ಮೇಲೆ ಕಿರೀಮಗಳು ಅವನ ಸಂಗಡ ಮಲಗಿಕೊಂಡಳು. ಅವಳು ಯಾವಾಗ ಮಲಗಿದಳೋ ಯಾವಾಗ ಎದ್ದುಹೋದಳೋ ಅವನಿಗೇನೂ ತಿಳಿಯಲಿಲ್ಲ. ಹೀಗೆ ಲೂತನ ಇಬ್ಬರು ಹೆಣ್ಮಕ್ಕಳು ತಂದೆಯಿಂದ ಬಸುರಾದರು. ಹಿರಿಯವಳು ಗಂಡು ಮಗುವನ್ನು ಹೆತ್ತು ಅದಕ್ಕೆ 'ಮೋವಾಬ್' ಎಂದು ಹೆಸರಿಟ್ಟಳು. ಇಂದಿನವರೆಗೂ ಇರುವ ಮೋವಾಬ್ಯರಿಗೆ ಅವನೇ ಮೂಲ ಪುರುಷ. ಕಿರಿಯ ಮಗಳು ಗಂಡು ಮಗುವನ್ನು ಹೆತ್ತು ಅದಕ್ಕೆ 'ಬೆನಮ್ಮಿ' ಎಂದು ಹೆಸರಿಟ್ಟಳು. ಇಂದಿನವರೆಗೂ ಇರುವ ಅಮ್ಮೋನಿಯರಿಗೆ ಇವನೇ ಮೂಲಪುರುಷನು' ಆದಿಕಾಂಡ 19:38) ಅತ್ಯಂತ ಲಜ್ಜೆಗೇಡಿತನದ, ನೀಚತನದ ವೃತ್ತಿಯಲ್ಲಿ ತೊಡಗಿದ್ದರೆಂದು ಬೈಬಲ್ ಪರಿಚಯಪಡಿಸುವ ಲೂತ್ ಮತ್ತು ಪರಿಶುದ್ಧ ಹಾಗೂ ಲೈಂಗಿಕ ಸದಾಚಾರಕ್ಕೆ ಉನ್ನತ ಮಾದರಿಯಾಗಿ ಕುರ್‌ಆನ್ ಪರಿಚಯಿಸುವ ಲೂತ್ ಒಂದೇ ಆಗಲು ಸಾಧ್ಯವಿಲ್ಲ.

ಅರಾಜಕತೆಯ ವಾಹಕರಾದ ಕಾಮಾಂಧರು ಪೋಣಿಸಿದ ಕಟ್ಟುಕತೆಗಳನ್ನು ಪರಿಶುದ್ಧರಾದ ಪ್ರವಾದಿಗಳ ಮೇಲೆ ಬೈಬಲ್ ಆರೋಪಿಸುತ್ತದೆ. ಇಂತಹ ಎಲ್ಲಾ ಅಪಭ್ರಂಶಗಳಿಂದ ಪವಿತ್ರ ಕುರ್‌ಆನ್ ಮುಕ್ತವಾಗಿದೆ.

ಪ್ರವಾದಿತ್ವದ ನೈಜ ಹಕ್ಕುದಾರರಾಗಿದ್ದ ಏಸುವಿನಿಂದ ತಿಂಡಿ ಹಾಗೂ ಹೆಸರು ಬೇಳೆ ಪಾಯಸವನ್ನು ನೀಡಿ ಯಾಕೋಬ್ ಅದನ್ನು ಪಡೆದುಕೊಂಡರೆಂದು ಬೈಬಲ್ ಹೇಳುತ್ತದೆ. ಒಂದು ದಿನ ಯಾಕೋಬನು ಅಡಿಗೆ ಮಾಡುತ್ತಿರುವಾಗ ಏಸಾವನು ಕಾಡಿನಿಂದ ದಣಿದು ಬಂದು ಅವನಿಗೆ –ನಾನು ಬಹು ದಣಿದು ಬಂದಿದ್ದೇನೆ. ಆ ಕೆಂಪಾದ ರುಚಿ ಪದಾರ್ಥವನ್ನು ಈಗಲೇ ತಿನ್ನಲು ಕೊಡಪ್ಪಾ ಎಂದು ಕೇಳಿದರು. ಯಾಕೋಬನು ಅವನಿಗೆ ನೀನು ಚೊಚ್ಚಲು ತನದ ಹಕ್ಕನ್ನು ನನಗೆ ಮಾರಿಬಿಡು ಅನ್ನಲು ಏಸಾವನು ಆಗಲಿ, ನನ್ನಂಥ ಸಾಯುವವನಿಗೆ

ಚೊಚ್ಚಲುತನದಿಂದ ಪ್ರಯೋಜನವೇನು ಅಂದನು. ಯಾಕೋಬನು ಮೊದಲು ಪ್ರಮಾಣ ಮಾಡು ಅಂದಾಗ ಏಸಾವನು ಪ್ರಮಾಣ ಮಾಡಿ ''ಅವನಿಗೆ ತನ್ನ ಚೊಚ್ಚಲತನದ ಹಕ್ಕನ್ನು ಕೊಟ್ಟುಬಿಟ್ಟನು. ಆಗ ಯಾಕೋಬನು ಏಸಾವನಿಗೆ ರೊಟ್ಟಿಯನ್ನೂ ಅಲಸಂದಿಗುಗ್ಗುರಿಯನ್ನೂ ಕೊಟ್ಟನು.'' ( ಆದಿಕಾಂಡ 25:29–34)

ಸ್ವಂತ ಅಣ್ಣನು ಹಸಿವಿನಿಂದಿರುವಾಗ ಅದರ ದುರ್ಲಾಭ ಪಡೆದು, ಆತನ ಚೊಚ್ಚಲುತನದ ಹಕ್ಕನ್ನು ಕಸಿದುಕೊಂಡ ಕ್ರೂರಿಯಂತೆ ಬೈಬಲ್ ಯಾಕೋಬ್‌ರನ್ನು ಚಿತ್ರಿಸುತ್ತದೆ. ಆದರೆ ಕುರ್ ಆನ್‌ನ ದೃಷ್ಟಿಯಲ್ಲಿ ಯಾಕೂಬ್ ಕ್ಷಮಾಶಾಲಿಯೂ, ಗೌರವಾರ್ಹನೂ ಪವಿತ್ರನೂ ಆಗಿದ್ದಾರೆ. ಬೈಬಲ್‌ನ ವಿವರಣೆಯಂತೆ ಯಾಕೋಬರ ತಂದೆ ಇಸ್‌ಹಾಕ್ ಸುಳ್ಳುಗಾರರಾಗಿದ್ದಾರೆ. ಇಸ್ಹಾಕ್ ಗೆರಾರಿನಲ್ಲಿ ವಾಸವಾಗಿದ್ದಾಗ ಆ ಸ್ಥಳದ ಜನರು ಅವನ ಹೆಂಡತಿಯನ್ನು ನೋಡಿ ಆಕೆಯ ವಿಷಯದಲ್ಲಿ ವಿಚಾರಿಸಿದಾಗ ಅವನು ರಬೆಕ್ಕಳು ಸುಂದರಿಯಾಗಿರುವುದರಿಂದ ಈ ಸ್ಥಳದ ಜನರು ಈಕೆಯ ನಿಮಿತ್ತ ನನ್ನನ್ನು ಕೊಂದಾರು ಅಂದುಕೊಂಡು ಆಕೆಯನ್ನು ತನ್ನ ಹೆಂಡತಿ ಎಂದು ಹೇಳುವದಕ್ಕೆ ಭಯಪಟ್ಟು ತಂಗಿಯಾಗಬೇಕು ಎಂದು ಹೇಳಿದನು. (ಆದಿಕಾಂಡ 26:6–7)

ಮೋಸ ಹಾಗೂ ವಂಚನೆಯಿಂದ ಯಾಕೂಬ್ ತನ್ನ ತಂದೆಯ ಅನುಗ್ರಹವನ್ನು ಪಡೆದರು ಹಾಗೂ ಹಿರಿಯ ಸಹೋದರ ಏಸಾವನ ಹಕ್ಕನ್ನು ಅನ್ಯಾಯವಾಗಿ ಕಸಿದುಕೊಂಡರು.

( ಆದಿಕಾಂಡ:1–38)

ಬೈಬಲ್‌ನ ವಿವರಣೆಯಂತೆ ಯಾಕೂಬ್‌ರ ಪತ್ನಿಯ ತಂದೆ ಲಾಬಾನ್ ಬಹಳ ಅಸೂಯೆಗಾರನೂ, ಪತ್ನಿ ರಫೆಲ್ ವಿಗ್ರಹಾರಾಧಕಿಯೂ ಆಗಿದ್ದರು. (ಆದಿಕಾಂಡ 29:25–30, 31:17–23) ಪ್ರವಾದಿ ಯಾಕೋಬರ ಪುತ್ರಿ ವ್ಯಭಿಚಾರಕ್ಕೊಳಗಾದಳೆಂದು, ಯಹೂದಾ ಮಗನ ಪತ್ನಿಯೊಂದಿಗೆ ವ್ಯಭಿಚಾರ ನಡೆಸಿದನೆಂದು ಬೈಬಲ್ ಹೇಳುತ್ತದೆ. (ಆದಿಕಾಂಡ 38:13–30)

ದೇವಸಂದೇಶವಾಹಕರಾದ ದಾವಿದ್ ತನ್ನ ದೇಶದ ಸೈನಿಕ ಊರಿಯನ ಪತ್ನಿ ಬತ್ ಶೇಬಳನ್ನು ವ್ಯಭಿಚರಿಸಿದ್ದಾರೆಂದೂ, ಅವಳನ್ನು ಪತ್ನಿಯಾಗಿಸಲು ಊರಿಯನನ್ನು ಯುದ್ಧರಂಗಕ್ಕೆ ಕಳಿಸಿ ಕೊಲ್ಲಿಸಿದ್ದೆಂದೂ ಬೈಬಲ್ ಹೇಳುತ್ತದೆ. (ಶಾಮುವೇಲ್ 11:1–16) ಪ್ರವಾದಿಯಾದ ಸೋಲಮನ್ ದೇವಾಜ್ಞೆಯನ್ನು ಧಿಕ್ಕರಿಸಿ ನಿಷೇಧಿಸಲಾದವರನ್ನು ವಿವಾಹ ಮಾಡಿಕೊಂಡರೆಂದು ಬೈಬಲ್‌ನಲ್ಲಿ ಕಾಣಬಹುದು. (ಅರಸುಗಳು 11:1–14)

ಗತಪ್ರವಾದಿಗಳ ಕಾಲಾನಂತರ ಅವರ ಅನುಯಾಯಿಗಳು ಪ್ರವಾದಿಗಳ ಬೋಧನೆಗಳಿಂದ ವ್ಯತಿಚಲಿಸಿ, ಪೈಶಾಚಿಕ ದುರ್ಬೋಧನೆಗಳಿಂದ ಆಕರ್ಷಿತರಾಗಿ, ತಮ್ಮ ಅಧಾರ್ಮಿಕತೆಯನ್ನು, ಅನೈತಿಕತೆಯನ್ನು ಪ್ರವಾದಿಗಳ ಮೇಲೆ ಆರೋಪಿಸಿ ಅದನ್ನು ವೇದಗ್ರಂಥಗಳಲ್ಲಿ ಸೇರಿಸಿಬಿಟ್ಟರು. ಹೀಗೆ ಅಪಭ್ರಂಶಗೊಂಡ ಗತವೇದಗ್ರಂಥಗಳ ಮುಂದವರಿದ ಭಾಗವೆಂದು ಪವಿತ್ರಕುರ್‌ಆನ್ ಕುರಿತು ಸ್ವಲ್ಪವಾದರೂ ಅರಿವಿರುವವರು ಆರೋಪಿಸಲಾರರು. ದೇವಸಂದೇಶವಾಹಕರ ಕುರಿತು ಪ್ರಚರಿಸಲಾದ ಕಟ್ಟುಕತೆಗಳನ್ನು ತಿದ್ದಿ ಅವರ ನೈಜತೆಯನ್ನು ಕುರ್‌ಆನ್ ಅನಾವರಣಗೊಳಿಸುತ್ತದೆ.

ಆದ್ದರಿಂದಲೇ ಬೈಬಲ್ ಹಲವು ಪ್ರವಾದಿಗಳನ್ನು ವಂಚಕರು, ಮೂರ್ಖರು, ಅನೈತಿಕತೆಯ ವಾಹಕರು, ಕ್ರೂರಿಗಳು, ಸುಳ್ಳುಗಾರರೆಂದು ಆರೋಪಿಸುವಾಗ ಪವಿತ್ರ ಕುರ್‌ಆನಿನ ಪ್ರಕಾರ ಅವರು ಯಾವುದೇ ಕಾಲಕ್ಕೂ ಮಾದರಿಯೋಗ್ಯವಾದ ಸದ್ಗುಣ ಸಂಪನ್ನರಾದ ಮಹಾನ್ ವ್ಯಕ್ತಿಗಳಾಗಿದ್ದಾರೆಂದೂ, ಅವರು ಸದಾಕಾಲವೂ ಮಾನವಕುಲದ ಮಾರ್ಗದರ್ಶಕರೆಂದೂ ಬಿಂಬಿಸುತ್ತದೆ.

## 20 ಕುರ್‌ಆನ್ ದೇವಗ್ರಂಥವೇ?

**ಕುರ್‌ಆನ್ ದೇವಗ್ರಂಥವೆಂದು ಮುಸ್ಲಿಮರು ಹೇಳುತ್ತಾರೆ. ಅದು ಮುಹಮ್ಮದರ ರಚನೆಯಲ್ಲವೆಂದೂ, ದೇವನಿಂದ ಬಂದದ್ದೆಂದೂ ನಂಬಲು ಇರುವ ಆಧಾರವಾದರೂ ಏನು?**

ಕುರ್‌ಆನ್ ದೇವಗ್ರಂಥ ಎಂಬುದಕ್ಕೆ ಆ ಗ್ರಂಥವೇ ಸಾಕ್ಷಿಯಾಗಿದೆ. ಪ್ರವಾದಿ ಮುಹಮ್ಮದ್(ಸ)ರಿಗೆ ಇಳಿಸಲ್ಪಟ್ಟ ಕುರ್‌ಆನ್‌ನ ಸ್ಪಷ್ಟ ಚಿತ್ರಣ ಮಾನವ ಸಮೂಹದ ಮುಂದಿದೆ. ಪ್ರವಾದಿಯ ಜೀವನದ ಒಳ-ಹೊರಗು, ರಹಸ್ಯಗಳು ಬಹಿರಂಗವಾದ ಎಲ್ಲಾ ಕಾರ್ಯಗಳೂ ಒಂದಿನಿತೂ ಬಿಟ್ಟುಹೋಗದೆ ದಾಖಲಾಗಿದೆ. ಆಧುನಿಕ ಮಹಾತ್ಮರ ಚರಿತ್ರೆಯು ಕೂಡಾ ಇಷ್ಟು ನಿಖರವಾಗಿ ದಾಖಲಿಸಲ್ಪಟ್ಟಿಲ್ಲ ಎಂಬುದು ವಾಸ್ತವ. ಅಜ್ಞಾನ ಅಂಧಕಾರದಿಂದ ತುಂಬಿದ್ದ ಆರನೇ ಶತಮಾನದಲ್ಲಿ ಅರೇಬಿಯಾದಲ್ಲಿ ಪ್ರವಾದಿಯವರ ಜನನವಾಯಿತು. ಮರುಭೂಮಿಯ ಮಡಿಲಲ್ಲಿ ಅನಾಥರಾಗಿ ಬೆಳೆದು ಬಂದರು. ಸಣ್ಣಂದಿನಲ್ಲಿ ಕುರುಬ ವೃತ್ತಿಯನ್ನು ಆಯ್ದುಕೊಂಡಿದ್ದ ಅವರು ಓದು ಬರಹ ಕಲಿತಿರಲಿಲ್ಲ, ಪಾಠಶಾಲೆಯಲ್ಲಿ ಅಥವಾ ಧಾರ್ಮಿಕ ಜ್ಞಾನಗಳಿಸುವ ತರಗತಿಗಳಲ್ಲೂ ಪಾಲ್ಗೊಳ್ಳುತ್ತಿರಲಿಲ್ಲ. ಅಂದು ಮಕ್ಕಾದ ಸಾಹಿತ್ಯರಂಗದಲ್ಲಿ ಪ್ರಸಿದ್ಧರಾದ ನೂರಾರು ಕವಿಗಳು ಸಾಹಿತಿಗಳು ಇದ್ದರೂ ಪ್ರವಾದಿ ಮುಹಮ್ಮದ್(ಸ)ರು 40 ವರ್ಷಗಳ ವರೆಗೆ ಒಂದು ಸಾಲು ಕವನವನ್ನೂ ಬರೆದಿರಲಿಲ್ಲ, ಭಾಷಣ ಕಲೆಯೂ ಪ್ರಕಟವಾಗಿರಲಿಲ್ಲ, ಪ್ರವಾದಿಯಾಗುವಂತಹ ಯಾವುದೇ ಛಾಯೆಯೂ ಗೋಚರಿಸಿರಲಿಲ್ಲ.

ಆಧ್ಯಾತ್ಮಿಕತೆಗೆ ಹೆಚ್ಚಿನ ಗಮನ ನೀಡುತ್ತಿದ್ದ ಮುಹಮ್ಮದ್(ಸ) ಮಕ್ಕಾದ ಕೆಡಕು ತುಂಬಿದ ಪರಿಸರದಿಂದ ದೂರವಾಗಿ ಧ್ಯಾನ ಹಾಗೂ ಪ್ರಾರ್ಥನೆಯಲ್ಲಿ ಕಳೆದರು. ಏಕಾಂತವಾಸವನ್ನು ಇಷ್ಟಪಟ್ಟರು. ಪವಿತ್ರ ಕಅಬಾದಿಂದ 3 ಕಿ.ಮೀ ದೂರದ ಬೆಟ್ಟದ ಹಿರಾಗುಹೆಯಲ್ಲಿ ಏಕಾಂತವಾಗಿರುವಾಗ ಅವರಿಗೆ ಪ್ರಥಮವಾಗಿ ದಿವ್ಯ ಸಂದೇಶ ಲಭಿಸಿತು. ನಂತರದ 23 ವರ್ಷಗಳಲ್ಲಿ ವಿವಿಧ ಸಂಧರ್ಭಗಳಲ್ಲಿ ಲಭಿಸಿದ ದಿವ್ಯ ಸಂದೇಶದ ಸಮಾಹಾರವೇ ಪವಿತ್ರ ಕುರ್‌ಆನ್. ಅದು ಸಾಮಾನ್ಯ ಅರ್ಥದಲ್ಲಿರುವ ಗದ್ಯವೋ ಪದ್ಯವೋ ಕವಿತೆಯೋ ಅಲ್ಲ, ಅದು ಅತ್ಯಂತ ವಿಶಿಷ್ಟ ಶೈಲಿಯಿಂದ ನಿತ್ಯನೂತನವಾಗಿದೆ. ಕುರ್‌ಆನನ್ನು ಅನುಕರಿಸಲು, ಅದರೊಂದಿಗೆ ಸ್ಪರ್ಧಿಸಲು, ಅಂತಹ ಇನ್ನೊಂದು ಗ್ರಂಥದ ರಚನೆ ಇದುವರೆಗೂ ಸಾಧ್ಯವಾಗಿಲ್ಲ, ಅಂತ್ಯದಿನದ ವರೆಗೆ ಅದು ಸಾಧ್ಯವೂ ಆಗುವುದಿಲ್ಲ.

ದೇವಸಂದೇಶವೆಂದು ಅನುಯಾಯಿಗಳು ಬಿಂಬಿಸುವ ಒಂದಕ್ಕಿಂತ ಹೆಚ್ಚು ಗ್ರಂಥಗಳು ಭೂಮಿಯಲ್ಲಿದೆ. ಆದರೆ ಸ್ವಯಂ ದೈವಿಕವೆಂದು ಹೇಳಿಕೊಳ್ಳುವ ಒಂದು ಗ್ರಂಥ ಮಾತ್ರ

ಲೋಕದಲ್ಲಿದೆ. ಅದುವೇ ಕುರ್‌ಆನ್. ಕುರ್‌ಆನ್ ದೇವನಿಂದ ಅವತೀರ್ಣಗೊಂಡಿದೆಯೆಂದು ಹಲವು ಭಾರಿ ಅದು ಪುನರಾವರ್ತಿಸುತ್ತದೆ. ಮಾತ್ರವಲ್ಲ ದೇವಗ್ರಂಥವೆಂಬ ಕುರಿತು ಯಾರಿಗಾದರೂ ಸಂಶಯವಿದ್ದರೆ 114 ಅಧ್ಯಾಯಗಳಿರುವ ಕುರ್‌ಆನ್ ಯಾವುದಾದರು ಒಂದು ಅಧ್ಯಾಯಕ್ಕೆ ಸಮಾನವಾದ ಅಧ್ಯಾಯವನ್ನು ರಚಿಸಿ ತನ್ನಿರಿ ಎಂದು ಕುರ್‌ಆನ್ ಪಂಥಾಹ್ವಾನ ನೀಡುತ್ತದೆ. ಅದಕ್ಕೆ ವಿಶ್ವದ ಎಲ್ಲ ಸಾಹಿತಿಗಳು, ಪಂಡಿತರು, ಬುದ್ಧಿ ಜೀವಿಗಳಂತಹವರಿಂದ ಸಹಾಯವನ್ನು ಪಡೆದುಕೊಳ್ಳಿರೆಂದು ಹೇಳಲಾಗಿದೆ. ಅಲ್ಲಾಹನನು ಹೇಳುತ್ತಾನೆ: **ನಾವು ನಮ್ಮ ದಾಸನಿಗೆ ಅವತೀರ್ಣಗೊಳಿಸಿದ ಈ ಗ್ರಂಥವು ನಮ್ಮದೋ ಅಲ್ಲವೋ ಎಂಬ ವಿಷಯದಲ್ಲಿ ನಿಮಗೆ ಸಂದೇಹವಿದ್ದರ ಇದಕ್ಕೆ ಸರಿಸಮಾನವಾದ ಒಂದು ಅಧ್ಯಾಯವನ್ನಾದರೂ ರಚಿಸಿ ತನ್ನಿರಿ, ಅಲ್ಲಾಹನ ಹೊರತು ನಿಮ್ಮೆಲ್ಲ ಸಾಕ್ಷಿಗಳನ್ನು ನಿಮ್ಮ ಸಹಾಯಕ್ಕಾಗಿ ಕರೆದು ತನ್ನಿರಿ, ನೀವು ಸತ್ಯವಾದಿಗಳಾಗಿದ್ದರೆ ಈ ಕಾರ್ಯವನ್ನು ಮಾಡಿತೋರಿಸಿರಿ. (ಪವಿತ್ರ ಕುರ್‌ಆನ್ 2:23)**

ಪ್ರವಾದಿಯವರ ಕಾಲದಿಂದ ಇಂದಿನವರೆಗೆ ಇಸ್ಲಾಮಿನ ವಿಮರ್ಶಕರಾದ ಅಸಂಖ್ಯಾತ ಸಾಹಿತಿಗಳು, ಕವಿಗಳು ಈ ಸವಾಲವನ್ನು ಸ್ವೀಕರಿಸಿ ಅದಕ್ಕಾಗಿ ಪ್ರಯತ್ನಿಸಿದ್ದಾರೆ. ಅವರೆಲ್ಲರಿಗೂ ಎರಡರಲ್ಲೊಂದು ಅನುಭವವಾಯಿತು. ಹೆಚ್ಚಿನವರು ತಮ್ಮ ಸೋಲನ್ನು ಒಪ್ಪಿಕೊಂಡು ಕುರ್‌ಆನಿನ ಅನುಯಾಯಿಗಳಾದರು. ಉಳಿದವರು ಸೋಲೊಪ್ಪಿಕೊಂಡು ಹಿಂದೆ ಸರಿದರು. ಪ್ರವಾದಿಯವರ ಕಾಲದ ಖ್ಯಾತ ಸಾಹಿತಿಗಳಾಗಿದ್ದ ಲಬೀದ್, ಹಸ್ಸಾನ್, ಕಅಬ್ ಇಬ್ನುಝುಹೈರ್ ಮೊದಲಾದವರು ಕುರ್‌ಆನಿನ ಮುಂದೆ ಶರಣಾದವರಲ್ಲಿ ಸೇರಿದ್ದಾರೆ. ಯಮನನಿಂದ ಬಂದ ತುಫೈಲರನ್ನು ಕುರ್‌ಆನ್ ಆಲಿಸದಂತೆ ಕುರೈಶರು ತಡೆದರು. ಯಾವುದೋ ಆತಂರಿಕ ಪ್ರಚೋದನೆಯಿಂದ ಕುರ್‌ಆನನ್ನು ಆಲಿಸಿದ ಪ್ರಮುಖ ಗಾಯಕ ಹಾಗೂ ಕವಿಯಾಗಿದ್ದ ಆತ ಹೇಳಿದ ಮಾತುಗಳು ಹೀಗಿತ್ತು: 'ದೇವನಾಣೆ, ಅವನು ಸರ್ವಶಕ್ತನೂ ಸರ್ವಜ್ಞನೂ ಆಗಿದ್ದಾನೆ. ನಾನೀಗ ಅರಬಿ ಸಾಹಿತ್ಯದ ಉತ್ಕೃಷ್ಟ ವಚನಗಳನ್ನು ಆಲಿಸಿದೆ. ನಿಸ್ಸಂಶಯವಾಗಿಯೂ ಅದು ಎಲ್ಲವುಗಳಿಗಿಂತ ಪವಿತ್ರವೂ ಅರ್ಥಪೂರ್ಣವು ಆಗಿದೆ. ಅದು ಎಷ್ಟೊಂದು ಮನೋಹರ ಆಕರ್ಷಣೀಯ, ಇಂತಹ ವಾಣಿಯನ್ನು ನಾನಿದುವರೆಗೆ ಆಲಿಸಿಲ್ಲ, ಅಲ್ಲಾಹನಾಣೆ, ಇದು ಮಾನವ ವಚನವಲ್ಲ, ದೇವವಾಣಿಯೆಂಬುದರಲ್ಲಿ ಒಂದಿಷ್ಟು ಸಂಶಯವಿಲ್ಲ.'

ಮುಗೀರರ ಮಗ ವಲೀದ್ ಇಸ್ಲಾಮಿನ ಹಾಗೂ ಪ್ರವಾದಿಯ ಪ್ರಮುಖ ಶತ್ರುವಾಗಿದ್ದನು. ಕುರ್‌ಆನ್ ಓದಿದ ಬಳಿಕ ಆತನ ಅಭಿಪ್ರಾಯ ಹೀಗಿತ್ತು; ಇದರಲ್ಲಿ ಅತ್ಯುನ್ನತ ಮಾಧುರ್ಯವಿದೆ, ಹೊಸತನವಿದೆ, ಅತ್ಯಂತ ಸಮೃದ್ಧವಾಗಿದೆ. ನಿಶ್ಚಯವಾಗಿಯೂ ಇದು ಅತ್ಯುನ್ನತ ಸ್ಥಾನಕ್ಕೆ ತಲುಪುತ್ತದೆ. ಇದನ್ನು ಮೀರಿಸಿದ ಬೇರೊಂದು ಇರುವುದು ಅಸಾಧ್ಯ. ಓರ್ವ ಮನುಷ್ಯನಿಂದ ಇದು ರಚನೆಯಾಯಿತೆಂದು ಊಹಿಸಲೂ ಸಾಧ್ಯವಿಲ್ಲ.

ಇದು ಅಬೂಜಹಲನನ್ನು ಅಸ್ವಸ್ಥಗೊಳಿಸಿತು. ಆತ ಹೇಳಿದ ವಿಷಯ ತಿಳಿದ ಪ್ರವಾದಿ ಶತ್ರು ಅಬೂಜಹಲ್ ವಲೀದ್‌ರ ಬಳಿ ಬರುತ್ತಾರೆ. ಕುರ್‌ಆನ್‌ನ ಕುರಿತು ಜನರಿಗೆ ಜಿಗುಪ್ಸೆ

ಮೂಡುವಂತಹ ಏನನ್ನಾದರೂ ಹೇಳಬೇಕೆಂದು ಬಿನ್ನವಿಸುತ್ತಾರೆ. ಅಸಹಾಯಕನಾದ ವಲೀದ್ ಹೇಳುತ್ತಾರೆ: ನಾನೇನೆಂದು ಹೇಳಲಿ. ಅರಬಿ ಸಾಹಿತ್ಯ ಪ್ರಕಾರಗಳಾದ ಗಾಯನ, ಪದ, ಗದ್ಯ, ಕವಿತೆ ಮೊದಲಾದ ಎಲ್ಲವುಗಳಲ್ಲೂ ನನಗೆ ನಿನಗಿಂತ ಹೆಚ್ಚು ಪರಿಜ್ಞಾನವಿದೆ. ಕುರ್‌ಆನ್‌ನ ವಾಣಿಗಳಿಗೆ ಅವುಗಳೊಂದಿಗೆ ಸ್ವಲ್ಪವೂ ಸಾಮ್ಯತೆ ಇಲ್ಲ, ಅಲ್ಲಾಹನಾಣೆ! ಅವುಗಳಿಗೆ ವಿಶೇಷ ಮಾಧುರ್ಯವೂ, ಸೌಂದರ್ಯವೂ ಇದೆ. ಅದರ ವಾಕ್ಯಗಳು ಫಲವತ್ತಾಗಿಯೂ, ಗೆಲ್ಲುಗಳು ಸುಂದರವಾಗಿಯೂ ಇದ್ದು ಎಲ್ಲಕ್ಕಿಂತಲೂ ಉತ್ಕೃಷ್ಟವಾಗಿದೆ. ಉಳಿದೆಲ್ಲವು ಇದಕ್ಕಿಂತ ಎಷ್ಟೋ ಕೆಳ ಸ್ತರದಲ್ಲಿವೆ. ತಾವು ಯಾರೆಂದು ನಿಮಗೆ ತಿಳಿದಿದ್ದೆಯೇ? ನೀವು ಅರೇಬಿಯಾದ ಅತ್ಯುನ್ನತ ನಾಯಕರಾಗಿದ್ದೀರಿ. ಯುವ ಸಮೂಹದ ಆರಾಧ್ಯರಾಗಿದ್ದೀರಿ. ಹಾಗಿದ್ದರೂ ನೀವೋರ್ವ ಅನಾಥನನ್ನು ಅನುಸರಿಸುವಿರಾ? ಅವನು ಹುಚ್ಚು ಮಾತುಗಳನ್ನು ಹಾಡಿ ಹೊಗಳುವಿರಾ? ನಿಮ್ಮಂತಹ ಮಹಾನುಭಾವರಿಗೆ ಅದು ಶೋಭಿಸುವುದಿಲ್ಲ, ಆದ್ದರಿಂದ ಮುಹಮ್ಮದ್‌ನನ್ನು ನಿಕೃಷ್ಟವಾಗಿಸುವಂತಹ ಮಾತುಗಳನ್ನು ಹೇಳಿ.

ಅಬೂಜಹಲನ ಉದ್ದೇಶ ಗುರಿತಪ್ಪಲಿಲ್ಲ, ಅಹಂಕಾರಕ್ಕೊಳಗಾದ ವಲೀದ್ ಹೇಳಿದರು, 'ಮುಹಮ್ಮದ್ ಓರ್ವ ಮಾಂತ್ರಿಕ. ಸಹೋದರರನ್ನು ಪರಸ್ಪರ ಕಚ್ಚಾಡಿಸುತ್ತಾನೆ. ಪತಿ-ಪತ್ನಿಯರನ್ನು ಬೇರ್ಪಡಿಸುತ್ತಾನೆ, ಕುಟುಂಬ ಸಂಬಂಧದಲ್ಲಿ ಬಿರುಕುಂಟು ಮಾಡುತ್ತಾನೆ. ಮುಹಮ್ಮದ್ ದೇಶದಲ್ಲಿ ಕಲಹ, ಗೊಂದಲವನ್ನು ಸೃಷ್ಟಿಸುವಂತಹ ಓರ್ವ ಜಾದುಗಾರನಾಗಿದ್ದಾನೆ.' ಎಷ್ಟೇ ಪ್ರಯತ್ನಿಸಿದರೂ ವಲೀದ್‌ನಂತಹ ಪ್ರಸಿದ್ಧ ಸಾಹಿತಿಗೆ ಕುರ್‌ಆನ್‌ನ ವಿರುದ್ಧ ಒಂದಕ್ಷರವೂ ಹೇಳಲು ಸಾಧ್ಯವಾಗಲಿಲ್ಲ ಎಂಬುದು ಗಮನಾರ್ಹ. 40 ವರ್ಷದವರೆಗೆ ಪ್ರವಾದಿಯವರು ಒಂದೇ ಒಂದು ಸುಳ್ಳು ಹೇಳಿರಲಿಲ್ಲ, ಆದ್ದರಿಂದ ಅಲ್‌ಅಮೀನ್ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದರು. ಅಂತಹ ಓರ್ವ ವ್ಯಕ್ತಿ ದೇವನ ವಿಷಯದಲ್ಲಿ ಸುಳ್ಳು ಹೇಳುತ್ತಾನೆಂದು ಊಹಿಸಲೂ ಸಾಧ್ಯವಿಲ್ಲ, ಮಾತ್ರವಲ್ಲ ಅತ್ಯುತ್ಕೃಷ್ಟವಾದ ಒಂದು ಗ್ರಂಥವನ್ನು ಸ್ವತಃ ರಚಿಸಿದವರು ಇದು ತನ್ನ ರಚನೆಯಲ್ಲ, ತನ್ನ ಪಾತ್ರ ಅದರಲ್ಲಿ ಏನೂ ಇಲ್ಲವೆಂದು ಹೇಳವುದು ಅಸಾಧ್ಯ. ಹಾಗೆ ಪ್ರವಾದಿಯವರು ಸ್ವತಃ ಕುರ್‌ಆನನ್ನು ತಾನೇ ರಚಿಸಿದ್ದೆಂದು ವಾದಿಸಿದ್ದರೆ, ಅರೇಬಿಯಾದ ಜನತೆ ಅವರನ್ನು ಬಹಳ ಗೌರವಿಸುತ್ತಿದ್ದರು. ಆದರೆ ಅವರು ಕಠಿಣ ಹಿಂಸೆಗಳಿಗೆ ಗುರಿಯಾಗಬೇಕಾಯಿತು.

ವಿಶ್ವದಲ್ಲಿ ಅಸಂಖ್ಯಾತ ಗ್ರಂಥಗಳು ರಚನೆಯಾಗಿವೆ. ಅವುಗಳಲ್ಲಿ ಹಲವು ಇತಿಹಾಸದಲ್ಲಿ ಕೆಲವುಬದಲಾವಣೆಯುಂಟುಮಾಡಲುಕಾರಣವಾಗಿದೆ. ಆದರೆಪವಿತ್ರಕುರ್‌ಆನ್‌ನಂತೆ, ಒಂದು ದೊಡ್ಡ ಜನತೆಯ ಜೀವನವನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿದ ಹಾಗೂ ಬದಲಾಯಿಸಿದ ಬೇರೊಂದು ಗ್ರಂಥವು ವಿಶ್ವದಲ್ಲಿಲ್ಲ, ವಿಶ್ವಾಸ, ಜೀವನದ ದೃಷ್ಟಿಕೋನ, ಆರಾಧನಾಕರ್ಮಗಳು, ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ, ಆಡಳಿತ, ಸಂಪ್ರದಾಯ ಸ್ವಭಾವ, ವರ್ತನೆ ಹೀಗೆ ಓರ್ವ ವ್ಯಕ್ತಿ, ಕುಟುಂಬ, ಸಮಾಜ, ದೇಶ ಹಾಗೂ

ವಿಶ್ವದ ಎಲ್ಲಾ ವ್ಯವಸ್ಥೆಗಳನ್ನು ಪವಿತ್ರಕುರ್‌ಆನ್ ಸಮಗ್ರವಾಗಿ ಬದಲಾಯಿಸಿತು. ನಿರಕ್ಷರನಾದ ಓರ್ವ ವ್ಯಕ್ತಿ ಈ ರೀತಿ ಒಂದು ಮಹಾಕ್ರಾಂತಿ ಸೃಷ್ಟಿಸುವ ಗ್ರಂಥವನ್ನು ರಚಿಸುತ್ತಾನೆಂಬುದು ಊಹಿಸಲಸಾಧ್ಯ. ಕುರ್‌ಆನ್ ಶತ್ರುಗಳನ್ನು ಮೂಕವಿಸ್ಮಿತಗೊಳಿಸಿ, ಆಕರ್ಷಿಸಿ, ಶರಣಾಗಿಸಿ, ಮಿತ್ರರಾಗಿ ಬದಲಾಯಿಸಿ ಅವರನ್ನು ಹೊಸ ಮನುಷ್ಯರನ್ನಾಗಿ ಮಾಡಿದ ಗ್ರಂಥವಾಗಿದೆ. 2ನೇ ಖಲೀಫ ಉಮರ್ ಫಾರೂಕ್(ರ) ಇದಕ್ಕೆ ಸ್ಪಷ್ಟ ಉದಾಹರಣೆಯಾಗಿದ್ದಾರೆ. ಇಂದು ಕೂಡಾ ಕುರ್‌ಆನನ್ನು ಕಲಿಯಲು ಸಿದ್ಧರಾಗುವವರು ಸುಲಭದಲ್ಲಿ ಅದರ ಅನುಯಾಯಿಗಳಾಗುತ್ತಾರೆ.

ಕುರ್‌ಆನ್ ಮಾನವ ಲೋಕದ ಮುಂದೆ ಒಂದು ಸಂಪೂರ್ಣ ಜೀವನ ವ್ಯವಸ್ಥೆಯನ್ನು ಸಮರ್ಪಿಸುತ್ತದೆ. ಮಾನವ ಮನಸ್ಸುಗಳಿಗೆ ಶಾಂತಿಯನ್ನು ನೀಡಿ, ವ್ಯಕ್ತಿಯ ಜೀವನವನ್ನು ಪವಿತ್ರಗೊಳಿಸುವ, ಕುಟುಂಬ ವ್ಯವಸ್ಥೆಯನ್ನು ಭದ್ರಪಡಿಸುವ ಸಾಮಾಜಿಕ ವ್ಯವಸ್ಥೆಯನ್ನು ಆರೋಗ್ಯಕರ ಹಾಗೂ ರಾಷ್ಟ್ರವನ್ನು ಸುಭದ್ರಗೊಳಿಸಿ ವಿಶ್ವದಲ್ಲಿ ಶಾಂತಿ ಸಮಾಧಾನ ಸ್ಥಾಪಿಸುವ ಒಂದು ಗ್ರಂಥವೂ ವಿಶ್ವದಲ್ಲಿ ಇಲ್ಲ, ವಿಶ್ವದ ಕೋಟಿಗಟ್ಟಲೆ ಕೃತಿಗಳಲ್ಲಿ ಒಂದೂ ಕೂಡಾ ಕುರ್‌ಆನ್‌ನಂತೆ ಸಮಗ್ರವಾದ ಜೀವನ ವ್ಯವಸ್ಥೆಯನ್ನು ಪ್ರತಿಪಾದಿಸುವುದಿಲ್ಲ. ನಿರಕ್ಷರಿಯಾದ ಓರ್ವ ವ್ಯಕ್ತಿಯಿಂದ ಇಂತಹ ಮಹಾನ್ ಗ್ರಂಥವನ್ನು ರಚಿಸಲು ಸಾಧ್ಯವಿಲ್ಲವೆಂದು ಬುದ್ಧಿಯಿರುವ ಯಾರಿಗೂ ತಿಳಿಯುವ ವಿಚಾರವಾಗಿದೆ.

ಮಾನವ ಚಿಂತನೆಯನ್ನು ಬಡಿದೆಬ್ಬಿಸಿ, ವಿಚಾರ, ವಿಶ್ವಾಸದಲ್ಲಿ ಆಮೂಲಾಗ್ರ ಬದಲಾವಣೆಯನ್ನು ಸೃಷ್ಟಿಸಿದ ಪವಿತ್ರಕುರ್‌ಆನ್‌ಗೆ ಸರಿಸಾಟಿಯಿಲ್ಲ, ಸರ್ವಕಾಲಕ್ಕೂ ಮಾದರಿಯೊಗ್ಯವಾದ ಸಮೂಹವನ್ನು ಬೆಳೆಸಿ ಹೊಸ ಸಂಸ್ಕೃತಿ–ನಾಗರಿಕತೆಗೆ ಅದು ಜನ್ಮ ನೀಡಿತು. 114 ಅಧ್ಯಾಯಗಳಲ್ಲಿ 6,000ಕ್ಕಿಂತಲೂ ಹೆಚ್ಚು ಸೂಕ್ತಗಳು ಅದರಲ್ಲಿದೆ. 86,000ಕ್ಕೂ ಅಧಿಕ ಪದಗಳು ಹಾಗೂ ಆ ಪದಗಳಲ್ಲಿ 32,40,000ರಷ್ಟು ಅಕ್ಷರಗಳಿರುವ ಕುರ್‌ಆನ್‌ನ ಮುಖ್ಯ ಉದ್ದೇಶ ಮಾನವಕುಲದ ಮಾರ್ಗದರ್ಶನವಾಗಿದೆ. 30 ಭಾಗಗಳಾಗಿ 540 ಕಾಂಡಗಳಾಗಿ ವಿಭಜಿಸಲಾಗಿರುವ ಈ ಗ್ರಂಥದ ಮೂಲ ಸಂಬೋಧಿತ ಮಾನವನಾಗಿದ್ದಾನೆ. ಅದರಲ್ಲಿ ಅವನ ಮಾರ್ಗದರ್ಶನಕ್ಕೆ ಸಹಾಯಕವಾಗುವ ರೀತಿಯಲ್ಲಿ, ಕುರ್‌ಆನ್‌ನ ಚಿಂತನೆಗಳನ್ನು ಅರ್ಥಮಾಡಿಕೊಳ್ಳಲು ಅಗತ್ಯವಿರುವ ಚರಿತ್ರೆಗಳು, ಉಪನ್ಯಾಸಗಳು, ವೈಜ್ಞಾನಿಕ ವಿಷಯಗಳು ಅದರಲ್ಲಿವೆ. ಆ ಕಾಲದಲ್ಲಿ ಜನರಿಗೆ ತೀರಾ ಅಪರಿಚಿತವಾಗಿದ್ದ ವಿಷಯಗಳನ್ನು ಕುರ್‌ಆನ್ ಅನಾವರಣಗೊಳಿಸಿತು.

ಅಲ್ಲಾಹನು ಹೇಳುತ್ತಾನೆ:

1. **'ಸತ್ಯನಿಷೇಧಿಗಳುಚಿಂತಿಸುವುದಿಲ್ಲವೇ? ಆಕಾಶಗಳೂಭೂಮಿಯೂಕೂಡಿಕೊಂಡಿದ್ದು ಅನಂತರ ನಾವು ಅವುಗಳನ್ನು ಬೇರ್ಪಡಿಸಿದ್ದನ್ನೂ ಪ್ರತಿಯೊಂದು ಜೀವಿಯನ್ನು ನೀರಿನಿಂದ ಸೃಷ್ಟಿಸಿದನ್ನೂ ಕಾಣಲಿಲ್ಲ?' (ಪವಿತ್ರ ಕುರ್‌ಆನ್ 21:30)** ಈ ವಿಷಯವನ್ನು ವಿಜ್ಞಾನರಂಗವು ಕುರ್‌ಆನ್ ಅವತೀರ್ಣವಾದ ಹಲವು ಶತಮಾನಗಳ ಬಳಿಕ ತಿಳಿದುಕೊಂಡಿತು.

2. ಪ್ರತಿಯೊಂದು ಜೀವಿಯನ್ನು ನೀರಿನಿಂದ ಸೃಷ್ಟಿಸಲಾಯಿತು (ಪವಿತ್ರ ಕುರ್‌ಆನ್21:30) ಈ ವಾಸ್ತವಿಕತೆಯನ್ನು ವಿಜ್ಞಾನಿಗಳು ಕೆಲವು ವರ್ಷಗಳ ಹಿಂದೆ ಕಂಡುಕೊಂಡರು.

3. ತರುವಾಯ ಅವನು ಆಕಾಶದ ಕಡೆಗೆ ಗಮನ ಹರಿಸಿದನು. ಆಗ ಅದು ಕೇವಲ ಹೊಗೆಯಾಗಿತ್ತು. (ಪವಿತ್ರ ಕುರ್‌ಆನ್41:11) ಈ ಸೃಷ್ಟಿಯ ರಹಸ್ಯವನ್ನು ವಿಜ್ಞಾನಿಗಳು ಇತ್ತೀಚೆಗಷ್ಟೇ ಅನಾವರಣಗೊಳಿಸಿದ್ದಾರೆ.

4. ಸೂರ್ಯನು ತನ್ನ ಸ್ಥಾನದ ಕಡೆಗೆ ಚಲಿಸುತ್ತಿದ್ದಾನೆ. ಪ್ರಬಲನು ಸರ್ವಜ್ಞನೂ ಆದವನ ನಿರ್ಣಯವಿದು. (ಪವಿತ್ರ ಕುರ್‌ಆನ್36:38)

ಕೋಪರ್ನಿಕಸ್ ರಂತಹ ಪ್ರಸಿದ್ಧ ವಿಜ್ಞಾನಿಗಳು ಸೂರ್ಯನು ನಿಶ್ಚಲನೆಂದು ನಂಬಿದವರಾಗಿದ್ದರು. ಇತ್ತೀಚೆಗಿನ ವರೆಗೂ ಸೂರ್ಯನು ಚಲಿಸುತ್ತಿರುವನೆಂಬ ಸತ್ಯವನ್ನು ವಿಜ್ಞಾನಿಗಳು ಒಪ್ಪಲು ಸಿದ್ಧರಾಗಿರಲಿಲ್ಲ. ಆದರೆ ಈಗ ಕೊನೆಗೂ ಕುರ್‌ಆನ್‌ನ ಪ್ರಸ್ತಾಪವು ಸತ್ಯವೆಂದು ಒಪ್ಪಕೊಳ್ಳಲು ನಿರ್ಬಂಧಿತರಾದರು.

5. ನಾವು ಆಕಾಶವನ್ನು ಒಂದು ಭದ್ರ ಮೇಲು ಛಾವಣಿಯನ್ನಾಗಿ ಮಾಡಿದೆವು, ಆದರೆ ಇವರಾದರೋ ವಿಶ್ವದ ನಿದರ್ಶನಗಳ ಕಡೆಗೆ ಗಮನಿಸುವುದೇ ಇಲ್ಲ. (ಪವಿತ್ರ ಕುರ್‌ಆನ್21:32) ಇತ್ತಿಚೆಗಿನ ವರೆಗೂ ಕುರ್‌ಆನ್‌ನ ವಿಮರ್ಶಕರು ಕುರ್‌ಆನ್‌ನ ಈ ಸೂಕ್ತದ ಕುರಿತು ಅಪಹಾಸ್ಯ ಮಾಡುವುದು ಸಾಮಾನ್ಯವಾಗಿತ್ತು. ಆದರೆ ಅತ್ಯಂತ ಮಾರಕವಾದ ಕೋಸ್ಮಿಕ್ ಕಿರಣಗಳಿಂದ ಭೂಮಿ ಮತ್ತು ಅದರಲ್ಲಿರುವ ಜೀವಜಾಲಗಳನ್ನು ಮತ್ತು ಮನುಷ್ಯರನ್ನು ರಕ್ಷಿಸುವ ಓಝೋನ್ ಪದರದ ಕುರಿತು ಎಲ್ಲರಿಗೂ ತಿಳಿದೇ ಇದೆ. ಅಂತರಿಕ್ಷದಲ್ಲಿ ಹರಡಿರುವ ಈ ಪರದೆಯು ಉಲ್ಕೆಗಳು ಭೂಮಿಯ ಮೇಲೆ ಬೀಳುವ ಅಪಾಯದಿಂದ ರಕ್ಷಿಸುತ್ತದೆ. ಕಾಲಮಾನವನ್ನು ನಿಯಂತ್ರಿಸುವಲ್ಲೂ ಅದರ ಪಾಲಿದೆ. ಪರಿಸರ ಮಲಿನೀಕರಣದಿಂದ ಓಝೋನ್ ಪದರಕ್ಕೆ ಧಕ್ಕೆ ಉಂಟಾಗುತ್ತದೆಂಬ ಭೀತಿಯನ್ನು ಪರಿಸರ ತಜ್ಞರು ನಿರಂತರ ವ್ಯಕ್ತಪಡಿಸುತ್ತಿದ್ದಾರೆ. ಆದ್ದರಿಂದ ಸುರಕ್ಷಿತ ಜೀವನ ಸಾಧ್ಯವಾಗ ಬೇಕಾದರೆ ಕುರ್‌ಆನ್ ಹೇಳಿದ ಸುರಕ್ಷಿತವಾದ ಮೇಲ್ಛಾವಣಿ ಅನಿವಾರ್ಯ. ಉಸಿರಾಟಕ್ಕೆ ಅನಿವಾರ್ಯವಾದ ವಾಯುಮಂಡಲವನ್ನು ಸ್ಥಿರವಾಗಿಡುವುದು ಈ ಮೇಲ್ಪದರವಾಗಿದೆ.

6. ಪರ್ವತಗಳನ್ನು ಮೊಳೆಗಳಂತೆ ನಾಟಿ ಬಿಟ್ಟಿರುವುದು (ಪವಿತ್ರ ಕುರ್‌ಆನ್ 78:7) ನಾವು ಭೂಮಿಯಲ್ಲಿ ಪರ್ವತಗಳನ್ನು ನಾಟಿ ಅದು ಇದರೊಂದಿಗೆ ಉರುಳಿಬಿಡದಂತೆ ಮಾಡಿದೆವು ಮತ್ತು ಜನರು ತಮ್ಮ ದಾರಿಯನ್ನು ಕಂಡುಕೊಳ್ಳುವಂತಾಗಲು ಅದರಲ್ಲಿ ವಿಶಾಲವಾದ ಮಾರ್ಗಗಳನ್ನು ಮಾಡಿದೆವು. (ಪವಿತ್ರ ಕುರ್‌ಆನ್21:31)

ಭೂಮಿಯ ಸಮತೋಲನದಲ್ಲಿ ಪರ್ವತಗಳ ಪಾತ್ರ ಇತ್ತೀಚಿನವರೆಗೆ ಅಜ್ಞಾತವಾಗಿತ್ತು. ಆದರೆ ಇಂದು ಭೂಕಂಪಗಳನ್ನು ತಡೆಯಲು ಹಾಗೂ ಭೂಗೋಳದ ಆಂತರಿಕ, ಬಾಹ್ಯ ಘಟಕಗಳನ್ನು ಸಂರಕ್ಷಿಸಲು ಅದು ಪ್ರಮುಖ ಪಾತ್ರವಹಿಸುತ್ತದೆಂದು ಭೂಗರ್ಭ ಸಂಶೋಧನೆಯಿಂದ ವ್ಯಕ್ತವಾಗಿದೆ.

7. ನಾವು ಆಕಾಶವನ್ನು ನಮ್ಮ ಶಕ್ತಿಯಿಂದ ಸೃಷ್ಟಿಸಿರುತ್ತೇವೆ. (ಪವಿತ್ರ ಕುರ್‌ಆನ್ 51:47) ಪ್ರಪಂಚ ಸೃಷ್ಟಿಯ ಕುರಿತು ಪ್ರಾಥಮಿಕ ಜ್ಞಾನವಿರುವವರಲ್ಲಿ ಆಶ್ಚರ್ಯ ಹುಟ್ಟಿಸಲು ಕುರ್‌ಆನಿನ ಈ ಸೂಕ್ತಗಳು ಪರ್ಯಾಪ್ತವಾಗಿದೆ.

8. ಹಾಲೆಂಡ್ ದೇಶದ ಸ್ವಾಮರ್ಡಾಂ ಎಂಬ ಪ್ರಾಣಿ ಶಾಸ್ತ್ರಜ್ಞರು ಜೇನುನೊಣಗಳಲ್ಲಿ ಗೂಡು ನಿರ್ಮಿಸಿ ಜೇನು ಉತ್ಪಾದಿಸುವುದು ಹೆಣ್ಣು ಜೇನುನೊಣವೆಂದು 1876ರಲ್ಲಿ ಕಂಡುಹಿಡಿದರು. ಆದರೆ ಇವೆರಡನ್ನು ಹೆಣ್ಣು ಜೇನುನೊಣಗಳು ಮಾಡುತ್ತದೆಂದು 14 ಶತಮಾನಗಳ ಹಿಂದೆ ಕುರ್‌ಆನ್ ಅದನ್ನು ಪರಾಮರ್ಶಿಸುವ ಸೂಕ್ತದಲ್ಲಿ ಸ್ತ್ರೀಲಿಂಗವನ್ನು ಪ್ರಯೋಗ ಮಾಡಿದೆ. (ಪವಿತ್ರ ಕುರ್‌ಆನ್16:68-69)

9. ವಿಶ್ವದ 600 ಕೋಟಿ ಮನುಷ್ಯರ ಕೈಬೆರಳುಗಳು 600 ಕೋಟಿ ರೂಪಗಳಲ್ಲಿವೆ. ಇದು ಸೃಷ್ಟಿಯ ಮಹಾವಿಸ್ಮಯವಾಗಿದೆ. ಕೈಬೆರಳಿನ ವಿಶೇಷವನ್ನು ಅರಿಯಲು ಮನುಷ್ಯನಿಗೆ ಹಲವಾರು ಶತಮಾನಗಳೇ ಉರುಳಿದವು. ಆದರೆ ಪವಿತ್ರ ಕುರ್‌ಆನ್ 14 ಶತಮಾನಗಳಿಗಿಂತ ಮೊದಲೇ ಇದರ ಬಗ್ಗೆ ಗಮನ ಸೆಳೆದಿತ್ತು.

'ನಾವು ಅವನ ಎಲುಬುಗಳನ್ನು ಒಟ್ಟುಗೂಡಿಸಲಾರವೆಂದು ಮಾನವನು ಭಾವಿಸುತ್ತಿರುವನೇ? ಯಾಕಿಲ್ಲ? ನಾವಂತು ಅವನ ಬೆರಳುಗಳ ತುದಿಗಳನ್ನು ಕೂಡಾ ಸರಿಯಾಗಿ ರಚಿಸಲು ಶಕ್ತರಾಗಿದ್ದೇವೆ.' (ಪವಿತ್ರ ಕುರ್‌ಆನ್ 75:3-4)

10. ಸೂರ್ಯನು ಬೆಳಕಿನಂತೆ ಸ್ವಯಂ ಪ್ರಕಾಶಿಸುತ್ತದೆಂದೂ, ಚಂದ್ರನು ಸೂರ್ಯ ಕಿರಣದಿಂದ ಪ್ರಕಾಶವನ್ನು ಪ್ರತಿಫಲಿಸುತ್ತದೆಂದೋ ಲೋಕವು ಇತ್ತಿಚೆಗಷ್ಟೇ ತಿಳಿದುಕೊಂಡಿತು. ಕುರ್‌ಆನ್ ಇದನ್ನು ಸುಸ್ಪಷ್ಟವಾಗಿ ಸೂಚಿಸಿದೆ 'ಆಕಾಶದಲ್ಲಿ ಬುರುಜುಗಳನ್ನು ಮಾಡಿದವನು ಮತ್ತು ಅದರಲ್ಲಿ ಒಂದು ದೀಪ ಮತ್ತು ಹೊಳೆಯುವ ಚಂದ್ರನನ್ನು ಬೆಳಗಿಸಿದವನು ಪರಮ ಮಂಗಳಮಯನು.' (ಪವಿತ್ರ ಕುರ್‌ಆನ್ 25:61) ಈ ದೀಪವು ಸೂರ್ಯನೆಂದು ದೇವಗ್ರಂಥ ಹೇಳುತ್ತದೆ. 'ಅವುಗಳಲ್ಲಿ ಚಂದ್ರನನ್ನು ಬೆಳಕಾಗಿಯೂ ಸೂರ್ಯನನ್ನು ದೀಪವಾಗಿಯೂ ಮಾಡಿರುವನು.' (ಪವಿತ್ರ ಕುರ್‌ಆನ್ 71:16)

11. ಮಾನವನ ಹುಟ್ಟಿನಲ್ಲಿ ಪುರುಷ ಬೀಜಾಣುವಿನ ಪಾತ್ರ ಮಾತ್ರವಿದೆಯೆಂದು 18ನೇ ಶತಮಾನದವರೆಗೂ ನಂಬಲಾಗಿತ್ತು. ಸ್ತ್ರೀಯರ ಗರ್ಭಾಶಯ ಮಗು ಬೆಳೆಯುವ ಸ್ಥಳ ಮಾತ್ರವೆಂದು ತಿಳಿಯಲಾಗಿತ್ತು. ಸ್ತ್ರೀ ಅಂಡಾಣುವಿನ ಪಾತ್ರ ನಂತರದ ದಿನಗಳಲ್ಲಿ ತಿಳಿದು ಬಂತು. ಕುರ್‌ಆನ್ ಮಾನವನ ಹುಟ್ಟಿನಲ್ಲಿ ಸ್ತ್ರೀ-ಪುರುಷರ ಪಾತ್ರವನ್ನು ಸ್ಪಷ್ಟಪಡಿಸಿದೆ. 'ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಸ್ತ್ರೀಯಿಂದ ಉಂಟುಮಾಡಿದೆವು.' (ಪವಿತ್ರ ಕುರ್‌ಆನ್49:13) ನಾವು ಮಾನವರನ್ನು ಒಂದು ಸಮ್ಮಿಶ್ರ ವೀರ್ಯದಿಂದ ಸೃಷ್ಟಿಸಿದೆವು. (ಪವಿತ್ರ ಕುರ್‌ಆನ್76:2)

12. ಮಗುವಿನ ಲಿಂಗನಿರ್ಣಯ ಮಾಡುವುದು ಪುರುಷ ಬೀಜವೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದ್ದರೂ, ವೈಜ್ಞಾನಿಕ ಜಗತ್ತು ಬಹಳ ತಡವಾಗಿ ಅದನ್ನು ತಿಳಿದುಕೊಂಡಿತು. 'ಒಂದು

ಹನಿಯು ತೊಟ್ಟಿಕ್ಕುವಾಗ, ಅವನೇ ಅದರಿಂದ ಗಂಡು ಮತ್ತು ಹೆಣ್ಣುಗಳ ಜೊತೆಯನ್ನುಂಟು ಮಾಡಿದನು.' (ಪವಿತ್ರ ಕುರ್‌ಆನ್ 53:46)

ಒಂದು ಹನಿ ವೀರ್ಯದಲ್ಲಿ ಅಸಂಖ್ಯಾತ ವೀರ್ಯಾಣುಗಳಿದ್ದರೂ ಅದರಲ್ಲೊಂದು ಮಾತ್ರ ಜನನದಲ್ಲಿ ಪಾತ್ರವಹಿಸುತ್ತದೆಂದು ಕುರ್‌ಆನ್ ಹೇಳಿದೆ. ಹೀಗೆ ವೈಜ್ಞಾನಿಕ ಜಗತ್ತು ಕಂಡು ಹಿಡಿದ ಹಲವು ವಾಸ್ತವಿಕತೆಗಳು ಪವಿತ್ರಕುರ್‌ಆನಲ್ಲಿ ದಾಖಲಾಗಿರುವುದು ಕಂಡುಬರುತ್ತದೆ. ಅದು ಆಳವಾದ ವಿವರಣೆಗಳನ್ನು ಬಯಸುವುದರಿಂದ ಇಲ್ಲಿ ಪ್ರಸ್ತಾಪಿಸುವುದಿಲ್ಲ.

13. ಎರಡು ಸಮುದ್ರಗಳನ್ನು ಸೇರಿಸಿಟ್ಟಿರುವವನು ಅವನೇ. ಒಂದು ರುಚಿಕರವೂ ಸಿಹಿಯೂ ಆಗಿದೆ. ಇನ್ನೊಂದು ಉಪ್ಪೂ ಕಹಿಯೂ ಆಗಿದೆ. ಇವೆರಡರ ಮಧ್ಯೆ ಒಂದು ತೆರೆ ಇದೆ ಅವು ಪರಸ್ಪರ ಬೆರೆಯದಂತೆ ಮಾಡುವ ಒಂದು ತಡೆ ಇದೆ. (ಪವಿತ್ರ ಕುರ್‌ಆನ್ 25:53)

ತುರ್ಕಿಯ ಅಮೀರುಲ್ ಬಹ್ರ್ ಸಯ್ಯದ್ ಅಲಿ ರಈಸ್‌ರವರು 16ನೇ ಶತಮಾನದಲ್ಲಿ ರಚಿಸಿದ ಮಿರ್‌ಅತುಲ್ ಮಮಾಲಿಕ್ ಎಂಬ ಗ್ರಂಥದಲ್ಲಿ ಪರ್ಶಿಯನ್ ಸಮುದ್ರದ ತಳಭಾಗದಲ್ಲಿ ಇಂತಹ ನೀರಿನ ಒರತೆಯಿದೆಯೆಂದು ಉಲ್ಲೇಖಿಸಲಾಗಿತ್ತು. ಆದರೆ ಅದನ್ನು ಕಂಡು ಹಿಡಿದ ಬಗ್ಗೆ ವಿವರವಿರಲಿಲ್ಲ. ಆದರೆ ಇತ್ತೀಚೆಗೆ ಬಹ್ರೈನ್ ತೀರದಿಂದ ಮೂರುವರೆ ಕಿಲೋಮೀಟರ್ ದೂರದ ಪರ್ಶಿಯನ್ ಸಾಗರದಲ್ಲಿ ಉಮ್ಮು ಸುವಾಲಿಯಲ್ಲಿ ಶುದ್ಧ ನೀರು ಉಪ್ಪು ನೀರಿನೊಂದಿಗೆ ಬೆರೆಯದಿರುವುದು ಕಂಡುಬಂದಿದೆ. ಹೀಗೆ ಶತಮಾನಗಳ ಬಳಿಕ ಕುರ್ ಆನ್ ತಿಳಿಸಿದ ವಿಷಯವನ್ನು ಕಂಡುಹಿಡಿಯಲು ಮಾನವ ಸಮೂಹಕ್ಕೆ ಸಾಧ್ಯವಾಯಿತು.

14. ಪ್ರವಾದಿ ನೂಹ್(ಅ)ರ ಹಡಗು ಜೂದಿ ಪರ್ವತದಲ್ಲಿ ತಂಗಿದೆಯೆಂದು ಕುರ್‌ಆನ್ ಹೇಳುತ್ತದೆ. (11:44) Charles Berlits ನೊಹರ ನಷ್ಟವಾದ ಹಡಗು (The lost Ship of Noah) ಎಂಬ ಗ್ರಂಥದಲ್ಲಿ 1883 ರಲ್ಲಿ ಪೂರ್ವ ತುರ್ಕಿಯ ಅರಾರತ್ ಪರ್ವತಶ್ರೇಣಿಯ ಜೂದಿ ಪರ್ವತದಲ್ಲಿ 450 ಅಡಿ ಉದ್ದ 150 ಅಡಿ ಅಗಲ ಹಾಗೂ 50 ಅಡಿ ಎತ್ತರವಿರುವ ಹಡಗು ಇರುವುದನ್ನು ಪತ್ತೆಹಚ್ಚಲಾಗಿದೆ ಎಂಬ ಉಲ್ಲೇಖವಿದೆ. ಪುರಾತತ್ವ ಸಂಶೋಧನೆಯ ವೇಳೆ ಪತ್ತೆಹಚ್ಚಲಾದ ಈ ಹಡಗು ಪ್ರವಾದಿ ನೊಹ್‌ರದ್ದೆಂದು ಈಗ ಅಂಗೀಕರಿಸಲಾಗಿದೆ.

ನಿರಕ್ಷರಿಯಾದ ಓರ್ವ ವ್ಯಕ್ತಿಯ ವಿಷಯ ಬಿಡಿ. 6 ನೇ ಶತಮಾನದಲ್ಲಿ ಎಲ್ಲಾ ವೈಜ್ಞಾನಿಕ ವಿಷಯಗಳನ್ನು ಅರೆದು ಕುಡಿದ ಮಹಾ ವಿದ್ವಾಂಸನಿಗೂ ಇಂತಹ ವಿಷಯ ಕಂಡು ಹಿಡಿಯಲು ಸಾಧ್ಯವಿಲ್ಲವೆಂಬುದು ಎಂತಹ ವ್ಯಕ್ತಿಗೂ ಅರ್ಥವಾಗುವ ವಿಚಾರ. ದೈವಿಕ ಗ್ರಂಥವೆಂದು ಸ್ವತಃ ಹೇಳಿಕೊಳ್ಳುವ ಒಂದು ಗ್ರಂಥವು ಅವತೀರ್ಣವಾದ ದಿನಗಳಲ್ಲಿ ಮಾತ್ರವಲ್ಲ, ನಂತರ ಹಲವು ಶತಮಾನಗಳ ವರೆಗೂ ಜಗತ್ತಿಗೆ ಅಜ್ಞಾತವಾಗಿದ್ದ ಬಹಳಷ್ಟು ವಿಚಾರಗಳನ್ನು ಬಹಿರಂಗಪಡಿಸುವ ಧೈರ್ಯ ತೋರಿಸಿದ್ದಲ್ಲದೆ, ನಂತರ ಅವುಗಳು ಸತ್ಯವೆಂದು ಸಾಬೀತಾಗಿರುವುದೇ ಕುರ್‌ಆನ್ ದೈವಿಕ ಗ್ರಂಥ ಎಂಬುದಕ್ಕೆ ನಿಷೇಧಿಸಲಾಗದ ಸಾಕ್ಷ್ಯವಾಗಿದೆ.

ಗಾಢ ಅಧ್ಯಯನಗಳಿಂದ ಹಲವು ಸಂಗತಿಗಳು ಮನವರಿಕೆಯಾಗಬಹುದು. ವಿಜ್ಞಾನ ವಿಸ್ಮಯಗಳನ್ನು ಕಂಡುಕೊಳ್ಳಲು ಸಾಧ್ಯವಾಗಬಹುದು. ಆದರೆ ಇತಿಹಾಸದ ಸತ್ಯಾವಳಿಗಳು

ಕೇವಲ ಚಿಂತನೆಯಿಂದ ಮೂಡಿಬರಲು ಸಾಧ್ಯವಿಲ್ಲ. ನಿರಕ್ಷರಿಯಾದ ಪ್ರವಾದಿಗೆ ಅವತೀರ್ಣಗೊಂಡ ಕುರ್‌ಆನ್ ಪೂರ್ವಿಕರ ಗತ ಇತಿಹಾಸವನ್ನು ಸವಿಸ್ತಾರವಾಗಿ ವಿವರಿಸುತ್ತದೆ. ಅವೆಲ್ಲಾ ವಸ್ತುನಿಷ್ಠವಲ್ಲವೆಂದು ಹೇಳಲು ಇಸ್ಲಾಮೀ ವಿಮರ್ಶಕರಿಗೆ ಸಾಧ್ಯವಾಗಿಲ್ಲ, ಮಾತ್ರವಲ್ಲ ಅವೆಲ್ಲಾ ವಾಸ್ತವಿಕತೆಗಳೆಂದು ಲಭ್ಯವಿರುವ ದಾಖಲೆಗಳಿಂದ ತಿಳಿದುಬಂದಿದೆ.

ದೇವಗ್ರಂಥವೆಂದು ಸ್ವತಃ ಹೇಳಿಕೊಳ್ಳುವ, ಹೇಳಿರುವ ಹಲವಾರು ಉಪನ್ಯಾಸಗಳು ಸತ್ಯವೆಂದು ಸಾಬೀತಾಗಿರುವುದು ಅದರ ಪವಾಡಕ್ಕೆ ಉದಾಹರಣೆಯಾಗಿದೆ. ಟಾಲ್‌ಸ್ಟಾಯ್, ವಿಕ್ಟರ್ ಯು ಗೋ, ಮಾಕ್ಸಿಂಗೋರ್ಕಿ, ಶೇಕ್ಸ್‌ಪಿಯರ್, ಗೊಯ್‌ಥೆ, ಶಿಲ್ಲಿ, ಮಿಲ್ಟನ್ ಮೊದಲಾದ ಪ್ರಖ್ಯಾತ ಸಾಹಿತಿಗಳನ್ನು ಲೋಕ ಕಂಡಿದೆ. ಅವರ ಸಾಹಿತ್ಯ ರಚನೆಗಳನ್ನು ಪರಿಚಯ ಮಾಡಿಕೊಂಡಿದೆ. ಆದರೆ ನೂರು ವರ್ಷ ಕಳೆಯುವಾಗಲೇ ವಿಶ್ವದ ಯಾವುದೇ ಪ್ರಸಿದ್ಧ ಗ್ರಂಥಗಳ ಹಲವು ಪದಗಳು, ಶೈಲಿ, ಉದಾಹರಣೆಗಳು ಕಾಲಹರಣವಾಗಿರುತ್ತದೆ.

ಯೇಸುವಿನ ಭಾಷೆಯಾದ ಅರಾಮಿಕ್‌ನಲ್ಲಿ ವಿಶ್ವದ ಎಲ್ಲಿಯೂ ಬೈಬಲ್ ಸಿಗುವುದಿಲ್ಲ. ಅದು ರಚನೆಯಾದ ಭಾಷೆಯಲ್ಲೂ, ಶೈಲಿಯಲ್ಲೂ ಉಳಿದಿಲ್ಲ. ಅನುವಾದಗಳಾದುದರಿಂದ ಅವುಗಳ ಭಾಷೆ ಮತ್ತು ಶೈಲಿ ನಿರಂತರ ಬದಲಾಗುತ್ತಲೇ ಇರುತ್ತದೆ. ಭಾರತದ ವೇದಭಾಷೆಯೂ ಕೂಡ ಇಂದು ಜನರು ಮಾತನಾಡುವ, ವ್ಯವಹಾರಗಳಲ್ಲಿ ಬಳಸುವ ಭಾಷೆಯಾಗಿ ಉಳಿದಿಲ್ಲ.

ಆದರೆ 14 ಶತಮಾನ ಕಳೆದ ಬಳಿಕವೂ ಕುರ್‌ಆನ್‌ನ ಭಾಷೆ, ಶೈಲಿ, ವಿಧಾನಗಳು, ಪ್ರಯೋಗಗಳು ಇಂದೂ ಅರೇಬಿಯಾದ ಅತ್ಯಂತ ಶ್ರೇಷ್ಠ, ಅನುಕರಣೀಯ ಭಾಷಾ ಶೈಲಿಯಲ್ಲಿ ಉಳಿದುಕೊಂಡಿದೆ. ಅರಬಿ ಭಾಷೆ ಅರ್ಥವಾಗುವ ಎಂಥವರನ್ನೂ ಅದು ಆಕರ್ಷಿಸುತ್ತದೆ. ಯಾರಿಗೂ ಇದರ ಆಶಯವನ್ನು ಸರಳವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಈ ರೀತಿ ನಿತ್ಯನೂತನವಾದ ಒಂದು ಗ್ರಂಥ ವಿಶ್ವದಲ್ಲಿ ಎಲ್ಲೂ, ಯಾವ ಭಾಷೆಯಲ್ಲೂ ಕಾಣಲು ಸಾಧ್ಯವಿಲ್ಲ.

ಆದರೆ ಇಷ್ಟೆಲ್ಲಾ ವಿವರಣೆಗಳಿಗಿಂತಲೂ ಹೆಚ್ಚಾಗಿ ಕುರ್‌ಆನ್ ದೈವಿಕ ಗ್ರಂಥವೆಂದು ಮನವರಿಕೆಯಾಗಲು ಅದರ ಓದು ಮತ್ತು ಅಧ್ಯಯನ ಅಗತ್ಯವಿದೆ. ಕುರ್‌ಆನ್ ದೈವಿಕವೆಂದು ತಾವು ಸೂಚಿಸಿದ ಎಲ್ಲಾ ಉದಾಹರಣೆಗಳು ಕುರ್‌ಆನ್‌ನಲ್ಲಿ ಇರುವ ವಿಚಾರವಲ್ಲವೆ? ಹಾಗಾದರೆ ಅದನ್ನು ನಂಬುವುದು ಹೇಗೆ? ಚಿನ್ನದ ಬಳೆ ಚಿನ್ನವೆಂದು ಸಾಬೀತಾಗಲು ಆ ಬಳೆಯೇ ಪುರಾವೆಯಾಗಿದೆ. ಮಾವು ಮಾವೆಂಬುದಕ್ಕೆ ಅದರ ಮರವೇ ಸಾಕ್ಷಿ, 'ಯುದ್ಧವೂ ಶಾಂತಿಯೂ' ಟಾಲ್‌ಸ್ಟಾಯ್‌ರ ಗ್ರಂಥವೆಂದೂ, 'ವಿಶ್ವಚರಿತ್ರಾವಲೋಕನಂ' ನೆಹರೂರವರದ್ದೆಂದೂ ಹೇಳುವುದಕ್ಕೆ ಆ ಗ್ರಂಥಗಳೇ ಸ್ವೀಕಾರಾರ್ಹ ಸಾಕ್ಷಿಯಾಗಿದೆ. ಅದೇ ರೀತಿ ಕುರ್‌ಆನ್ ದೈವಿಕವೆಂಬುದಕ್ಕೆ ಅತ್ಯಂತ ಪ್ರಬಲವು ಹಾಗೂ ನಿಷೇಧಿಸಲು ಅಸಾಧ್ಯವಾದ ಪುರಾವೆ ಆ ಗ್ರಂಥವೇ ಆಗಿದೆ.

# 21 ಇಸ್ಲಾಮ್ ಮತ್ತು ವಿಕಾಸವಾದ

**ವಿಜ್ಞಾನ ಲೋಕಕ್ಕೆ ಇಸ್ಲಾಮ್ ವಿರುದ್ಧವಾಗಿಲ್ಲವೆಂದು ಹೇಳುತ್ತಾರೆ, ಹಾಗಿದ್ದರೆ ಇಸ್ಲಾಮ್ ಡಾರ್ವಿನ್‌ನ ವಿಕಾಸವಾದವನ್ನು ಒಪ್ಪುತ್ತದೆಯೇ?**

ವೈಜ್ಞಾನಿಕ ಸಂಶೋಧನೆಗಳಿಂದ ರುಜುವಾತಾದ ಸತ್ಯಗಳಿಗೆ ಇಸ್ಲಾಮ್ ವಿರುದ್ಧವಾಗಿಲ್ಲ ಎಂಬುದು ಸರ್ವರಿಗೂ ತಿಳಿದ ವಿಚಾರ. ಆದರೆ ವೈಜ್ಞಾನಿಕ ನಿರೀಕ್ಷೆಗಳಿಗೋ, ಸಂಶಯಾಸ್ಪದ ಸಂಶೋಧನೆಗಳಿಗೋ ಇದು ಬಾಧಕವಲ್ಲ. ವಿಕಾಸವಾದ ಎಂಬುದು ವೈಜ್ಞಾನಿಕವಾಗಿ ಸಂಪೂರ್ಣ ಸರಿ ಎಂದು ಹೇಳುವ ಸಿದ್ಧಾಂತವಲ್ಲ. ಅದೊಂದು ಸಂಶಯ ಮಾತ್ರ.

ವಿಕಾಸವು ಎರಡು ವಿಧವೆಂದು ಜೀವಶಾಸ್ತ್ರಜ್ಞರು ಹೇಳುತ್ತಾರೆ. ಸೂಕ್ಷ್ಮ ಪರಿಣಾಮ ಮತ್ತು ಸ್ಥೂಲ ಪರಿಣಾಮ. ಒಂದು ವರ್ಗದಲ್ಲಿ (ಸ್ಪೀಶ್ಯಸ್) ನಡೆಯುವ ಆಂತರಿಕವಾದ ಕ್ಷುಲ್ಲಕ ಬದಲಾಣೆಗೆ ಸೂಕ್ಷ್ಮ ಪರಿಣಾಮಗಳು ಎನ್ನಲಾಗುತ್ತದೆ. ಮನುಷ್ಯರಲ್ಲಿ ಉದ್ದ, ಗಿಡ್ಡ, ಬಿಳಿಯ, ಕರಿಯ, ಗಂಡು-ಹೆಣ್ಣು, ಪ್ರತಿಭಾವಂತರು ಹಾಗೂ ಮಂದಬುದ್ಧಿಗಳು ಇರುತ್ತಾರೆ. ಒಂದೇ ಕುಟುಂಬ ಒಂದೇ ತಂದೆ ತಾಯಿಯ ಮಕ್ಕಳಲ್ಲೂ ಈ ವೈವಿಧ್ಯತೆಗಳು ಕಂಡುಬರುತ್ತದೆ. ಇಂತಹ ಬದಲಾವಣೆಗಳ ಸೂಕ್ಷ್ಮ ಪರಿಣಾಮವನ್ನು ಇಸ್ಲಾಮ್ ವಿರೋಧಿಸುವುದಿಲ್ಲ. ಆದರೆ ಒಂದು ಜೀವಿಯ ಇನ್ನೊಂದಾಗಿ ಪರಿವರ್ತನೆಗೊಳ್ಳುವುದೆಂಬ ಸ್ಥೂಲಪರಿಣಾಮದ ಕುರಿತು ವಿಭಿನ್ನ ಅಭಿಪ್ರಾಯಗಳಿವೆ. ಅದರಲ್ಲಿ ಸ್ವಲ್ಪವೂ ಸತ್ಯಾಂಶವಿಲ್ಲ. ಪರಸ್ಪರ ಹೊಂದಾಣಿಕೆಯಿಲ್ಲ. ಏಕೆಂದರೆ ಸ್ಥೂಲಪರಿಣಾಮಕ್ಕೆ ವೈಜ್ಞಾನಿಕವಾಗಿಯೂ, ಐತಿಹಾಸಿಕವಾಗಿಯೂ ಪುರಾವೆಯೇ ಇಲ್ಲ. ಕೇರಳದ ವಿಕಾಸವಾದದ ಪ್ರತಿಪಾದಕರಾದ ಡಾ। ಕುಂಞಣ್ಣಿ ವರ್ಮರವರು ಇದನ್ನು ಒಪ್ಪಿಕೊಳ್ಳುತ್ತಾರೆ. ''ಸಂಶೋಧನಾತ್ಮಕವಾದ ಸಾಕ್ಷ್ಯವಿಲ್ಲವೆಂದು ಸ್ಥೂಲಪರಿಣಾಮದ ಕುರಿತು ಮಾತ್ರ ಹೇಳಲಾಗಿದೆ. ಅದೇ ವೇಳೆ ವಿಕಾಸವಾದದ ಹಲವು ತತ್ವಗಳ ಕುರಿತು ಸೂಕ್ಷ್ಮ ಪರಿಣಾಮಗಳ ಕುರಿತು ಪರೀಕ್ಷೆಗಳನ್ನು ನಡೆಸಿ ತಾವು ಆಶಿಸಿದ ವಿಚಾರಗಳನ್ನು ಪಡೆಯಲು ಶಾಸ್ತ್ರಜ್ಞರಿಗೆ ಸಾಧ್ಯವಾಗಿದೆ.'' (ಉದ್ಧರಣೆ: ಸೃಷ್ಟಿವಾದವೂ, ಪರಿಣಾಮ ಸಿದ್ಧಾಂತವು ಪುಟ-33)

ವಿಕಾಸವಾದದ ಮೂಲಪುರುಷನೆಂದು ಹೇಳಲ್ಪಡುವ ಚಾರ್ಲ್ಸ್ ಡಾರ್ವಿನ್ ಕೂಡಾ ಅದನ್ನು ನಿಷೇಧಿಸಲಾಗದ ಸಿದ್ಧಾಂತವೆಂದು ದೃಢವಾಗಿ ಹೇಳುವುದಿಲ್ಲ. ಅವರು ಬರೆಯುತ್ತಾರೆ: 'ವಿಶೇಷ ರೂಪಗಳ ವ್ಯತ್ಯಾಸವು ಅವು ಅನೇಕ ಪರಿವರ್ತನೆಗಳೊಂದಿಗೆ ಸೇರಿಕೊಂಡಿಲ್ಲ ಎಂಬುದು ಬಹಳ ಸ್ಪಷ್ಟವಾದ ಸಮಸ್ಯೆಯಾಗಿದೆ.'

ಡಾರ್ವಿನ್ ಕೃತಿಯ ಒಂಭತ್ತನೇ ಅಧ್ಯಾಯದ ಶೀರ್ಷಿಕೆ ಭೂಗೋಳ ಶಾಸ್ತ್ರದ ಅಪೂರ್ಣತೆ ಎಂದು ಆಗಿದೆ. ಡಾರ್ವಿನ್ ನೀಡುವ ಪಾಸಿಬಲ್ ಅವಶೇಷಗಳ ವಿವರಣೆಯೇ ಅದರ ಮುಖ್ಯ ವಿಷಯ. ಅದರಲ್ಲಿ ಹೇಳಲಾಗಿದೆ. ಫೋಝಿಲ್ ಶೃಂಖಲೆಯ ಕುರಿತು ಡಾರ್ವಿನ್ ನೀಡುವ ವಿವರಣೆಗಳು ಎಂದು ಇದರ ಅರ್ಥ.

ಒಂದೇ ಗ್ರೂಪಿನ ವಿವಿಧ ಸ್ಪೀಶ್ಯಸ್‌ಗಳು ಹಳತಾದ ಪಾಲಿಯೋ ಸೋಯಿಕ್‌ನ ಮೊದಲ ಹಂತವಾದ ಸಿಲೂರಿಯನ್ ಅವಶೇಷಗಳಲ್ಲಿ ತಕ್ಷಣಕ್ಕೆ ಕಂಡುಬರುತ್ತದೆಂದು ಆ ಕಾಲದ ಉತ್ಖನನಗಳು ತಿಳಿಸಿಕೊಟ್ಟಿತು. ಸಿಲೂರಿಯನ್‌ನ ಸ್ವಲ್ಪ ಮುಂದಿನ ಕ್ರಸ್ಯೆಶ್ಯನ್ ಅವಶೇಷಗಳಲ್ಲಿ ಇವುಗಳ ಪೂರ್ವಿಕರನ್ನು ಕಾಣಬೇಕಾಗಿತ್ತು. ಆದರೆ ಅದೂ ಲಭಿಸಲಿಲ್ಲ. ಇದು ಅತ್ಯಂತ ನಿರಾಶಾದಾಯಕ ಸಮಸ್ಯೆಗಳೆಂದು ಒಪ್ಪಿಕೊಂಡು ಡಾರ್ವಿನ್ ಬರೆಯುತ್ತಾರೆ: 'ಈ ವಿಶಾಲವಾದ ಕಾಲಘಟ್ಟಗಳ ಗುರುತುಗಳು ಏಕೆ ಕಾಣುತ್ತಿಲ್ಲವೆಂಬ ಪ್ರಶ್ನೆಗೆ ಸರಿಯಾದ ಉತ್ತರವನ್ನು ನೀಡಲು ನನಗೆ ಸಾಧ್ಯವಿಲ್ಲ.' (ಒರಿಜಿನಲ್ ಆಫ್ ಸ್ಪೀಶ್ಯಸ್ ಪುಟ 313 ಉದ್ಧರಣೆ ಡಾರ್ವಿನಿಝಂ ಪ್ರತೀಕ್ಷೆಯೂ, ಪ್ರತಿಸಂಧಿಯೂ ಪುಟ 30)

ಚಾರ್ಲ್ಸ್ ಡಾರ್ವಿನ್ ರ ಬಳಿಕ ವಿಕಾಸವಾದ ಸಿದ್ಧಾಂತಕ್ಕೆ ಬಲ ನೀಡುವ ಯಾವುದೇ ಸಾಕ್ಷ್ಯವು ಲಭಿಸಲಿಲ್ಲವೆಂಬುದು ಗಮನಾರ್ಹವಾಗಿದೆ. ಚಿಕಾಗೋ ವಿಶ್ವವಿದ್ಯಾನಿಲಯದ ಭೂಗರ್ಭಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡೇವಿಡ್ ಎಂ. ರೂಫ್ ಬರೆಯುತ್ತಾರೆ: 'ನನ್ನ ಸಿದ್ಧಾಂತ ಹಾಗೂ ಫೋಸಿಲ್ (Fossil) ಸಾಕ್ಷ್ಯಗಳಿಗೂ ಮಧ್ಯೆ ಇರುವ ಗೊಂದಲಕ್ಕೆ ಸಾಮಾನ್ಯ ಪರಿಹಾರವಾಗಿ ಫೋಸಿಲ್ ರೇಖೆಯು ಬಹಳ ಅಪರೂಪವೆಂದು ಡಾರ್ವಿನ್ ಹೇಳಿದ್ದರು. ಡಾರ್ವಿನ್‌ರ ಬಳಿಕ 120 ವರ್ಷಗಳು ಕಳೆದುಹೋಗಿದೆ. ಫೋಸಿಲ್ ರೇಖೆಗಳ ಕುರಿತು ವಿಜ್ಞಾನ ಬಹಳಷ್ಟು ತಿಳಿದುಕೊಂಡಿದೆ. ನಮ್ಮಲ್ಲಿ ಈಗ ಎರಡು ಲಕ್ಷದ ಐವತ್ತು ಸಾವಿರ ವರ್ಗದ ಪಳೆಯುಳಿಕೆಗಳಿದ್ದರೂ ಸ್ಥಿತಿ ಬದಲಾಗಿಲ್ಲ. ಪರಿಣಾಮರೇಖೆ ಈಗಲೂ ಆಶ್ಚರ್ಯ ಹುಟ್ಟಿಸುವಂತೆಯೇ ಇದೆ. ವಿರೋಧಾಬಾಸವೆಂಬಂತೆ ಡಾರ್ವಿನ್‌ರ ಕಾಲದಲ್ಲಿರುವುದಕ್ಕಿಂತ ಕಡಿಮೆ ಪರಿಣಾಮದ ಉದಾಹರಣೆಗಳು ನಮಗಿದೆ. (Conflicts Between Darwinism and Paloeantolagy Bullettin Field Museum of Natural History Vol.50, Jan 1979, P:22 ಉದ್ಧರಣೆ Ibid ಪುಟ 23)

ಡಾರ್ವಿನಿಝಂನಲ್ಲಿ ವಿಕಾಸವಾದಿಗಳೇ ನಂಬಿಕೆ ಕಳೆದುಕೊಳ್ಳುತ್ತಿದ್ದಾರೆ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯವು 1982 ರಲ್ಲಿ ಹೊರತಂದ ಪ್ರಮುಖ ಪ್ರಾಣಿಶಾಸ್ತ್ರಜ್ಞನೂ ಪರಿಣಾಮ ಸಿದ್ಧಾಂತವಾದಿಯೂ ಆದ ಹೊವಾಡ್‌ರ ಡಾರ್ವಿನ್‌ರ ಕುರಿತ ಜೀವನ ಚರಿತ್ರೆಯ ಕೃತಿಗಳಲ್ಲಿ ಹೀಗಿದೆ: 'ಡಾರ್ವಿನ್‌ರ ಮರಣ ಶತಾಬ್ಧಿಯೊಂದಿಗೆ ವಿಜ್ಞಾನರಂಗಕ್ಕೆ ಡಾರ್ವಿನ್ ನೀಡಿರುವ ಕೊಡುಗೆಗಳ ಕುರಿತು ವ್ಯಾಪಕ ಸಂಶಯಗಳು ಹಾಗೂ ಗೊಂದಲಗಳು ಹುಟ್ಟಿಕೊಳ್ಳುತ್ತದೆ.' (ಉದ್ಧರಣೆ: ಸೃಷ್ಟಿವಾದವೂ ಪರಿಣಾಮವಾದಿಗಳೂ, ಪುಟ 54)

ಪ್ರಮುಖ ಪಳೆಯುಳಿಕೆ ಶಾಸ್ತ್ರಜ್ಞರಾದ ಸ್ಟೀಫನ್ ಗೌಲ್ಡ್ ಮತ್ತು ನೀಲ್ಸ್ ಎಲ್ಡ್ರೆಡ್ಜ್ ಡಾರ್ವಿನಿಝಂನ ಕುರಿತು ವಿಶ್ವಾಸ ಕಳೆದುಕೊಂಡಿದ್ದರಿಂದ ಹೊಸ ಸಿದ್ಧಾಂತವನ್ನು ಆವಿಷ್ಕರಿಸಿದರು. ವಿಶ್ವವಿಖ್ಯಾತ ವಿಕಾಸವಾದಿಗಳಿಗೆ ಕೂಡಾ ತಮ್ಮ ಸಿದ್ಧಾಂತದ ದೌರ್ಬಲ್ಯದ ಕುರಿತು ಚೆನ್ನಾಗಿ ತಿಳಿದಿದೆ. ಸತ್ಯವಂತರಾದ ಕೆಲವರು ಅದನ್ನು ಬಹಿರಂಗಪಡಿಸಿದ್ದಾರೆ. ಖ್ಯಾತ ಪುರಾತತ್ವ ತಜ್ಞರೂ, ಪರಿಣಾಮ ಸಿದ್ಧಾಂತವಾದಿಯೂ ಆದ ಡಾ। ಕೋಲಿನ್ ಪಾಟರ್ಸನ್ ಬರೆದ ಪತ್ರದಲ್ಲಿ ಹೀಗಿದೆ: 'ಆರ್ಕಿಯೋಪ್‌ಟೆರಿಕ್ಸ್' ಎಂಬುದು ಪಕ್ಷಿಸಂಕುಲದ ಪೂರ್ವಜ ಪಕ್ಷಿಯಾಗಿತ್ತೇ! ಬಹುಶಃ ಆಗಿರಬಹುದು. ಇಲ್ಲದಿರಲೂಬಹುದು. ಈ ಪ್ರಶ್ನೆಗೆ ಉತ್ತರಿಸಲು ಯಾವುದೇ ಮಾರ್ಗವಿಲ್ಲ, ಒಂದು ರೂಪದಿಂದ ಇನ್ನೊಂದು ರೂಪಕ್ಕೆ ಬದಲಾವಣೆ ಆದ ಕುರಿತು ಕಥೆ ಹೆಣೆಯಲು ಸುಲಭವಿದೆ. ಅದು ಯಾವ ರೀತಿ ಒಂದೊಂದು ಹಂತವನ್ನು ದಾಟಿತೆಂದೂ ಹೇಳಲು ಸಾಧ್ಯವಿದೆ. ಆದರೆ ಅಂತಹ ಕಥೆಗಳು ವಿಜ್ಞಾನದ ಭಾಗವಲ್ಲ, ಕಾರಣವೇನೆಂದರೆ ಅದನ್ನು ಪರೀಕ್ಷೆಗೊಳಪಡಿಸಲು ಸಾಧ್ಯವಿಲ್ಲ.(1979 ಎಪ್ರಿಲ್ 10 ರ ಪಾಟರ್ಸನ್ ರ ಪತ್ರ Scopes The Great Debatepp. 14-16 ಉದ್ಧರಣೆ: Ibid ಪುಟ 68)

ಪ್ರಖ್ಯಾತ ಸೃಷ್ಟಿವಾದದ ಬರಹಗಾರರಾಗಿದ್ದ ಸುನ್ದರ್ ಲ್ಯಾಂಡ್‌ರ ಪತ್ರಕ್ಕೆ ಉತ್ತರವಾಗಿತ್ತದು. ಆದರಲ್ಲಿ ಅವರು ಹೀಗೂ ಬರೆದಿದ್ದರು: ''ಪರಿಣಾಮ ಸಿದ್ಧಾಂತದ ರೀತಿಯು ಬದಲಾವಣೆಗಳಾದ ಪ್ರತ್ಯೇಕ್ಷವಾದ ಉದಾಹರಣೆಗಳು ನನ್ನ ಪುಸ್ತಕದಲ್ಲಿಲ್ಲದ ಕುರಿತು ತಮ್ಮ ಅಭಿಪ್ರಾಯವನ್ನು ನಾನು ಒಪ್ಪಿಕೊಂಡಿದ್ದೇನೆ. ಜೀವಂತವಿರುವ ಅಥವಾ ಪಳೆಯುಳಿಕೆ ರೂಪದಲ್ಲಿರುವ ಯಾವುದಾದರೂ ಒಂದರ ಕುರಿತು ನನಗೆ ತಿಳಿದಿರುತ್ತಿದ್ದರೆ ನಾನು ಖಂಡಿತ ಸೇರಿಸುತ್ತಿದ್ದೆ. ಅಂತಹ ಬದಲಾವಣೆಗಳನ್ನು ಓರ್ವ ಕಲಾಕಾರನ ಭಾವನೆಯಲ್ಲಿ ಚಿತ್ರೀಕರಿಸಬಹುದಿತ್ತೆಂದು ತಾವು ಹೇಳುತ್ತೀರಿ. ಆದರೆ ಅದರ ಕುರಿತು ಆತನಿಗೆ ವಿಷಯ ಎಲ್ಲಿಂದ ಲಭಿಸುತ್ತದೆ. ನಿಜ ಹೇಳಬೇಕೆಂದರೆ ನನ್ನಿಂದ ನೀಡಲು ಸಾಧ್ಯವಿಲ್ಲ.'' (Ibid ಪುಟ 68)

ವೈಜ್ಞಾನಿಕ ಸಂಶೋಧನೆಗಳು ಡಾರ್ವಿನ್ ವಿಕಾಸವಾದಕ್ಕೆ ಪೂರಕವಾಗಿದೆಯೆಂದು ಇತ್ತೀಚಿಗಿನ ವರೆಗೂ ಪ್ರಬಲವಾಗಿ ವಾದಿಸುತ್ತಿದ್ದ ಡಾ। ಎ. ಎನ್. ನಂಬೂದರಿ ಈಗ ಮಾತು ಬದಲಿಸಲು ನಿರ್ಬಂಧಿತರಾಗಿದ್ದಾರೆ. ಅವರು ಬರೆದರು: 'ವೈಜ್ಞಾನಿಕ ರಂಗದ ಹೊಸ ಬದಲಾವಣೆಗಳನ್ನು ತಾಳಿಕೊಳ್ಳಲು ಹಾಗೂ ತಮ್ಮ ನಿಲುವಿನಲ್ಲಿ ದೃಢವಾಗಿರಲು ಡಾರ್ವಿನಿಝಂಗೆ ಇದು ವರೆಗೂ ಸಾಧ್ಯವಾಯಿತು. ಆದರೆ ಈಗ ಚಿತ್ರಣ ಬದಲಾಗಿದೆ. ಡಾರ್ವಿನ್ ಸಿದ್ಧಾಂತಕ್ಕೆ ಸಂಪೂರ್ಣ ಮಸುಕಾಗಿಲ್ಲ, ಆದರೆ ಜೈವಿಯು ಇತಿಹಾಸದ ಕೆಲವು ಹಂತಗಳಲ್ಲಿ ವಿಕಾಸದ ಬದಲಾವಣೆಯ ರೀತಿ ಡಾರ್ವಿನ್ ಸಿದ್ಧಾಂತಕ್ಕೆ ಪೂರಕವಾಗಿಲ್ಲ ಎಂಬ ಸೂಚನೆಯಿದೆ. ಇದು ಡಾರ್ವಿನಿಝಂ ಎದುರಿಸುತ್ತಿರುವ ಮೊದಲ ಸವಾಲು. ( ಡಾರ್ವಿನಿಝಂ, ತಿರುವಿನಲ್ಲಿ, ಕಲಾಕೌಮುದಿ 1076, ಪುಟ 19)

ವೈಜ್ಞಾನಿಕ ಸತ್ಯಗಳ ವಿರುದ್ಧ ಕೇಳಿ ಬರುವ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರ ಲಭಿಸುತ್ತದೆ. ಆದರೆ ಪರಿಣಾಮ ಸಿದ್ಧಾಂತಕ್ಕೆ ಎದುರಾಗಿ ಕೇಳಿಬಂದ ಪ್ರಶ್ನೆಗಳಿಗೆ ಇದುವರೆಗೂ

ಸರಿಯುತ್ತರ ಲಭಿಸಿಲ್ಲ. ಉದಾಹರಣೆಗೆ ಒಂದನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇನೆ 'ಜೀವಿಗಳಲ್ಲಿ ನಿರಂತರ ಬದಲಾವಣೆಗಳು ಸಂಭವಿಸುತ್ತಿರುತ್ತದೆ. ಬದಲಾವಣೆಗಳು ಪ್ರಾಕೃತಿಕವಾಗಿಯೇ ಉಂಟಾಗುವುದರಿಂದ ಅದು ವಂಶಪಾರಂಪರ್ಯವಾಗಿ ಮುಂದುವರಿಯುತ್ತದೆ. ಅನುಕೂಲ ಗುಣಗಳು ಒಂದುಗೂಡಿ ಹೊಸ ಜೀವವರ್ಗಗಳು ಉಂಟಾಗುತ್ತದೆ' ಎಂಬುದು ಡಾರ್ವಿನರ ವಾದ. ಇದು ಸರಿಯಂದಾದರೆ ಸುಮಾರು ಮುನ್ನೂರುಕೋಟಿ ವರ್ಷಗಳಿಗಿಂತ ಮೊದಲೇ ಈ ಭೂಮಿಯಲ್ಲಿದ್ದ (ಈಗಲೂ ಇರುವ) ಏಕಕೋಶಜೀವಿಗಳಾದ ಅಮೀಬಗಳು ಹೇಗೆ ಉಳಿದುಕೊಂಡವು? ಇಂದು ಕಾಣುವ ಅಮೀಬಾಗಳು ಹಿಂದಿನ ತಲೇಮಾರುಗಳಲ್ಲಿ ನಿರಂತರ ಬದಲಾವಣೆ ಸಂಭವಿಸಿಲ್ಲವೇ? ಇಲ್ಲದಿದ್ದರೆ ಏಕೆ? ಮುನ್ನೂರು ಕೋಟಿ ವರ್ಷಗಳ ಹಿಂದಿನ ಏಕಕೋಶಜೀವಿಗಳು ಅದೇ ಸ್ಥಿತಿಯಲ್ಲಿ ಮುಂದುವರಿದು ಇನ್ನೊಂದು ವಿಭಾಗ ಅಸಂಖ್ಯಾತ ಹೊಸ ಜೀವವರ್ಗಗಳಿಂದ ಸಸ್ತನಿಗಳಾಗಲು ಕಾರಣವೇನು? ಇಂತಹ ಪ್ರಶ್ನೆಗಳು ಡಾರ್ವಿನ್ ವಿಕಾಸವಾದದ ನೈಜತೆಯನ್ನು ಪ್ರಶ್ನಿಸುವಂತಹದ್ದಾಗಿದೆ. ಈ ವಾಸ್ತವಿಕತೆಗಳು ತನ್ನನ್ನು ಸೋಲಿಸುತ್ತದೆಯೆಂದು ಡಾರ್ವಿನ್ ಒಪ್ಪಿಕೊಂಡಿದ್ದಾರೆ. 1860 ಮೇ 22ಕ್ಕೆ ಡಾರ್ವಿನ್‌ರ ಸಂಗಾಮಿಯಾದ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಸಸ್ಯಶಾಸ್ತ್ರಜ್ಞರಾಗಿದ್ದ ಅಸಗ್ರೇಕ್ ಬರೆದರು: ಪತ್ರಗಳ ಮೂಲಕ ಬಂದ ಅಭಿಪ್ರಾಯಗಳಿಂದ ಅರ್ಥಮಾಡಿಕೊಂಡಂತೆ ನನ್ನ ಕೃತಿಯ ಅತ್ಯಂತ ದೊಡ್ಡ ದೌರ್ಬಲ್ಯವೇನೆಂದರೆ ಎಲ್ಲ ಜೀವವರ್ಗಗಳು ವಿಕಾಸವಾಗುತ್ತದೆಂದಾದರೆ, ಏಕಕೋಶ ಜೀವಿಗಳು ಏಕೆ ಹಾಗೇ ಉಳಿದುಕೊಂಡಿದೆ ಎಂಬುದು ವಿವರಿಸಲು ಸಾಧ್ಯವಾಗದಿರುವುದಾಗಿದೆ.' ಫ್ರಾನ್ಸಿಸ್ ಡಾರ್ವಿನ್ ಬರೆದ The Life and Letters of Charls Darwin ಎಂಬ ಕೃತಿಯಿಂದ ಎಸ್.ಎಮ್. ಹುಸೈನ್. ಡಾರ್ವಿನಿಝುಂ, ಪ್ರತೀಕ್ಷೆಯೂ ಪ್ರತಿಸಂಧಿಯೂ ಪುಟ 18-19)

ವಿಕಾಸವಾದಿಗಳು ಆರಂಭ ಕಾಲದಲ್ಲಿ ತಮ್ಮ ವಾದಕ್ಕೆ ಪುರಾವೆಯಾಗಿ ಎತ್ತಿ ತೋರಿಸುತ್ತಿದ್ದ ಅರೆಮಾನವರೆಂದು ಹೇಳುವ ಪಳೆಯುಳಿಕೆಗಳು ಯಾವುದೋ ರೋಗದಿಂದ ಸಾವನ್ನಪ್ಪಿದ್ದ ಸಾಮಾನ್ಯ ಮನುಷ್ಯರ ಎಲುಬುಗಳನ್ನು ಸೇರಿಸಿದ್ದರೆಂದು ನಂತರ ತಿಳಿದುಬಂತು. ಅದರೊಂದಿಗೆ ಮೃಗವನ್ನು ಹೋಲುವ ಅರೆಮಾನವೇತರ ಮನುಷ್ಯರ ಕಥೆಯೂ ಅಷ್ಟೆ. ಅದಕ್ಕೆ ಬದಲಿಯಾದುದೊಂದು ಹೇಳಲು ವಿಕಾಸವಾದಿಗಳಿಗೆ ಸಾಧ್ಯವಾಗಿಲ್ಲ.

ಅರೆಮನುಷ್ಯನ ಕಥೆಯೂ ಇದೇ ಆಗಿದೆ. ಡಾರ್ವಿನ್ ಸಿದ್ಧಾಂತದಂತೆ ಇಂದಿನ ಮಾನವನು ಮಾನವೇತರ ಮತ್ತು ಅರೆಮಾನವೇತರ(ಮಂಗನಿಂದ ಮಾನವ) ಹಂತಗಳು ಮೂಲಕ ವಿಕಾಸವಾಗಿದ್ದಾನೆ. ಈ ಅನುಕ್ರಮ ವಿಕಾಸದ ಸುದೀರ್ಘ ಶ್ರೇಣಿಯಲ್ಲಿ ಮಾನವೇತರ ಸ್ಥಿತಿ ಮುಗಿದು 'ಮಾನವ ಕುಲ' ಆರಂಭವಾದ ನಿರ್ದಿಷ್ಟ ಬಿಂದುವನ್ನು ಬೊಟ್ಟು ಮಾಡಲು ಸಾಧ್ಯವಾಗಿಲ್ಲ. ಅರೆಮಾನವನೆಂದು ಹೇಳಲಾಗುವ ಅಸ್ಥಿಗೆ ಮಂಗನ ಗಲ್ಲದ ಎಲುಬನ್ನು ಕೃತಕವಾಗಿ ತಲೆಬುರುಡೆಗೆ ಸೇರಿದೆಯೆಂದು ನಂತರದ ದಿನಗಳಲ್ಲಿ ತಿಳಿದುಬಂದಿತ್ತು. ಇವೆಲ್ಲಾ

ಡಾರ್ವಿನ್‌ನ ಸಿದ್ಧಾಂತವನ್ನು ಕಥಾವಸ್ತುಗೊಳಿಸುವಲ್ಲಿ ಪ್ರಥಮ ಪಾತ್ರವನ್ನು ವಹಿಸಿದೆ.

ಸಂಕ್ಷಿಪ್ತವಾಗಿ ಹೇಳುವುದಿದ್ದರೆ ಡಾರ್ವಿನ್‌ನ ವಿಕಾಸವಾದಕ್ಕೆ ವೈಜ್ಞಾನಿಕ ಸಾಕ್ಷ್ಯವೋ, ಬೆಂಬಲವೋ ಇಲ್ಲ, ಕೆಲವು ದುರ್ಬಲ ಭಾವನೆಗಳು, ಅನುಮಾನಗಳು ಮಾತ್ರ ಈ ಸಿದ್ಧಾಂತದಲ್ಲಿ ಕಾಣಿಸಿಕೊಂಡಿದೆ. ಅದರ ವಿಶ್ವಾಸಾರ್ಹತೆಯೂ ದಿನೇ ದಿನೇ ನಷ್ಟವಾಗುತ್ತಿದೆ. ಇಂತಹ ಒಂದು ದುರ್ಬಲ ಸಿದ್ಧಾಂತವನ್ನು ಇಸ್ಲಾಮ್ ಅಂಗೀಕರಿಸುತ್ತದೊ? ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಡಾರ್ವಿನ್‌ರ ವಿಕಾಸವಾದವು ವೈಜ್ಞಾನಿಕವಾಗಿ ಸಾಬೀತಾದರೆ ಮಾತ್ರ ಇಸ್ಲಾಮ್‌ನ ದೃಷ್ಟಿಕೋನದೊಂದಿಗೆ ಹೋಲಿಸಲು ಸಾಧ್ಯ.

## 22 ಧರ್ಮ ಯಾವುದಾದರೇನು? ಮನುಷ್ಯ ಒಳ್ಳೆಯವನಾದರೆ ಸಾಲದೇ ?

ಧರ್ಮವು ದೇವನದ್ದಾಗಿದ್ದರೆ ವಿಶ್ವದಲ್ಲಿ ವಿವಿಧ ಧರ್ಮಗಳು ಇರಲು ಕಾರಣವೇನು? ವಿವಿಧ ದೇಶಗಳಿಗೆ ಹಾಗೂ ಕಾಲಗಳಿಗೆ ದೇವನು ಬೇರೆ ಬೇರೆ ಧರ್ಮವನ್ನು ನೀಡಿದ್ದಾನೆಯೇ? ಹಾಗಿದ್ದರೆ ವಿವಿಧ ಧರ್ಮಗಳ ನಡುವೆ ಭಿನ್ನತೆಯೂ ವಿರೋಧಾಭಾಸವೂ ಕಂಡುಬರಲು ಕಾರಣವೇನು?

ಮಾನವ ಕುಲಕ್ಕೆ ಸರ್ವಶಕ್ತನಾದ ದೇವನು ನೀಡಿರುವ ಜೀವನ ವ್ಯವಸ್ಥೆಯನ್ನು ಧರ್ಮ ಎನ್ನಲಾಗುತ್ತದೆ. ಮನುಷ್ಯನೆಂದರೆ ಯಾರು? ಏನು? ಎಲ್ಲಿಂದ ಬಂದಿದ್ದಾನೆ? ಎಲ್ಲಿಗೆ ಹೋಗಲಿದ್ದಾನೆ? ನಮ್ಮ ಜೀವನ ಯಾವ ರೀತಿ ಇರಬೇಕೆಂದೂ, ಮರಣಾನಂತರ ನಮ್ಮ ಅವಸ್ಥೆಯೇನೆಂದು ಧರ್ಮವು ಮನುಷ್ಯನಿಗೆ ಕಲಿಸಿಕೊಡುತ್ತದೆ. ಹೀಗೆ ಜನರನ್ನು ಸನ್ಮಾರ್ಗದತ್ತ ಮುನ್ನಡೆಸಿ ಶಾಶ್ವತ ವಿಜಯಕ್ಕೆ ಧರ್ಮವು ತಲುಪಿಸುತ್ತದೆ ಅಥವಾ ತಲುಪಿಸಬೇಕಾಗುತ್ತದೆ. ದೇವನು ಒಂದು ಸಮಗ್ರ ಜೀವನ ವ್ಯವಸ್ಥೆಯನ್ನು ಕಾಲ ದೇಶಗಳ ಭೇದವಿಲ್ಲದೆ ಎಲ್ಲಾ ಜನಾಂಗಗಳಿಗೂ ಕರುಣಿಸಿದ್ದಾನೆ. ತನ್ನ ಸಂದೇಶವಾಹಕರ ಮೂಲಕ ಈ ಕಾರ್ಯವನ್ನು ನಿರ್ವಹಿಸಿದ್ದಾನೆ. ಎಲ್ಲ ಸಂದೇಶವಾಹಕರು ಮಾನವಕುಲಕ್ಕೆ ನೀಡಿರುವ ಜೀವನವ್ಯವಸ್ಥೆಯು ಒಂದೇ ಆಗಿದೆ. ಅಲ್ಲಾಹನು ಹೇಳುತ್ತಾನೆ: **''ನಾವು ಪ್ರತಿಯೊಂದು ಸಮುದಾಯದಲ್ಲಿ ಓರ್ವ ಸಂದೇಶವಾಹಕನನ್ನು ಕಳುಹಿಸಿದೆವು ಮತ್ತು ಅಲ್ಲಾಹನ ದಾಸ್ಯ-ಆರಾಧನೆ ಮಾಡಿರಿ ಮತ್ತು 'ತಾಗೂತ'ನ ಆರಾಧನೆಯಿಂದ ದೂರವಿರಿ '' ಎಂದು ಅವರ ಮುಖಾಂತರ ಎಚ್ಚರಿಕೆ ನೀಡಿದೆವು.** (ಪವಿತ್ರ ಕುರ್‌ಆನ್ 16:36)

ಹೀಗೆ ಒಂದು ಜನಾಂಗಕ್ಕೆ ಸಂದೇಶವಾಹಕರು ನಿಯುಕ್ತರಾಗುತ್ತಾರೆ. ತನ್ನ ಜನತೆಯನ್ನು ಸನ್ಮಾರ್ಗದಡೆಗೆ ಕರೆಯುತ್ತಾರೆ. ಆಗ ಅದರಲ್ಲಿ ಒಂದು ವಿಭಾಗ ಪ್ರವಾದಿಗಳನ್ನು ಅನುಸರಿಸುತ್ತದೆ. ಇನ್ನೊಂದು ವಿಭಾಗ ತಮ್ಮ ಪೂರ್ವ ಧರ್ಮದಲ್ಲೆ ಅಚಲರಾಗಿರುತ್ತದೆ. ಸಂದೇಶವಾಹಕರ ವಿಯೋಗದ ನಂತರ ಕೆಲವೇ ವರ್ಷಗಳಲ್ಲಿ ಅಥವಾ ದೀರ್ಘಕಾಲದ ನಂತರ ಅವರ ಅನುಯಾಯಿಗಳು ದೈವಿಕ ಮಾರ್ಗದಿಂದ ದೂರಸರಿಯುತ್ತಾರೆ. ಸ್ವಾರ್ಥಿಗಳಾದ ಪಂಡಿತ, ಪುರೋಹಿತರು ಅವರಲ್ಲಿ ಮೂಢನಂಬಿಕೆ ಹಾಗೂ ಅನಾಚಾರಗಳನ್ನು ಬೆಳೆಸುತ್ತಾರೆ. ಹೀಗೆ

ಜನಸಮೂಹವು ದೇವಮಾರ್ಗದಿಂದ ಸಂಪೂರ್ಣ ದೂರವಾದಾಗ ಅಲ್ಲಾಹನನು ಪುನಃ ಪ್ರವಾದಿಗಳನ್ನು ಕಳಿಸುತ್ತಾನೆ. ಸಮೂಹದ ಒಂದು ವಿಭಾಗ ಇವರನ್ನು ಅನುಸರಿಸಿದರೆ ಇನ್ನೊಂದು ಪೂರ್ವಿಕರ ಧರ್ಮದಲ್ಲೇ ದೃಢವಾಗಿರುತ್ತದೆ. ಇದರೊಂದಿಗೆ ಪ್ರವಾದಿಯನ್ನು ಅನುಸರಿಸುವವರದೊಂದು ಧರ್ಮ ಮತ್ತು ಅನುಸರಿಸದವರದು ಇನ್ನೊಂದು ಧರ್ಮವಾಗಿ ರೂಪುಗೊಳ್ಳುತ್ತದೆ. ವಾಸ್ತವದಲ್ಲಿ ಎಲ್ಲಾ ಪ್ರವಾದಿಗಳು ಜನತೆಯನ್ನು ಏಕದೇವಾರಾಧನೆಯ ಕಡೆಗೆ ಕರೆದಿದ್ದಾರೆ ಮತ್ತು ಅವನ ಜೀವನ ವ್ಯವಸ್ಥೆಯನ್ನೇ ಪರಿಚಯಪಡಿಸಿದ್ದಾರೆ. ಇಸ್ರಾಯೀಲರು ದೇವಮಾರ್ಗದಿಂದ ದೂರವಾದಾಗ ಅವರನ್ನು ಸನ್ಮಾರ್ಗದೆಡೆಗೆ ಅಹ್ವಾನಿಸಲು ಪ್ರವಾದಿ ಮೋಶೆ(ಮೂಸಾ)ರನ್ನು ನಿಯೋಗಿಸಲಾಯಿತು. ನಂತರ ಅವರ ಅನುಯಾಯಿಗಳು ಧರ್ಮದಿಂದ ದೂರಸರಿದಾಗ ಈಸಾ(ಅ) (ಯೇಸು)ರನ್ನು ನಿಯೋಗಿಸಲಾಯಿತು. ಅವರ ಆಹ್ವಾನವನ್ನು ನಿರಾಕರಿಸಿ ತಮ್ಮ ದುರಾಚಾರದಲ್ಲೇ ಉಳಿದವರು ಯಹೂದಿಗಳಾದರು. ಅವರನ್ನು ಅನುಸರಿದವರು ಕ್ರೈಸ್ತರಾದರು. ಹೀಗೆ ಜನಸಮೂಹವು ಸನ್ಮಾರ್ಗದಿಂದ ದೂರಸರಿಯುವಾಗ ಅವರನ್ನು ನೇರಮಾರ್ಗಕ್ಕೆ ಆಹ್ವಾನಿಸಲು ನಿಯೋಜಿತರಾಗುವ ಪ್ರವಾದಿಗಳನ್ನು ಒಪ್ಪಿಕೊಳ್ಳದೆ ತಮ್ಮ ಪೂರ್ವಿಕರ ಆಚಾರದಲ್ಲೇ ಉಳಿದುದರಿಂದ ಲೋಕದಲ್ಲಿ ಹಲವಾರು ಧರ್ಮಗಳು ಹುಟ್ಟಿದುವು. ಅವುಗಳ ನಡುವೆ ಭಿನ್ನತೆಯೂ, ವಿರೋಧಾಭಾಸವೂ ಇದೆ.

ನದಿಗಳು ವಿವಿಧೆಡೆಗಳಲ್ಲಿ ಹುಟ್ಟಿ, ಹಲವು ದಾರಿಗಳಿಂದ ಹರಿದು ಸಮುದ್ರವನ್ನು ತಲುಪುತ್ತವೆ. ಅದೇ ರೀತಿ ಮನುಷ್ಯನು ವಿವಿಧ ಮಾರ್ಗಗಳಿಂದ ದೇವನೆಡೆಗೆ ತಲುಪುತ್ತಾನೆ. ಆದ್ದರಿಂದ ಶ್ರೀನಾರಾಯಣಗುರು ಹೇಳಿದಂತೆ ಧರ್ಮ ಯಾವುದೇ ಆದರೂ ಮನುಷ್ಯನು ಒಳ್ಳೆಯವನಾದರೆ ಸಾಕು ಎಂಬುದು ಸರಿಯಲ್ಲವೇ?

ಧರ್ಮವು ಸೃಷ್ಟಿಕರ್ತನ ಪ್ರೀತಿ ಮತ್ತು ಪ್ರತಿಫಲವನ್ನು ಪಡೆಯಲು ನಾನು ಅನುಸರಿಸಬೇಕಾದ ಮಾರ್ಗವಾಗಿದೆ. ತನ್ನ ಕಡೆಗೆ ಬಂದು ತಲುಪಬೇಕಾದ ದಾರಿ ಯಾವುದೆಂದು ಆತನೇ ನಿರ್ಧರಿಸಬೇಕು. ಅದನ್ನು ದೇವನು ನಿಶ್ಚಯಿಸಿ ತನ್ನ ಸಂದೇಶವಾಹಕರ ಮೂಲಕ ಮಾನವಸಮೂಹಕ್ಕೆ ತಿಳಿಸಿಕೊಟ್ಟಿದ್ದಾನೆ.

ಪರಸ್ಪರ ವಿರುದ್ಧ ವಿಷಯಗಳು ಏಕಕಾಲಕ್ಕೆ ಸರಿಯಾಗಲು ಸಾಧ್ಯವಿಲ್ಲವೆಂಬುದರಲ್ಲಿ ಸಂಶಯವಿಲ್ಲ, ಗಣಿತದಲ್ಲಿ ಎರಡು ಮತ್ತು ಎರಡು ಸೇರಿದರೆ ನಾಲ್ಕು ಆಗುತ್ತದೆ ಎಂಬ ಉತ್ತರ ಸರಿ. ಅದೇ ವೇಳೆ ಮೂರೆಂದೂ, ಐದೆಂದೂ ಹೇಳಿದರೆ ತಪ್ಪಾಗುತ್ತದೆ. ಆಮ್ಲಜನಕ ಮತ್ತು ಜಲಜನಕ ಸೇರಿದರೆ ನೀರುಂಟಾಗುತ್ತದೆ ಎಂಬುದು ಸತ್ಯ ಸಂಗತಿ. ಆದರಿಂದ ಮದ್ಯ ಉಂಟಾಗುತ್ತದೆಂದು ಹೇಳಿದರೆ ತಪ್ಪಾಗುತ್ತದೆ. ಹೀಗೆ ಧರ್ಮದಲ್ಲಿ ಸತ್ಯಯಾವುದು ಅಸತ್ಯ ಯಾವುದು? ಎಂಬುದು ಮಹತ್ವದ ಪ್ರಶ್ನೆಯಾಗುತ್ತದೆ. ಅದ್ವೈತ ಸಿದ್ಧಾಂತ ಸರಿಯೆಂದು ದ್ವೈತವು ಸುಳ್ಳೆಂದು ಶ್ರೀ ಶಂಕರಾಚಾರ್ಯರು ಹೇಳುತ್ತಾರೆ. ದ್ವೈತ ಸಿದ್ಧಾಂತವೇ ಸರಿಯೆಂದೂ, ಅದ್ವೈತ ಸರಿಯಲ್ಲವೆಂದು ಶ್ರೀ ಮಧ್ವಾಚಾರ್ಯರು ಹೇಳುತ್ತಾರೆ. ಇದು ಎರಡೂ ಮಿಥ್ಯವೆಂದು

ವಿಶಿಷ್ಟಾದ್ವೈತವೇ ಸತ್ಯವೆಂದು ರಾಮಾನುಜಾಚಾರ್ಯರು ವಾದಿಸುತ್ತರೆ. ದೇವಾವತಾರ ಎಂಬ ಕಲ್ಪನೆಯು ಸತ್ಯವೆಂದೂ, ದೇವಾವತಾರ ಎಂಬ ಕಲ್ಪನೆಯೇ ಇಲ್ಲವೇಂದೂ ಹೇಳುವ ಹಿಂದೂ ಪಂಡಿತರಿದ್ದಾರೆ. ಪುನರ್ಜನ್ಮದ ವಿಷಯವೂ ಅಷ್ಟೆ. ಹಿಂದೂ ಪಂಡಿತರುಗಳೇ ಹಿಂದೂ ಧರ್ಮದ ವಿವಿಧ ವಿಶ್ವಾಸಗಳು ಸತ್ಯವೆಂದು ಒಪ್ಪಿಕೊಳ್ಳುವುದಿಲ್ಲವೆಂದು ಇದರಿಂದ ತಿಳಿದುಬರುತ್ತದೆ. ಆದ್ದರಿಂದ ವಿವಿಧ ಧರ್ಮಗಳಲ್ಲಿರುವ ಏಕದೇವತ್ವ ತ್ರಿದೇವತ್ವ ಬಹುದೇವಾರಾಧನೆ, ದ್ವೈತ, ಅದ್ವೈತ, ಏಕದೇವಾರಾಧನೆ, ಬಹುದೇವಾರಾಧನೆ ಹಾಗೂ ವಿಗ್ರಹಾರಾಧನೆ ಕ್ಷಮಿಲಾಗದ ಪಾಪವೆಂಬ ವಿಶ್ವಾಸ, ಪರಲೋಕ ವಿಶ್ವಾಸ, ಪುರ್ನಜನ್ಮ ವಿಶ್ವಾಸ, ಮನುಷ್ಯರೆಲ್ಲ ಪರಿಶುದ್ಧರಾಗಿಯೇ ಹುಟ್ಟುತ್ತಾರೆಂಬ ದೃಷ್ಟಿಕೋನ, ಪಾಪಿಗಳಾಗಿ ಹುಟ್ಟುವರೆಂಬ ನಂಬಿಕೆ ಇವುಗಳಲ್ಲಾ ಏಕಕಾಲಕ್ಕೆ ಸತ್ಯವೂ ಹಾಗೂ ಸರಿಯೂ ಹೌದು ಎಂದು ಹೇಳಿದರೆ ಅದನ್ನು ಸ್ವೀಕರಿಸಲಾಗುವುದಿಲ್ಲ. ಎಲ್ಲವೂ ಸರಿ ಎಂದು ಹೇಳುವುದು ಎರಡು ಎರಡು ನಾಲ್ಕೆಂದೂ, ಐದೆಂದೂ, ಮೂರೆಂದೂ ಹೇಳುವುದಕ್ಕೆ ಸಮಾನವೆಂದು ಹೇಳುವಂತೆ ಅಸಂಬದ್ಧವಾಗಿದೆ.

ಆದ್ದರಿಂದ ಮಾನವ ಹಸ್ತಕ್ಷೇಪವಿಲ್ಲದ, ನೈಜ ಧರ್ಮ ಸಿದ್ಧಾಂತ ಯಾವುದೆಂದು ಕಂಡುಹಿಡಿದು ಅದನ್ನು ಅನುಸರಿಸಬೇಕು. ನಿಜವಾದ ವಿಜಯವೂ ಅದೇ ಆಗಿದೆ. ತನ್ನ ವಿಶ್ವಾಸ ಹಾಗು ಅದಕ್ಕೆ ವಿರುದ್ಧವಾದ ಕಾರ್ಯಗಳೂ ಎರಡು ಒಂದೇ ಎಂದು ಸಾಮಾನ್ಯ ಪ್ರಜ್ಞೆಯುಳ್ಳ ಯಾರೂ ಒಪ್ಪಿಕೊಳ್ಳಲಾರರು. ಕಮ್ಯೂನಿಝಂ ಮತ್ತು ಕ್ಯಾಪಿಟಲಿಝಂ ಒಂದೇ ರೀತಿ ಸರಿಯೆಂದೂ ಒಳ್ಳೆಯದೆಂದೂ ಅದರ ಕುರಿತು ತಿಳಿದಿರುವ ಅದರ ಅನುಯಾಯಿಗಳು ಹೇಳಲು ಸಾಧ್ಯವಿಲ್ಲವಷ್ಟೇ?

ವಾಸ್ತವದಲ್ಲಿ ಮಾನವನನ್ನು ಉನ್ನತಗೊಳಿಸುವ ಧರ್ಮ ಅಗತ್ಯ ಅಥವಾ ಐಹಿಕ ಜೀವನ ದಲ್ಲಿ ಮಾನವ ಮನಸ್ಸಿಗೆ ಶಾಂತಿ ಸಮಾಧಾನ ನೀಡುವ, ವ್ಯಕ್ತಿಜೀವನದಲ್ಲಿ ಪಾವಿತ್ರತೆ ಕರುಣಿ ಸುವ, ಕುಟುಂಬ ಹಾಗು ಸಮಾಜಕ್ಕೆ ಧೈರ್ಯವನ್ನೂ, ಸ್ಥೈರ್ಯವನ್ನೂ ಅನುಗ್ರಹಿಸುವ, ರಾಷ್ಟ್ರಕ್ಕೆ ಕ್ಷೇಮವನ್ನೂ, ಭದ್ರತೆಯನ್ನೂ, ಲೋಕದಲ್ಲಿ ಶಾಂತಿಯನ್ನೂ ಬಯಸುವ ಮಾತ್ರವಲ್ಲ ಪರಲೋಕದಲ್ಲಿನರಕಮುಕ್ತಿಮತ್ತುಸ್ವರ್ಗವನ್ನುವಾಗ್ದಾನಮಾಡುವಧರ್ಮ. ಧರ್ಮವೆಂಬುದು ಇಲ್ಲದೆ ಇದು ಸಾಧ್ಯವೂ ಅಲ್ಲ, ಯಾವ ಧರ್ಮವನ್ನು ಸ್ವೀಕರಿಸಬಹುದೆಂದು ಕುರ್‌ಆನ್ ಹೇಳಿದೆ. 'ನಿಶ್ಚಯವಾಗಿಯೂ ಪೈಗಂಬರರನ್ನು ನಂಬುವವರಿರಲಿ, ಯಹೂದಿಯರಿರಲಿ, ಕ್ರೈಸ್ತರಿರಲಿ, ಸಬಯನರಿರಲ್ಲಿ ಯಾರು ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿಟ್ಟು ಸತ್ಕರ್ಮಗಳನ್ನು ಮಾಡುವರೋ ಅವರಿಗೆ ಅದರ ಪ್ರತಿಫಲವು ಅವರ ಪ್ರಭುವಿನ ಬಳಿ ಇದ್ದೇ ಇದೆ. ಅವರಿಗೆ ಯಾವ ಭಯವೂ ವ್ಯಥೆಯೂ ಇಲ್ಲ' (ಪವಿತ್ರ ಕುರ್‌ಆನ್ 2:62) ಈ ವಚನದ ಕುರಿತು ಏನೆನ್ನುವಿರಿ? ಈ ಪವಿತ್ರ ವಚನವು ಯಹೂದಿಯರ ವಂಶೀಯತೆನ್ನು ನಿರಾಕರಿಸುತ್ತದೆ. ತಮ್ಮ ವಂಶವೇ ದೇವನಿಗೆ ಪ್ರಿಯವೆಂದೂ ನಾವೇ ಸ್ವರ್ಗದ ಹಕ್ಕುದಾರರೆಂದೂ ಅವರ ವಾದ. ನಾವು ಯಾವ ರೀತಿ ಬಾಳಿದರೂ ನಮಗೆ ರಕ್ಷಣೆಯಿದೆಯೆಂದೂ, ಇತರರೆಲ್ಲಾ ನರಕದ

ಹಕ್ಕುದಾರರೆಂದೂ ಅವರ ವಿಶ್ವಾಸ. ಅವರ ಈ ವಿಶ್ವಾಸವನ್ನು ಖಂಡಿಸಿ ಕುರ್‌ಆನ್ ಹೇಳುತ್ತದೆ. ವಂಶ,ಜಾತಿ,ಸಮುದಾಯವು ಶಾಶ್ವತ ವಿಜಯದ ಮೇಲೆ ಪ್ರಭಾವ ಬೀರದು ಬದಲಾಗಿ ದೇವ ವಿಶ್ವಾಸ, ಪರಲೋಕದ ವಿಶ್ವಾಸ ಸತ್ಕರ್ಮ ಇವು ವಿಜಯದ ಕೀಲಿಕೈ ಆಗಿದೆ.

ಇಸ್ಲಾಮ್ ಎಂದರೆ ದೇವನಲ್ಲೂ ಮರಣಾನಂತರ ಜೀವನದಲ್ಲೂ ನೈಜ ವಿಶ್ವಾಸವಿರಿಸುವುದು ಹಾಗೂ ಸತ್ಕರ್ಮವನ್ನು ಮಾಡುವುದು. ಯಾರು ಅದರಂತೆ ಜೀವಿಸುವರೋ ಅವರು ಮುಸ್ಲಿಮರಾಗಿದ್ದಾರೆ. ಅವರ ವಂಶ, ವರ್ಗ, ದೇಶ, ಭಾಷೆ, ಜಾತಿ, ಯಾವುದು ಇಲ್ಲಿ ಮುಖ್ಯವಾಗುವುದಿಲ್ಲ, ಯಹೂದಿಯರು, ಕ್ರೈಸ್ತರು, ಸಬಯನರು ದೇವನಲ್ಲೂ, ಪರಲೋಕದಲ್ಲೂ ವಿಶ್ವಾಸವಿರಿಸಿ, ಸತ್ಕರ್ಮವೆಸಗಿದರೆ ಅವರು ಬದಲಾಗುತ್ತಾರೆ. ಅವರ ವಿಶ್ವಾಸ, ಆರಾಧನೆ, ಆಚಾರ, ವಿಚಾರ ಹಾಗು ಜೀವನದ ರೀತಿಗಳಲ್ಲಿ ಆಮೂಲಾಗ್ರ ಬದಲಾವಣೆ ಸಂಭವಿಸುತ್ತದೆ. ನಂತರ ಅವರು ಅವರ ಮೊದಲ ಹೆಸರಿನಲ್ಲಿ ಕರೆಯಲ್ಪಡುವುದೂ ಇಲ್ಲ, ಆದ್ದರಿಂದ ಕುರ್‌ಆನ್ ಇಲ್ಲಿ ಮಾನವನ ವಿಜಯದ ಹಾದಿಯಾಗಿ ಇಸ್ಲಾಮಿನ ಮೂಲಭೂತ ವಿಶ್ವಾಸ ಮತ್ತು ಸತ್ಕರ್ಮವನ್ನೇ ಎತ್ತಿತೋರಿಸಿದೆ.

(ವಿವರಣೆಗಾಗಿ ಡಯಲಾಗ್ ಸೆಂಟರ್ ಪ್ರಕಟಿಸಿದ 'ಸರ್ವಧರ್ಮ ಸಮಭಾವ' ಎಂಬ ಕೃತಿ ನೋಡಿರಿ)

# 23 ಆಧುನಿಕ ಮಾನವನಿಗೆ 6ನೇ ಶತಮಾನದ ಧರ್ಮವೇ?

## ಪ್ರವಾದಿಗಳು ಧರ್ಮದ ಸ್ಥಾಪಕರಲ್ಲ:

**ಯೇಸು ದೇವಪುತ್ರನೆಂದು ಕ್ರೈಸ್ತರು, ಮುಹಮ್ಮದ್ ಅಂತಿಮ ಪ್ರವಾದಿಯೆಂದು ನೀವೂ ವಾದಿಸುತ್ತೀರಿ? ಇದು ತಮ್ಮ ಧರ್ಮ ಸಂಸ್ಥಾಪಕರನ್ನು ಮಹಾನ್ ವ್ಯಕ್ತಿಗಳಾಗಿಸುವ ಒಂದು ಅವಕಾಶವಾದವಲ್ಲವೇ?**

ಇಸ್ಲಾಮ್ ಮತ್ತು ಮುಸ್ಲಿಮ್‌ರ ಕುರಿತು ಇರುವ ಗಂಭೀರವಾದ ತಪ್ಪುಕಲ್ಪನೆಗಳೇ ಇಂತಹ ಪ್ರಶ್ನೆಗಳಿಗೆ ಕಾರಣ. ಮುಹಮ್ಮದ್(ಸ) ನಮ್ಮೆಲ್ಲರ ಪ್ರವಾದಿಯಾಗಿದ್ದಾರೆ. ಅವರು ಯಾವುದೇ ಧರ್ಮೀಯರ, ಸಮುದಾಯಕ್ಕೆ ಸೀಮಿತವಾದ ಪ್ರವಾದಿಯಲ್ಲ, ಸಕಲ ಲೋಕದ ಮಾನವ ಕುಲಕ್ಕಾಗಿ ನಿಯೋಜಿತರಾದ ಪ್ರವಾದಿಯಗಿದ್ದಾರೆ. ಅವರ ಕುರಿತು ಪವಿತ್ರಕುರ್‌ಆನ್ ಹೇಳುತ್ತದೆ. **'ಪೈಗಂಬರರೇ ನಾವು ನಿಮ್ಮನ್ನು ಸಕಲ ಲೋಕದ ವರೆಗೆ ಅನುಗ್ರಹವಾಗಿ ಮಾಡಿ ಕಳುಹಿಸಿರುತ್ತೇವೆ.' (ಪವಿತ್ರ ಕುರ್‌ಆನ್ 21:107)**

ಅದೇ ವೇಳೆ ಈ ಲೋಕಕ್ಕೆ ವಿಶ್ವದ ವಿವಿಧ ಭಾಗಗಳಲ್ಲಿ, ಹಲವು ಕಾಲಗಳಲ್ಲಿ ಆಗಮಿಸಿದ ಎಲ್ಲಾ ಪ್ರವಾದಿಗಳನ್ನು ತಮ್ಮ ಪ್ರವಾದಿಯೆಂದು ಅಂಗೀಕರಿಸುವುದು ಮುಸ್ಲಿಮರಿಗೆ ಕಡ್ಡಾಯವಾಗಿದೆ. ಅವರಲ್ಲಿ ಯಾವುದೇ ಭೇದಭಾವ ತೋರಿಸಬಾರದು. ಮುಸ್ಲಿಮ್‌ರು ಹೀಗೆ ಹೇಳಲು ನಿರ್ಬಂಧಿತರಾಗಿದ್ದಾರೆ: **'ಹೇಳಿರಿ ನಾವು ಅಲ್ಲಾಹನ ಮೇಲೆ ವಿಶ್ವಾಸವಿಟ್ಟದ್ದೇವೆ, ಇಬ್ರಾಹೀಮ್, ಇಸ್ಮಾಯೀಲ್, ಇಸ್ಹಾಕ್, ಯಅ್‌ಕೂಬ್ ಮತ್ತು ಯಕೂಬರ ಸಂತತಿಗಳ ಮೇಲೆ ಅವತೀರ್ಣಗೊಳಿಸಲ್ಪಟ್ಟ ಶಿಕ್ಷಣದ ಮೇಲೂ ವಿಶ್ವಾಸವಿಟ್ಟದ್ದೇವೆ. ಮೂಸಾ, ಈಸಾ ಮತ್ತು ಇತರ ಪ್ರವಾದಿಗಳಿಗೆ ಅವರ ಪ್ರಭುವಿನ ಕಡೆಯಿಂದ ನೀಡಲ್ಪಟ್ಟವುಗಳ ಮೇಲೂ ವಿಶ್ವಾಸವಿಟ್ಟಿದ್ದೇವೆ. ನಾವು ಅವರೊಳಗೆ ಭೇದವೆನಿಸುವುದಿಲ್ಲ ಮತ್ತು ಅಲ್ಲಾಹನ ಆಜ್ಞಾಪಾಲಕ(ಮುಸ್ಲಿಮರು) ರಾಗಿರುತ್ತೇವೆ.' (ಪವಿತ್ರ ಕುರ್‌ಆನ್ 3:84)**

'ಸಂದೇಶವಾಹಕರು ತನ್ನ ಪ್ರಭುವಿನ ವತಿಯಿಂದ ಅವತೀರ್ಣಗೊಂಡುದರ ಮೇಲೆ ವಿಶ್ವಾಸವಿರಿಸಿದ್ದಾರೆ ಮತ್ತು ಈ ಸಂದೇಶವಾಹಕರ ಮೇಲೆ ವಿಶ್ವಾಸವಿಡುವವರು ಸಹ ಈ ಬೋಧನೆಯನ್ನು ಹೃತ್ಪೂರ್ವಕ ಸ್ವೀಕರಿಸಿದ್ದಾರೆ. ಇವರೆಲ್ಲರೂ ಅಲ್ಲಾಹನಲ್ಲಿಯೂ ಅವನ ದೇವಚರರಲ್ಲಿಯೂ ಅವನ ದಿವ್ಯಗ್ರಂಥಗಳಲ್ಲೂ, ಸಂದೇಶವಾಹಕರಲ್ಲೂ ವಿಶ್ವಾಸವಿರಿಸುತ್ತಾರೆ.

''ನಾವು ಅಲ್ಲಾಹನ ಸಂದೇಶವಾಹಕರ ನಡುವೆ ಯಾವ ತಾರತಮ್ಯವನ್ನಿರಿಸುವುದಿಲ್ಲ, ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೆ ಮರಳಲಿಕ್ಕಿದೆ'' ಎಂದು ಅವರೆನ್ನುತ್ತಾರೆ. (ಪವಿತ್ರ ಕುರ್‌ಆನ್ 2:285)

ಪ್ರವಾದಿಗಳು ಧರ್ಮಸ್ಥಾಪಕರಲ್ಲವೆಂದೂ, ದೇವನ ಸಂದೇಶವನ್ನು ಮಾನವ ಕುಲಕ್ಕೆ ತಲುಪಿಸುವ ಸಂದೇಶವಾಹಕರು ಮಾತ್ರವೆಂದು ಪವಿತ್ರ ಕುರ್‌ಆನ್‌ನ ಈ ವಚನಗಳು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಪ್ರವಾದಿ ಮುಹಮ್ಮದ್(ಸ) ಇಸ್ಲಾಮ್ ಧರ್ಮದ ಸ್ಥಾಪಕರಲ್ಲ, ಇಸ್ಲಾಮ್ ಅವರಿಂದ ಆರಂಭವಾಗಿಲ್ಲ, ಅದು ಆದಿಮಾನವನಿಂದ ಆರಂಭಿಸಿ, ಲೋಕಾಂತ್ಯದವರೆಗಿನಮನುಷ್ಯರಿಗೆದೇವನುನೀಡಿದಜೀವನವ್ಯವಸ್ಥೆ.ಈಜೀವನವ್ಯವಸ್ಥೆಯನ್ನು ಜನರಿಗೆ ತಲುಪಿಸಲು ಪ್ರವಾದಿಗಳನ್ನು ನೇಮಿಸಲಾಗಿತ್ತು. ಅವರು ದೇವಪುತ್ರರೋ, ದೇವನ ಅವತಾರವೋ ಆಗಿರಲಿಲ್ಲ, ದೇವನ ವತಿಯಿಂದಲೇ ಮನುಷ್ಯರೊಳಗಿಂದ ನಿಯುಕ್ತರಾದ ಸಂದೇಶವಾಹಕರು ಮಾತ್ರ. ಭೂಮಿಯಲ್ಲಿ ಜನವಾಸ ಆರಂಭವಾದಂದಿನಿಂದ ವಿಶ್ವದ ವಿವಿಧ ಭಾಗಗಳಲ್ಲಿ ವಿವಿಧ ಕಾಲಗಳಲ್ಲಿ ಇಂತಹ ಲಕ್ಷಾಂತರ ಸಂದೇಶವಾಹಕರು ಆಗಮಿಸಿದ್ದರು. ಅವರಲ್ಲಿ ಕೊನೆಯ ಪ್ರವಾದಿ ಮುಹಮ್ಮದ್ (ಸ) ಆಗಿದ್ದಾರೆ.

## ಈಗ ಸಂದೇಶವಾಹಕರು ಏಕೆ ಬರುವುದಿಲ್ಲ?

**ಪ್ರವಾದಿ ಮುಹಮ್ಮದ್ ದೇವನ ಅಂತಿಮ ಪ್ರವಾದಿಯಾಗಲು ಕಾರಣವೇನು? ದೈವಿಕ ಮಾರ್ಗದರ್ಶನ ಈಗಲೂ ಅಗತ್ಯವಿಲ್ಲವೇ? ಹಾಗಿದ್ದರೆ ಈಗ ಸಂದೇಶವಾಹಕರನ್ನು ನೇಮಿಸದಿರಲು ಕಾರಣವೇನು?**

ಮನುಷ್ಯರ ಮಾರ್ಗದರ್ಶನಕ್ಕಾಗಿ ಪ್ರವಾದಿಗಳನ್ನು ನಿಯೋಗಿಸಲಾಗುತ್ತದೆ. ಪ್ರವಾದಿ ಮುಹಮ್ಮದ್(ಸ) ರಿಗಿಂತ ಮೊದಲು ಆಗಮಿಸಿದ ಪ್ರವಾದಿಗಳಿಗೆ ದೊರೆತ ದೇವಸಂದೇಶವು ಕೆಲವು ದೇಶ ಹಾಗೂ ಕಾಲಗಳಿಗೆ ಸೀಮಿತವಾಗಿತ್ತು. ವಿಶ್ವದಾದ್ಯಂತ ಆ ಸಂದೇಶಗಳ ಪ್ರಚಾರ ಹಾಗೂ ಸಂರಕ್ಷಣೆ ಅಸಾಧ್ಯವೆಂಬುದು ಕಾರಣವಾಗಿರಬಹುದು. ಏನಿದ್ದರೂ ಅವರಿಂದ ಲಭಿಸಿದ ಸಂದೇಶವು ಮಾನವ ಹಸ್ತಕ್ಷೇಪವಿಲ್ಲದೆ ಎಲ್ಲಿಯೂ ಉಳಿದಿಲ್ಲ, ಆದರೆ ಹದಿನಾಲ್ಕು ಶತಮಾನಗಳ ಹಿಂದೆ ಮುಹಮ್ಮದ್(ಸ)ರಿಗೆ ಅವತೀರ್ಣಗೊಂಡ ಕುರ್‌ಆನ್ ಸರ್ವ ಮಾನವಕುಲಕ್ಕೆ ಮಾರ್ಗದರ್ಶನ ನೀಡಲು ಪರ್ಯಾಪ್ತವಾಗಿದೆ. ಅಂದು ಅದು ವಿಶ್ವದಲ್ಲೆಡೆ ತಲುಪುವಂತೆ ಮಾನವ ನಾಗರಿಕತೆ ವಿಕಾಸಗೊಂಡಿತ್ತು. ಪ್ರವಾದಿಗಳ ನಿಯೋಗದ ಕೆಲವೇ ವರ್ಷಗಳಲ್ಲಿ ಅಂದಿನ ಪ್ರಸಿದ್ಧವಾದ ಎಲ್ಲ ದೇಶಗಳಲ್ಲೂ ಕುರ್‌ಆನ್‌ನ ಸಂದೇಶ ತಲುಪಿದ್ದು ಪ್ರಚಾರ ಪಡೆದಿದ್ದವು. ಕುರ್‌ಆನ್ ಮಾನವನ ಎಲ್ಲಾ ರೀತಿಯ ಹಸ್ತಕ್ಷೇಪದಿಂದ ಮುಕ್ತವಾಗಿ ಮೂಲ ರೀತಿಯಲ್ಲೇ ಉಳಿದುಕೊಂಡಿದೆ. ಅಂತಿಮ ದಿನದ ವರೆಗೂ ಅದು ಅದೇ ರೀತಿ ಉಳಿಯುತ್ತದೆ. ದೇವಗ್ರಂಥವಾದ ಕುರ್‌ಆನ್‌ನಲ್ಲಿ ಒಂದಕ್ಷರವೂ ಬದಲಾವಣೆಗೊಂಡಿಲ್ಲ,

ಆದರ ಸಂರಕ್ಷಣೆಯನ್ನು ಸೃಷ್ಟಿಕರ್ತನೇ ವಹಿಸಿಕೊಂಡಿದ್ದಾನೆ. ಅಲ್ಲಾಹನು ವಾಗ್ದಾನ ಮಾಡುತ್ತಾನೆ: **'ಈ ಉಪದೇಶ'ವನ್ನು ನಿಶ್ಚಯವಾಗಿಯೂ ನಾವು ಅವತೀರ್ಣಗೊಳಿಸಿರುತ್ತೇವೆ ಮತ್ತು ಸ್ವತಃ ನಾವೇ ಅದರ ರಕ್ಷಕರೂ ಆಗಿರುತ್ತೇವೆ. (ಪವಿತ್ರ ಕುರ್‌ಆನ್15:9)**

ಮಾನವರಿಗೆ ನೀಡಲಾದ ದೇವಸಂದೇಶ ಪವಿತ್ರ ಕುರ್‌ಆನ್ ಮತ್ತು ಅದರ ವ್ಯಾಖ್ಯಾನವಾದ ಪ್ರವಾದಿಚರ್ಯೆಗಳಲ್ಲಿ ಭದ್ರವಾಗಿರುವಾಗ ಹೊಸ ಮಾರ್ಗದರ್ಶನದ ಅಥವಾ ಪ್ರವಾದಿಯ ಅಗತ್ಯವಿಲ್ಲ. ಆದ್ದರಿಂದಲೇ ಕಳೆದ ಹದಿನಾಲ್ಕು ಶತಮಾನಗಳಿಂದ ಹೊಸ ದೈವಿಕಗ್ರಂಥವೋ, ದೇವಸಂದೇಶವಾಹಕರೋ ಬಂದಿಲ್ಲ. ಇನ್ನು ಬರುವ ಸಾಧ್ಯತೆಯೂ ಇಲ್ಲ. ಈ ವಿಷಯವನ್ನು ಕುರ್‌ಆನ್ ಸ್ಪಷ್ಟಪಡಿಸಿದೆ: **'ಜನರೇ, ಮುಹಮ್ಮದ್ ನಿಮ್ಮ ಪುರುಷರಲ್ಲಿ ಯಾರ ತಂದೆಯೂ ಅಲ್ಲ. ನಿಜವಾಗಿ ಅವರು ಅಲ್ಲಾಹನ ಪ್ರವಾದಿಯೂ ಪ್ರವಾದಿಗಳಲ್ಲಿ ಕೊನೆಯವರೂ ಆಗಿದ್ದಾರೆ. ಅಲ್ಲಾಹನು ಸರ್ವವನ್ನೂ ಅರಿಯುವವನಾಗಿದ್ದಾನೆ.' (ಪವಿತ್ರ ಕುರ್‌ಆನ್ 32:40)**

## ಆರನೇ ಶತಮಾನದ ಧರ್ಮ!

**ಹದಿನಾಲ್ಕು ಶತಮಾನ ಕಳೆಯುವಾಗ ಜಗತ್ತು ಊಹಿಸಲಸಾಧ್ಯ ರೀತಿಯಲ್ಲಿ ಬದಲಾಯಿತು. ಆಧುನಿಕತೆಯ ಉತ್ತುಂಗದಲ್ಲಿರುವ ಈ ದಿನಗಳಲ್ಲಿ 6ನೇ ಶತಮಾನದ ಮತದೊಂದಿಗೆ ಸಾಗುವುದು ಮೂರ್ಖತನವಲ್ಲವೇ?**

ಕಾಲ ಬದಲಾಗಿದೆ ಎಂಬ ವಿಷಯ ನಿಜ, ಅದರೊಂದಿಗೆ ಸ್ವರೂಪವೂ ಬದಲಾಗಿದೆ. ಮನುಷ್ಯನು ಬಹಳ ಪ್ರಗತಿ ಸಾಧಿಸಿದ್ದಾನೆ. ಆಧುನಿಕ ತಂತ್ರಜ್ಞಾನಗಳು ಜಗತ್ತನ್ನೇ ಬದಲಿಸಿದೆ. ಜೀವನ ಸೌಕರ್ಯಗಳು ಹೆಚ್ಚಿದವು. ನಾಗರೀಕತೆ ನಿರ್ಣಾಯಕ ಹಂತ ತಲುಪಿದೆ. ಆದರೆ ಮನುಷ್ಯರಲ್ಲಿ ಇವುಗಳು ಮೌಲ್ಯಯುತವಾದ ಬದಲಾವಣೆಗಳನ್ನು ಉಂಟು ಮಾಡಿದೆಯೇ? ನಮ್ಮ ವಿಚಾರ, ಆಚಾರ, ಆರಾಧನಾ ರೀತಿಗಳು,ಸಂಪ್ರದಾಯಗಳು ಗುಣನಡತೆ ಸ್ವಭಾವಗಳನ್ನು ಅವು ಆಕರ್ಷಿಸಿದೆಯೇ? 'ಇಲ್ಲ' ಎಂದು ಧೈರ್ಯವಾಗಿ ಹೇಳಬಹುದು. ಸಾವಿರಾರು ವರ್ಷಗಳ ಹಿಂದೆ ನಮ್ಮ ಸಮಾಜ ಮೂಢನಂಬಿಕೆಯಲ್ಲಿ ಮುಳುಗಿತ್ತು. ಅದೇ ಪರಿಸ್ಥಿತಿ ಆಧುನಿಕ ಯುಗದಲ್ಲೂ ಮುಂದುವರಿದಿದೆ. ಅಂದಿನಂತೆ ಇಂದೂ ಮನುಷ್ಯರು ನಿರ್ಜೀವ ವಸ್ತುಗಳನ್ನು ಪೂಜಿಸುತ್ತಿದ್ದಾರೆ. ಮೋಸ, ವಂಚನೆ, ಕೊಲೆ, ದರೋಡೆ ಹಿಂದಿನಂತೆಯೇ ಸಾಗುತ್ತಿದೆ.ಮದ್ಯಪಾನದಲ್ಲೂ ಬದಲಾವಣೆಯಾಗಿಲ್ಲ, ಲೈಂಗಿಕ ಅರಾಜಕತೆ ಕಡಿಮೆಯಾಗಿಲ್ಲ. ಹೆಚ್ಚೇಕೆ ಆರನೇ ಶತಮಾನದಲ್ಲಿ ಕೆಲವು ಅರಬ ಗೋತ್ರಗಳು ಮಾಡುತ್ತಿದ್ದಂತೆ ಹೆಣ್ಣುಮಗುವನ್ನು ಆಧುನಿಕ ಮಾನವನೂ ಕೊಲ್ಲುತ್ತಿದ್ದಾನೆ. ಅಂದು ಒಂದೆರಡು ಸಂಖ್ಯೆಯಲ್ಲಿದ್ದರೆ ಇಂದು ಲಕ್ಷ, ಕೋಟಿಗಳಷ್ಟು ನಡೆಯುತ್ತಿದೆ. ವೈದ್ಯಕೀಯ ರಂಗದ ಪ್ರಗತಿಯು ಅದನ್ನು ಸುಲಭಗೊಳಿಸಿದೆ, ನಾವು ಅಂದಕಾರಯುಗವೆಂದು ಆರೋಪಿಸುವ ಕಾಲದಲ್ಲಿ ನಡೆದಂತೆ ಇಂದೂ ಮನುಷ್ಯನು ಮನುಷ್ಯನನ್ನು ಕ್ರೂರವಾಗಿ ಕೊಲ್ಲುತ್ತಿದ್ದಾನೆ. ಅಂದು ಚೂಪಾದ ಕಲ್ಲುಗಳಿಂದ ಈ ಕೃತ್ಯ

ನಡೆಸುತ್ತಿದ್ದರೆ, ಇಂದು ತಂತ್ರಜ್ಞಾನದಿಂದ, ಬಾಂಬುಗಳಿಂದ ಎಂಬ ವ್ಯತ್ಯಾಸ ಮಾತ್ರವಿದೆ. ಇದರಿಂದ ಕೊಲೆಯ ಸಂಖ್ಯೆಯೂ ಹೆಚ್ಚಿದೆ.

ಒಟ್ಟಿನಲ್ಲಿ ಜಗತ್ತಿನಲ್ಲಿ ಸಂಭವಿಸಿದ ಬದಲಾವಣೆಗಳು ಬಾಹ್ಯಕ್ಕೆ ಮಾತ್ರಸೀಮಿತವಾಗಿದೆ. ಆದರೆ ಆಂತರಿಕವಾಗಿ ಯಾವುದೇ ಬದಲಾವಣೆಯಿಲ್ಲ. ಮಾನವನ ಮನ-ಮಸ್ತಿಷ್ಕಗಳಲ್ಲಿ ಬದಲಾವಣೆ ಸಂಭವಿಸಿಲ್ಲ. ಆದರೆ ಶತಮಾನಗಳ ಹಿಂದೆ ಸಂಭವಿಸಿದಂತೆ ಮಾನವನಲ್ಲಿ ಮನಪರಿವರ್ತನೆಯನ್ನು ಸೃಷ್ಟಿಸಿದ ಧಾರ್ಮಿಕ ಆದರ್ಶ, ವಿಶ್ವಾಸಗಳು ಹಾಗೂ ಧಾರ್ಮಿಕ ಮೌಲ್ಯಗಳಿಗೆ ಮಾತ್ರ ಇಂದೂ ಅದು ಸಾಧ್ಯ. ಆರನೇ ಶತಮಾನದಲ್ಲಿ ಮನುಷ್ಯನ ಮನಸ್ಸಿಗೆ ನೆಮ್ಮದಿ, ಕುಟುಂಬಕ್ಕೆ ಧೈರ್ಯ, ಸಮಾಜಕ್ಕೆ ಸುರಕ್ಷೆ, ರಾಷ್ಟ್ರಕ್ಕೆ ಭದ್ರತೆಯನ್ನು ನೀಡಿದ ಜೀವನ ವ್ಯವಸ್ಥೆಗೆ ಅಂದಿನಂತೆ ಇಂದೂ ಪ್ರಾಮುಖ್ಯತೆಯಿದೆ. ಅದನ್ನು ಕ್ರಿಯಾತ್ಮಕಗೊಳಿಸಿದಂತೆ ಅದರ ಮಹತ್ವ, ಅನಿವಾರ್ಯತೆ, ಸತ್ಫಲಗಳು ಪ್ರಕಟವಾಗುತ್ತದೆ. ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯು ಸಮರ್ಪಿಸುವ ಸಮಗ್ರ ಜೀವನ ವ್ಯವಸ್ಥೆಯಲ್ಲಿ ಆಧುನಿಕ ಜಗತ್ತಿಗೆ ಅಪ್ರಾಯೋಗಿಕ ಹಾಗೂ ಅನುಚಿತವಾದ ಒಂದಂಶವೂ ಇಲ್ಲವೆಂಬುದು ವಾಸ್ತವಿಕತೆಯಾಗಿದೆ. ಮಾತ್ರವಲ್ಲ ಅದನ್ನು ಪ್ರಾಯೋಗಿಕಗೊಳಿಸುವುದರಲ್ಲಿ ಮಾತ್ರ ಮಾನವ ಸಮೂಹ ಇಂದು ಎದುರಿಸುತ್ತಿರುವ ಎಲ್ಲಾ ಸಮಸ್ಯೆಗಳಿಗೂ ಕಷ್ಟ ನಷ್ಟಗಳಿಗೂ ಪರಿಹಾರ ಲಭಿಸುತ್ತದೆ.

## 24 ದೇವನು ಕಅಬಾದಲ್ಲಿದ್ದಾನೆಯೇ?

ಮುಸ್ಲಿಮ್‌ರು ನಮಾಝ್ ನಿರ್ವಹಿಸುವಾಗ ಕಅಬಾದ ಕಡೆಗೆ ಮುಖಮಾಡಲು ಕಾರಣವೇನು? ದೇವನು ಕಅಬಾದಲ್ಲಿರುವನೇ? ಅಥವಾ ಕಅಬಾವು ದೇವನ ಪ್ರತೀಕವೇ? ಪ್ರತಿಷ್ಠಾಪನೆಯೇ ?

ಇಸ್ಲಾಮಿ ದೃಷ್ಟಿಕೋನದಂತೆ ದೇವನು ಯಾವುದೋ ಒಂದು ಸ್ಥಳಕ್ಕೆ ಸೀಮಿತವಾಗಿಲ್ಲ, ದೇವನಿಗೆ ಪ್ರತಿಮೆಗಳೂ ಪ್ರತಿಷ್ಠಾಪನೆಯೋ ಇಲ್ಲ, ''ಪೂರ್ವ ಪಶ್ಚಿಮಗಳೆಲ್ಲವೂ ಅಲ್ಲಾಹನವು. ನೀವೆತ್ತ ಮುಖ ಮಾಡಿದರೂ ಅಲ್ಲಿ ಅಲ್ಲಾಹನ ಮುಖವಿದೆ. ನಿಶ್ಚಯವಾಗಿಯೂ ಅಲ್ಲಾಹನು ಬಹುವಿಶಾಲನೂ ಅಭಿಜ್ಞನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್ 2:115)

'ಭೂಮಿ-ಆಕಾಶಗಳ ಪ್ರತಿಯೊಂದು ವಸ್ತುವಿನ ಜ್ಞಾನವು ಅಲ್ಲಾಹನಿಗೆ ಇದೆ ಎಂಬುದು ನಿಮಗೆ ತಿಳಿದಿಲ್ಲವೇ? ಮೂರು ಮಂದಿಯ ನಡುವೆ ರಹಸ್ಯ ಮಾತುಕತೆ ನಡೆಯುತ್ತಿರುವಾಗ ಅವರೊಂದಿಗೆ ನಾಲ್ಕನೆಯವನಾಗಿ ಅಲ್ಲಾಹನು ಎಂದೂ ಇಲ್ಲದೆ ಇರುವುದಿಲ್ಲ ಅಥವಾ ಐವರೊಳಗೆ ರಹಸ್ಯ ಮಾತುಕತೆ ನಡೆಯುತ್ತಿರುವಾಗ ಆರನೇಯವನಾಗಿ ಅಲ್ಲಾಹನಿಲ್ಲದೆ ಇರುವುದಿಲ್ಲ, ರಹಸ್ಯ ಮಾತುಕತೆ ನಡೆಸುತ್ತಿರುವವರು ಇದಕ್ಕಿಂತ ಕಡಿಮೆ ಇರಲಿ ಅಥವಾ ಹೆಚ್ಚಿರಲಿ, ಅವರು ಎಲ್ಲೇ ಇರಲಿ, ಅಲ್ಲಾಹನು ಅವರ ಜೊತೆಗಿರುತ್ತಾನೆ ಮತ್ತು ಪುನರುತ್ಥಾನ ದಿನ ಅವನು ಅವರಿಗೆ, ಅವರು ಏನೆಲ್ಲ ಮಾಡಿದ್ದರೆಂಬುದನ್ನು ತಿಳಿಸುವನು. ಅಲ್ಲಾಹನು ಸಕಲ ವಸ್ತುಗಳ ಜ್ಞಾನವುಳ್ಳವನು.' (ಪವಿತ್ರ ಕುರ್‌ಆನ್ 58:7)

'ನಾವು ಮಾನವನನ್ನು ಸೃಷ್ಟಿಸಿದೆವು ಮತ್ತು ನಾವು ಅವನ ಮನಸ್ಸಿನಲ್ಲಿ ಉದ್ಭವಿಸುವ ದುರ್ಭಾವನೆಗಳನ್ನು ಬಲ್ಲೆವು. ನಾವು ಅವನ ಕಂಠನಾಡಿಗಿಂತಲೂ ಹೆಚ್ಚು ಅವನಿಗೆ ಸಮೀಪವಿದ್ದೇವೆ.' (ಪವಿತ್ರ ಕುರ್‌ಆನ್ 50:16)

ವಿಶ್ವದ ಸರ್ವ ಮನುಷ್ಯರನ್ನು, ಜೀವನದ ಎಲ್ಲಾ ರಂಗಗಳಲ್ಲೂ ಏಕೀಕರಿಸುವ ಸಮಗ್ರ ಜೀವನ ಪದ್ಧತಿ ಇಸ್ಲಾಮ್ ಆಗಿದೆ. ಅದರ ಆರಾಧನಾ ಕ್ರಮಗಳಲ್ಲೂ ವಿಶ್ವಾಸಿಗಳನ್ನು ಏಕಧ್ರುವೀಕರಿಸುವಲ್ಲಿ ಮಹತ್ವದ ಪಾತ್ರವಿದೆ. ಇದು ಸಾಧ್ಯವಾಗಬೇಕಾದರೆ ಎಲ್ಲರ ಆರಾಧನಾ ರೀತಿಗಳು ಒಂದೇ ರೀತಿ ಇರಲೇಬೇಕಲ್ಲವೇ. ಆದ್ದರಿಂದ ವಿಶ್ವದ ಎಲ್ಲ ಮುಸಲ್ಮಾನರಿಗೂ ನಮಾಝ್ ಮಾಡಲು ಒಂದು ದಿಕ್ಕು ಅನಿವಾರ್ಯವಲ್ಲವೇ? ಅದಕ್ಕಾಗಿ ಏಕದೇವಾರಾಧನೆಗಾಗಿ ಲೋಕದಲ್ಲಿ ಪ್ರಪ್ರಥಮವಾಗಿ ನಿರ್ಮಿಸಲ್ಪಟ್ಟ ಕಅಬಾವನ್ನು ನಿರ್ಧರಿಸಲಾಯಿತು. ಆದ್ದರಿಂದ ಆ

ಪವಿತ್ರ ದೇವಭವನವು ವಿಶ್ವ ಜನತೆಯನ್ನು ಏಕೀಕರಿಸುವ ಕೇಂದ್ರ ಬಿಂದುವಾಗಿದೆ. ದೇವನು ಪ್ರತ್ಯೇಕವಾಗಿ ಕೂಡಿಹಾಕಲ್ಪಟ್ಟ ದೇವನ ಪ್ರತೀಕವೋ ಪ್ರತಿಷ್ಠಾಪನೆಯೋ ಅಲ್ಲ. ಅದು ಏಕದೇವಾರಾಧನೆಯ ಪ್ರತೀಕವಾಗಿದೆ.

''ನಿಶ್ಚಯವಾಗಿಯೂ ಮಾನವರಿಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಆರಾಧನಾಲಯವು **ಮಕ್ಕಾದಲ್ಲಿರುವುದೇ ಆಗಿರುತ್ತದೆ. ಅದಕ್ಕೆ ಶುಭ ಸಮೃದ್ಧಿಗಳನ್ನು ನೀಡಲಾಗಿತ್ತು ಮತ್ತು ಅದು ಸಮಗ್ರ ಲೋಕದವರಿಗೆ ಸನ್ಮಾರ್ಗದರ್ಶನದ ಕೇಂದ್ರವನ್ನಾಗಿ ಮಾಡಲ್ಪಟ್ಟಿತ್ತು.''**

(ಪವಿತ್ರ ಕುರ್‌ಆನ್ 3:96)

**''ನಾವು ಆ ಭವನ (ಕಅಬಾ) ವನ್ನು ಜನರಿಗೆ ಕೇಂದ್ರ ಹಾಗು ಶಾಂತಿ ಸ್ಥಾನವನ್ನಾಗಿ ನಿಶ್ಚಯಿಸಿದ ಸಂದರ್ಭವನ್ನು ಸ್ಮರಿಸಿರಿ.''** (ಪವಿತ್ರ ಕುರ್‌ಆನ್ 2:125) **ಅಲ್ಲಾಹನು ಪ್ರತಿಷ್ಠಿತ ಭವನವಾದ 'ಕಅಬಾ'ವನ್ನು ಜನರ ಪಾಲಿಗೆ (ಸಮೂಹಿಕ ಜೀವನವನ್ನು) ನೆಲೆ ನಿಲ್ಲಿಸುವ ಸಾಧನವಾಗಿ ಮಾಡಿದನು.** (ಪವಿತ್ರ ಕುರ್‌ಆನ್ 5:97) ಆದ್ದರಿಂದ ನೀವು ಪವಿತ್ರಭವನವನ್ನು ಆರಾಧಿಸುವುದಲ್ಲ ಅದರ ಒಡೆಯನನ್ನು ಆರಾಧಿಸಬೇಕು. **'ಅವರು ಈ ಭವನದ ಪ್ರಭುವಿನ ದಾಸ್ಯ-ಆರಾಧನೆ ಮಾಡಲಿ.'** (ಪವಿತ್ರ ಕುರ್‌ಆನ್ 106:3)

ಕೆಲವು ಪ್ರಸಿದ್ಧ ಇತಿಹಾಸಕಾರರು ತಪ್ಪಾಗಿ ಚಿತ್ರಿಸಿದಂತೆ ಕಅಬಾ ಒಂದು ಕಲ್ಲಲ್ಲ. ಕಲ್ಲಿನಿಂದ ನಿರ್ಮಿಸಲಾದ ಹನ್ನೆರಡು ಮೀಟರ್ ಉದ್ದ, ಹತ್ತು ಮೀಟರ್ ಅಗಲ, ಹದಿನೈದು ಮೀಟರ್ ಎತ್ತರದ ಒಂದು ಕಟ್ಟಡವಾಗಿದೆ. ಕಅಬಾ ಎಂಬ ಪದವು ಘನಾಕೃತಿ(ಕ್ಯೂಬ್) ಯನ್ನು ಸೂಚಿಸುತ್ತದೆ. ಕಲಾನೈಪುಣ್ಯತೆಯಿಲ್ಲದ ಕೆತ್ತನೆ ಕೆಲಸವಿಲ್ಲದೆ ಶಿಲ್ಪ ಸೌಂದರ್ಯವಿಲ್ಲದ ಸರಳತೆಯ ಪ್ರತೀಕವಾಗಿದೆ.

ಆದರೆ ವಿಶ್ವದ ಅತ್ಯುತ್ಕೃಷ್ಟ ಭವನ. ಜಗತ್ತಿನ ಸುಮಾರು 100 ಕೋಟಿ ಮುಸ್ಲಿಮರು ದಿನಂಪ್ರತಿ ಐದು ಬಾರಿ ಅದರತ್ತ ಮುಖ ತಿರುಗಿಸುತ್ತಾರೆ. ಗತ ಶತಮಾನಗಳಲ್ಲಿ ನಿಧನರಾದ ಕೋಟಿಗಟ್ಟಲೆ ಸತ್ಯವಿಶ್ವಾಸಿಗಳ ಮುಖವನ್ನು ಅಂತ್ಯ ವಿಶ್ರಾಂತಿಗಾಗಿ ಕಅಬಾದ ಕಡೆಗೆ ಇರಿಸಿಯೇ ದಫನ ಮಾಡಲಾಗಿದೆ. ಜಗತ್ತಿನಾದ್ಯಂತವಿರುವ ಕೋಟ್ಯಂತರ ಜನರ ಹೃದಯದೊಂದಿಗೆ ಬೆಸೆದ ಇಂತಹ ಭವನ ಜಗತ್ತಿನಲ್ಲಿ ಬೇರೊಂದಿಲ್ಲ. ಅದು ದೇವನ ಭವನವಾಗಿದೆ. ಆದ್ದರಿಂದ ಅದು ಎಲ್ಲಾ ಮನುಷ್ಯರದ್ದೂ ಹೌದು. ಏಕದೇವಾರಧನೆಯ ಪ್ರತೀಕವೂ, ಏಕದೇವಾರಾಧಕರ ಪ್ರಾರ್ಥನೆಯ ದಿಕ್ಕೂ ಆಗಿದೆ.

ಮುಸ್ಲಿಮರು ಕಅಬಾದ ಸುತ್ತಲು ಪ್ರದಕ್ಷಿಣೆ ಹಾಕಲು ಕಾರಣವೇನು? ಅದರಿಂದ ಪ್ರಯೋಜನವೇನು? ಅರ್ಥಹೀನವಾದ ಆಚಾರವಲ್ಲವೇ ಅದು.?

ತನ್ನನ್ನು ಯಾವ ರೀತಿ ಆರಾಧಿಸಬೇಕೆಂದು ನಿರ್ಧರಿಸಬೇಕಾದುದು ದೇವನಾಗಿದ್ದಾನೆ. ಪೂರ್ವ ಪ್ರವಾದಿಗಳಾದ ಇಬ್ರಾಹೀಮ್(ಅ)ರ ಕಾಲದಿಂದಲೇ ದೇವನು ನಿಶ್ಚಯಿಸಿದ ಆರಾಧನಾ ಕ್ರಮವಿದು. ನಮ್ಮಿಚ್ಛೆಯಂತೆ ನಾವು ಆರಾಧಿಸಬಹುದೆಂದಾದರೆ ನಮಗೆ ತೋಚಿದಂತೆ ಆರಾಧನಾ ರೀತಿಗಳನನ್ನು ನಿರ್ಧರಿಸಬಹುದಿತ್ತು. ಆದರೆ ಆರಾಧನಾಕರ್ಮಗಳು ಯಾವುದೆಂದೂ, ಯಾವ ರೀತಿ ಇರಬೇಕೆಂದೂ ದೇವನು ಬಹಳ ಸ್ಪಷ್ಟವಾಗಿ ಆದೇಶಿಸಿದ್ದಾನೆ. ತನ್ನ ಸಂದೇಶವಾಹಕರ

ಮೂಲಕ ಸಮಾಜಕ್ಕೆ ತಿಳಿಯಪಡಿಸಿದನು. ಅದಕ್ಕೆ ಏನಾದರೂ ಸೇರಿಸುವುದೋ, ಕಡಿತ ಗೊಳಿಸುವುದೋ ಅಥವಾ ಬದಲಾವಣೆ ತರುವಂತಹ ಅವಕಾಶವೋ ಅನುಮತಿಯೋ ಯಾರಿಗೂ ನೀಡಿಲ್ಲ. ಕಅಬಾದ ಪ್ರದಕ್ಷಿಣೆಯೂ ಇದೇ ರೀತಿ ದೇವನಿರ್ಣಿತವಾದ ಆರಾಧನಾ ಕರ್ಮವಾಗಿದೆ. ಆದರೆ ಇದರ ಹಿಂದೆ ಮಹತ್ತರವಾದ ಯುಕ್ತಿಯೂ, ಅರ್ಥವೂ ಇದೆಯೆಂದು ಸ್ವಲ್ಪ ಚಿಂತಿಸಿದರೆ ಅರ್ಥವಾಗುತ್ತದೆ.

ಮನುಷ್ಯನು ಪ್ರಪಂಚ ವ್ಯವಸ್ಥೆಯೊಂದಿಗೆ ಲೀನವಾಗುತ್ತಾನೆ. ಅದರ ಅದ್ಭುತವಾದ ರಚನೆಯೊಂದಿಗೆ ಐಕ್ಯಗೊಳ್ಳುವಂತಹ ವಿಶಿಷ್ಟ ಆರಾಧಾನಾ ಕ್ರಮವಿದು. ಪವಿತ್ರ ಕಅಬಾ ಅದರ ಕೇಂದ್ರಬಿಂದು. ಜನರು ಅದರ ಸುತ್ತಲೂ ತಿರುಗುತ್ತಾರೆ. ಸೌರಮಂಡಲದ ಗ್ರಹಗಳು ಸೂರ್ಯನ ಸುತ್ತಲೂ ಸುತ್ತುವಂತೆ ತಿರುಗುತ್ತಾರೆ. ಪರಮಾಣುವಿನ ಎಲೆಕ್ಟ್ರಾನುಗಳು ನ್ಯೂಕ್ಲಿಯಸ್‌ನ ಸುತ್ತಲೂ ಸುತ್ತುವಂತೆ ಸುತ್ತುತ್ತಾರೆ. ಏಳು ಬಾರಿ ಪ್ರದಕ್ಷಿಣೆ ಹಾಕಿದರೆ ಒಂದು ಎನಿಸಿಕೊಳ್ಳುತ್ತದೆ ಅಥವಾ ಏಳು ಭಾರಿ ತಿರುಗಿದರೆ ಒಂದು ತವಾಫ್ ಆಗುತ್ತದೆ. ಇಲ್ಲಿ ಏಳು ಎಂಬುದು ಪ್ರಪಂಚ ರಚನೆಯನ್ನು ಪ್ರತಿನಿಧಿಸುತ್ತದೆ. ಭೂಖಂಡಗಳು ಏಳಲ್ಲವೇ? ಸಮುದ್ರಗಳು ಏಳು ಮತ್ತು ಆಕಾಶವೂ ಏಳೆಂದು ಕುರ್‌ಆನ್ ಹೇಳುತ್ತದೆ.

ಬಲಭಾಗಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡುವ ಇಸ್ಲಾಮ್ ತವಾಫ್ ತೀರ್ಥಯಾತ್ರಿಕನ ಎಡಭಾಗದಿಂದ ಆಗಬೇಕೆಂದು ಆದೇಶಿಸಿದೆ. ಇದು ಬಹಳ ಗಮನಾರ್ಹ ವಿಚಾರವಾಗಿದೆ. ಇದರಿಂದ ಕಅಬಾ ಪ್ರದಕ್ಷಿಣೆಯು ಪ್ರಪಂಚ ವ್ಯವಸ್ಥೆಗೆ ಸಂಪೂರ್ಣ ವಿಧೇಯವಾಗಿದೆ. ಸೌರಮಂಡಲದ ಗೋಳಗಳು ಸೂರ್ಯನನ್ನು ಎಡಭಾಗದಿಂದ ಬರುವಂತೆ ಸುತ್ತುತ್ತದೆ. ಅಥವಾ ತವಾಫ್‌ನಂತೆಯೇ ಗಡಿಯಾರದ ಮುಳ್ಳು ಹಿಂದಕ್ಕೆ ಚಲಿಸುವ ರೀತಿಯಲ್ಲಿದೆ. ಗ್ರಹಗಳು ತನ್ನ ಕಕ್ಷೆಯಲ್ಲಿ ಅದೇ ರೀತಿ ತೇಲುತ್ತದೆ. ಧೂಮಕೇತುಗಳು ಸೂರ್ಯನ ಸುತ್ತಲೂ ಅದೇ ದಿಕ್ಕಿಗೆ ತಿರುಗುತ್ತದೆ. ಅಂಡ-ಬೀಜಾಣು ಸಂಕಲವಾಗುವ ಮೊದಲು ಪುರುಷಬೀಜಗಳು ಅಂಡಾಣುವಿನ ಸುತ್ತಲೂ ಸುತ್ತುವುದು ಆ್ಯಂಟಿಕ್ಲೋಕ್ ರೀತಿಯಲ್ಲಾಗಿದೆ. ಹೀಗೆ ವಿಶಿಷ್ಟವಾದ ಈ ಆರಾಧನಾ ಕ್ರಮವು ಪ್ರಪಂಚ ವ್ಯವಸ್ಥೆಯೊಂದಿಗೆ ವಿಸ್ಮಯಕರ ರೀತಿಯಲ್ಲಿ ಬೆರೆಯುತ್ತದೆ. ತಾನು ಪರಮಾಣುವಿನಿಂದ ಗೆಲಾಕ್ಸಿವರೆಗಿನ ವಿಶಾಲವಾದ ಪ್ರಪಂಚದ ಭಾಗವೆಂದೂ, ಅವೆಲ್ಲವೂ ಸೃಷ್ಟಿಕರ್ತನಿಗೆ ವಿಧೇಯವಾಗಿ ವರ್ತಿಸುವಂತೆ ತಾನು ಕೂಡಾ ಆತನನ್ನೇ ಆರಾಧಿಸಿ, ಜೀವಿಸುವವನೆಂಬ ಪ್ರಜ್ಞೆಯನ್ನು ಬೆಳೆಸುವ ಈ ಕರ್ಮವನ್ನು ತಾನು ಯಾವ ರೀತಿ ಮಾಡುತ್ತೇನೆಂಬ ಕುರಿತು ಒಂದು ಘೋಷಣೆಯೂ ಆಗಿದೆ.

ಕಅಬಾದ ಪ್ರದಕ್ಷಿಣೆಯ ಕುರಿತು ಅತ್ಯಂತ ಮಹತ್ವಪೂರ್ಣವೂ ವಿಸ್ಮಯಕರವೂ ಆದ ಈ ವಿಷಯಗಳನ್ನು ಇತ್ತೀಚೆಗಷ್ಟೆ ಅರಿಯಲು ಸಾಧ್ಯವಾಯಿತು. ಇನ್ನೂ ಮನವರಿಕೆಯಾಗದ ಹಲವು ಕಾರಣಗಳು ಇದಕ್ಕಿರಬಹುದು. ದೇವನು ನಿಶ್ಚಯಿಸಿದ ಆರಾಧನಾ ಕರ್ಮಗಳನ್ನು ಆತನ ಸೃಷ್ಟಿಗಳಾದ ಮನುಷ್ಯರು ಅದರ ಯುಕ್ತಿ ಹಾಗೂ ನ್ಯಾಯ ಅರ್ಥವಾದರೂ ಇಲ್ಲದಿದ್ದರೂ ನಿಶ್ಚಿತ ರೂಪದಲ್ಲಿ ನಿರ್ವಹಿಸಲು ಬಾಧ್ಯಸ್ಥರಾಗಿದ್ದಾರೆ.

## ದೇವಾಲಯ ಪ್ರದಕ್ಷಿಣೆ ಮತ್ತು ಕಅಬಾ ತವಾಫ್

**ಹಿಂದೂಗಳು ತಮ್ಮ ಕ್ಷೇತ್ರಗಳ ಸುತ್ತು ಪ್ರದಕ್ಷಿಣೆ ಹಾಕುವ ರೀತಿಯಲ್ಲಿ ಮುಸ್ಲಿಮರು ಕಅಬಾದ ಸುತ್ತಲೂ ಪ್ರದಕ್ಷಿಣೆ ಹಾಕುತ್ತಾರಲ್ಲಾ?**

ಪ್ರವಾದಿ ಇಬ್ರಾಹೀಮ್(ಅ)ರು ಪವಿತ್ರ ಕಅಬಾದ ಪುನರ್ನಿರ್ಮಾಣ ಮಾಡಿದರು. ಅವರೇ ಹಜ್ಜ್‌ಗೂ ಆಹ್ವಾನ ನೀಡಿದರು. ಅವರು ನಿರ್ಮಿಸಿದ ಕಅಬಾದಲ್ಲಿ ವಿಗ್ರಹಗಳೋ, ಮೂರ್ತಿಗಳೋ ಇರಲಿಲ್ಲ, ಮಾತ್ರವಲ್ಲ ಏಕದೇವಾರಾಧನೆಗಾಗಿ ಪ್ರವಾದಿ ಇಬ್ರಾಹೀಮ್(ಅ) ಮತ್ತು ಅವರ ಪುತ್ರ ಇಸ್ಮಾಯೀಲ್‌ರು ಸೇರಿಕೊಂಡು ಇದನ್ನು ನಿರ್ಮಿಸಿದರು. ಹಜ್ಜ್‌ನ ಭಾಗವಾಗಿ ಅದರ ಸುತ್ತಲೂ ಪ್ರದಕ್ಷಿಣೆ ಹಾಕುವ ಸಂಪ್ರದಾಯ ಅಂದೇ ಇತ್ತು. ಆದರೆ ನಂತರದ ದಿನಗಳಲ್ಲಿ ಜನರು ಮೂಢನಂಬಿಕೆ ಹಾಗೂ ಅನಾಚಾರಗಳ ಗುಲಾಮರಾಗಿ, ಆ ಪ್ರವಾದಿಗಳ ಚಿತ್ರಗಳನ್ನು ರಚಿಸಿ, ಕಅಬಾಲಯದಲ್ಲಿಟ್ಟು ಆರಾಧಿಸತೊಡಗಿದರು– ಬೇರೆಯೂ ನೂರಾರು ವಿಗ್ರಹಗಳು ಅಲ್ಲಿ ಸ್ಥಾನ ಪಡೆದವು. ಹೀಗೆ ಏಕದೇವಾರಾಧನೆ ನಡೆಯುತ್ತಿದ್ದ ಮಂದಿರದಲ್ಲಿ ವಿಗ್ರಹಗಳಿಗೆ ಪ್ರದಕ್ಷಿಣೆ ಹಾಕುವ ಪರಿಸ್ಥಿತಿ ಬಂತು. ಇಂತಹ ಸಂದರ್ಭದಲ್ಲಿ ಪ್ರವಾದಿ ಮುಹಮ್ಮದ್(ಸ)ರು ನಿಯೋಜಿತರಾಗಿ ಜನರ ಮನಸ್ಸನ್ನು ಆಮೂಲಾಗ್ರವಾಗಿ ಬದಲಾಯಿಸಿ, ಅವರಿಂದಲೇ ವಿಗ್ರಹಗಳನ್ನು ನಿರ್ಮೂಲನೆಗೊಳಿಸಿದರು. ಹೀಗೆ ಕಅಬಾದ ಪ್ರದಕ್ಷಿಣೆಯನ್ನು ಇಸ್ಲಾಮ್ ಮುಂದುವರಿಸಿತು. ಆದರೆ ಅದು ವಿಗ್ರಹಾರಾಧನೆಯ ಬದಲು ಏಕದೇವಾರಾಧನೆಯಾಗಿ ಬದಲಾಯಿತು. ನಗ್ನರಾಗಿ ಪ್ರದಕ್ಷಿಣೆ ಮಾಡುತ್ತಿದ್ದ ಸಂಪ್ರದಾಯವನ್ನು ಕೊನೆಗೊಳಿಸಿ, ಗೌರವಾರ್ಹ ಉಡುಪಿನೊಂದಿಗೆ ಪ್ರದಕ್ಷಿಣೆ ನಡೆಸಬೇಕೆಂದು ಆದೇಶಿಸಿತು. ಅದರಲ್ಲಿದ್ದ ಎಲ್ಲಾ ಅನಾಚಾರ, ಮೂಢಸಂಪ್ರದಾಯಗಳನ್ನು ಕೊನೆಗೊಳಿಸಿ ಅದನ್ನು ಶುದ್ಧೀಕರಿಸಲಾಯಿತು.

ಧರ್ಮಗಳ ಮೂಲ ಆಕರ ಒಂದೇ ಆಗಿರುವುದರಿಂದ ಆರಾಧನೆಗಳಲ್ಲೂ ಸಮಾನತೆ ಕಂಡುಬರುವುದು ಸಹಜವಾಗಿದೆ. ಭಾರತಕ್ಕೆ ವಲಸೆ ಬಂದ ಆರ್ಯರು ಪ್ರವಾದಿ ಇಬ್ರಾಹೀಮ್‌ರ ಅನುಯಾಯಿಗಳು ಹಾಗೂ ಉತ್ತರಾಧಿಕಾರಿಗಳೆಂಬ ಕೆಲವು ಸಂಶೋಧಕರ ನಿಲುವುಗಳು ಗಮನಾರ್ಹವಾಗಿದೆ. ಆದ್ದರಿಂದಲೇ ಪ್ರವಾದಿ ಇಬ್ರಾಹೀಮ್(ಅ)ರಿಂದ ಆರಂಭಗೊಂಡ ಆರಾಧನಾಕರ್ಮವು ಇಲ್ಲಿಯೂ ಪ್ರದಕ್ಷಿಣೆಯ ರೂಪದಲ್ಲಿ ಉಳಿದುಕೊಂಡಿದೆ. ಏನಿದ್ದರೂ ದೇವನನ್ನು ಪ್ರತಿನಿಧೀಕರಿಸಲು ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ ಅದನ್ನು ಆರಾಧಿಸುವುದು ಹಾಗೂ ಅಂತಹ ಕ್ಷೇತ್ರಗಳಿಗೆ ಪ್ರದಕ್ಷಿಣೆ ಹಾಕುವುದನ್ನು ಇಸ್ಲಾಮ್ ಬಹಳ ಪ್ರಬಲವಾಗಿ ವಿರೋಧಿಸುತ್ತದೆ.

ಆರಾಧನಾ ಕ್ರಮಗಳಲ್ಲಿರುವ ಸಾಮ್ಯತೆಯು, ಧರ್ಮಗಳ ಮೂಲ ಆಕರಕ್ಕೆ ಸಂಬಂಧಿಸಿದ ವಸ್ತುನಿಷ್ಠವಾದ ಸಂಶೋಧನೆಗೆ ಹಾಗೂ ಧಾರ್ಮಿಕ ಏಕತೆಯನ್ನು ಕಂಡು ಹಿಡಿಯಲು ಸಾಧ್ಯವಾದರೆ ಅದೊಂದು ದೊಡ್ಡ ವಿಜಯವಾಗಿರುವುದು. ಅಂತಹ ಸಂಶೋಧನೆಗೂ ಅಧ್ಯಯನಕ್ಕೂ ಈ ಸಂವಾದವು ಪ್ರೇರಕವಾಗಲಿ.

❖❖❖❖

## 25 ವಿಧಿ ವಿಶ್ವಾಸ-ಭೌತಿಕವಾದಿಗಳು ಮತ್ತು ಇಸ್ಲಾಮ್

**ದೇವನು ಸರ್ವಶಕ್ತ ಹಾಗೂ ಸರ್ವಜ್ಞನಾಗಿದ್ದಾನಲ್ಲವೇ? ಹೀಗಿರುವಾಗ ಲೋಕದ ಮನುಷ್ಯರು ಯಾವ ರೀತಿಯವರೆಂದೂ, ಹೇಗೆ ಬದುಕುವರೆಂದೂ ಸೃಷ್ಟಿಕರ್ತನಿಗೆ ಮೊದಲೇ ತಿಳಿದಿದೆ. ದಿವ್ಯಜ್ಞಾನದಲ್ಲಿ ತಪ್ಪು ಸಂಭವಿಸುವುದು ಅಸಾಧ್ಯವಾದುದರಿಂದ ದೇವನ ತೀರ್ಮಾನದಲ್ಲಿ ಸ್ವಲ್ಪವೂ ಬದಲಾವಣೆ ಸಾಧ್ಯವಿಲ್ಲವೆಂದು ಇದರ ಅರ್ಥವಲ್ಲವೇ? ದೇವವಿಧಿಗನುಗುಣವಾಗಿ ಮನುಷ್ಯ ಸಾಗಬೇಕಾದುದರಿಂದ ಮನುಷ್ಯನಿಗೆ ಸ್ವಾತಂತ್ರ್ಯ ಎಲ್ಲಿದೆ? ದೇವವಿಧಿಗೆ ನಿರ್ಬಂಧಿತನಾಗಿ ಆತ ಮಾಡುವ ಕರ್ಮಗಳ ಹೆಸರಿನಲ್ಲಿ ಶಿಕ್ಷೆ ನೀಡುವುದು ಎಷ್ಟು ಸರಿ?**

ಆಸ್ತಿಕರು ಹಾಗು ನಾಸ್ತಿಕರು ನಿರಂತರವಾಗಿ ಈ ವಿಷಯದಲ್ಲಿ ಸಂಶಯ ವ್ಯಕ್ತಪಡಿಸುತ್ತಲೇ ಇರುತ್ತಾರೆ. ಆದ್ದರಿಂದ ಈ ವಿಷಯವನ್ನು ಸ್ವಲ್ಪ ವಿವರವಾಗಿ ತಿಳಿಸುವುದು ಪ್ರಯೋಜನಕಾರಿಯೆಂದು ಭಾವಿಸುತ್ತೇನೆ.

ದೇವವಿಧಿ ಹಾಗೂ ಮಾನವ ಸ್ವಾತಂತ್ರ್ಯದ ಕುರಿತು ಇಸ್ಲಾಮ್‌ನ ನಿಲುವನ್ನು ವಿವರಿಸುವುದಕ್ಕಿಂತ ಮೊದಲು ಮನುಷ್ಯನ ಕುರಿತು ಭೌತಿಕವಾದಿಗಳ ನಿಲುವು ಹೇಗಿದೆಯೆಂದು ನೋಡುವುದು ಒಳಿತು.

1. ಭೌತಿಕವಾದಿಗಳ ಸ್ಪಷ್ಟನೆಯಂತೆ ಜೀವಶಾಸ್ತ್ರಕ್ಕೆ ಅನುಗುಣವಾಗಿ ಮನುಷ್ಯನು ಸ್ವಾತಂತ್ರ್ಯವಿಲ್ಲದವನು. ಅವನ ವಿಕಾರ, ವಿಚಾರ, ತೀರ್ಮಾನ ಹಾಗೂ ಕರ್ಮಗಳೆಲ್ಲಾ ದೇಹ ರಚನೆಯ ಸೃಷ್ಟಿಯಾಗಿದೆ. ಜೈವಿಕ ವಸ್ತುಗಳು ಜೀವಕೋಶಗಳಿಂದ ರೂಪಗೊಳ್ಳುತ್ತದೆ. ಅದರೊಳಗಿನ ಕ್ರೋಮೋಝೋಮ್‌ಗಳ ಜೀನುಗಳಲ್ಲಿರುವ ಜೈವಿಕಧಾತುಗಳು ಜೀವಿಗಳ ಸ್ವಭಾವವನ್ನು ನಿರ್ಧರಿಸುತ್ತದೆ. ಮಾನವನ ಸ್ಥಿತಿಯೂ ಅಷ್ಟೆ. ಆದ್ದರಿಂದ ಕರುಣೆ, ಕ್ರೌರ್ಯ, ಸದ್ಗುಣ, ದುರ್ಗಣ, ಸತ್ಕರ್ಮ-ದುಷ್ಕರ್ಮಗಳೆಲ್ಲವೂ ಜೀವಧಾತುಗಳಿಗೆ ಸಂಬಂಧಿಸಿದೆ. ಮಾನವನ ದೇಹ ಪ್ರಕೃತಿಯಿಂದ ವಿಚಾರಗಳು ಕೂಡಾ ಅದನ್ನೇ ಅನುಸರಿಸುತ್ತದೆ. ಜೀವನದ ಎಲ್ಲಾ ಕಾರ್ಯಗಳನ್ನು ಈ ರೀತಿ ವಂಶವಾಹಿನಿಯನ್ನು ಅವಲಂಬಿಸಿದೆಯೆಂದು ವಾದಿಸಲಾಗುತ್ತಿದೆ. ಅದನ್ನು ಉಲ್ಲಂಘಿಸಲು ಅಥವಾ ಬದಲಾವಣೆ ಮಾಡಲು ಯಾರಿಂದಲೂ ಸಾಧ್ಯವಿಲ್ಲ ಅಥವಾ ಮನುಷ್ಯನು ಸಂಪೂರ್ಣವಾಗಿ ತನ್ನ ಶರೀರ ಪ್ರಕೃತಿಗೆ ವಿಧೇಯನಾಗಿದ್ದಾನೆ. ಆತನನ್ನು ಸಂಪೂರ್ಣ ನಿಯಂತ್ರಿಸುವ ಕೆಲಸವನ್ನು ಅವನ ಮಸ್ತಿಷ್ಕದ ಹಾಗೂ ನರ ವ್ಯೂಹಗಳ ಪದಾರ್ಥ ಘಟಕಗಳು ನಿರ್ಣಯಿಸುತ್ತದೆ. ಅದರಲ್ಲಿ ಯಾರಿಗೂ ಮಧ್ಯ ಪ್ರವೇಶಿಸಲು ಅಥವಾ

ಏನಾದರೂ ಪಾಲುದಾರರಾಗಲು ಸಾಧ್ಯವಿಲ್ಲ, ಆದ್ದರಿಂದ ಆಧುನಿಕ ಭೌತಿಕ ಜೈವಿಕ ಶಾಸ್ತ್ರದಂತೆ ಮನುಷ್ಯನು ಪ್ರಕೃತಿ ವಿಧಿಗೆ ವಿಧೇಯನಾಗಿದ್ದಾನೆ. ಆದ್ದರಿಂದ ಹೊರಬರಲು ಸಾಧ್ಯವಾಗದ ರೀತಿಯಲ್ಲಿ ಸಂಪೂರ್ಣ ಬಂಧಿತನಾಗಿದ್ದಾನೆ. ನಾವು ಸರಿ-ತಪ್ಪು, ಒಳಿತು-ಕೆಡುಕು, ಧರ್ಮ-ಅಧರ್ಮ, ವಿನಯ-ಅಹಂಕಾರ, ಕರುಣೆ-ಕ್ರೌರ್ಯ ಎಂದು ಜೀನ್‌ಗಳ ವಂಶ ವಾಹಿನಿಗಳ ಕಾರಣಗಳಿಂದಲೇ ಉಂಟಾಗುತ್ತದೆ. ಜೀವನ ಪಾವಿತ್ರ್ಯತೆಯೂ ಶಾರೀರಿಕ ಆರೋಗ್ಯದಂತಹ ವಿಷಯವಾಗಿದೆ. ಜೀವನದ ಕೆಡುಕು ಶಾರೀರಿಕ ಅನಾರೋಗ್ಯದಂತೆ. ಆದ್ದರಿಂದ ಉತ್ಕೃಷ್ಟ ಕಾರ್ಯಗಳನ್ನು ನಿರ್ವಹಿಸುವ ವ್ಯಕ್ತಿಗಳನ್ನು ಹೊಗಳುವುದು ದೇಹದ ಆರೋಗ್ಯದ ವಿಷಯದಲ್ಲಿ ಒಬ್ಬನನ್ನು ಅಭಿನಂದಿಸಿದಂತೆ ಅರ್ಥಶೂನ್ಯವಾಗಿದೆ. ಓರ್ವನ ಕೆಡುಕನ್ನು ಖಂಡಿಸುವುದೆಂದರೆ ಅನಾರೋಗ್ಯ ಪೀಡಿತ ವ್ಯಕ್ತಿಯನ್ನು ಅನಾರೋಗ್ಯದ ಕಾರಣಕ್ಕೆ ಖಂಡಿಸಿದಂತಾಗುತ್ತದೆ.

2.ಚಾರ್ಲ್ಸ್ ಡಾರ್ವಿನ್‌ನ ವಿಕಾಸವಾದವು ಮುಂದಿರಿಸುವ ಒಂದು ವಿಷಯವೇನೆಂದರೆ ಪರಂಪರಾಗತ ನಿಯಮ. ಅದು ಹೇಳುವಂತೆ ಮನುಷ್ಯನ ಸ್ವಭಾವ, ಒಡನಾಟ, ಜೀವನ ಶೈಲಿಯೆಲ್ಲವೂ ಯುಗಯುಗಾಂತರಗಳಿಂದ ವಂಶಪಾರಂಪರ್ಯವಾಗಿ ಮುಂದುವರಿಯುತ್ತಾ ಬರುತ್ತದೆ. ಇದರಿಂದ ಪಾರಾಗಲು ಯಾರಿಗೂ ಸಾಧ್ಯವಿಲ್ಲ, ಮನುಷ್ಯನು ಮಾಡುವ ಒಳಿತು ಮತ್ತು ಕೆಡುಕಿನ ಬೀಜಗಳು ತನ್ನ ಪೂರ್ವಿಕರಲ್ಲಿ ನಿಕ್ಷೇಪಿಸಲಾಗಿದೆ. ಹೀಗೆ ಆ ಬೀಜವು ತಲೆತಲಾಂತರಗಳಿಗೆ ಮುಂದುವರಿಯುತ್ತದೆ. ಅದೇ ರೀತಿ ಮಾವಿನ ಬೀಜದಿಂದ ಮಾವಿನ ಹಣ್ಣು ದೊರೆಯುವಂತೆ ಮನುಷ್ಯನಲ್ಲೂ ಪರಂಪರಾಗತವಾಗಿ ಮುಂದುವರಿಯುತ್ತದೆ. ಆದ್ದರಿಂದ ಯಾರಿಗೂ ತಮ್ಮ ಸ್ವಭಾವಗುಣ, ವರ್ತನೆ, ಸಂಪ್ರದಾಯ, ಕರ್ಮಗಳನ್ನು ತೀರ್ಮಾನಿಸಲು ಸಾಧ್ಯವಿಲ್ಲ, ಎಲ್ಲವೂ ಅನುಲ್ಲಂಘನೀಯವಾದ ನಿಯಮಗಳಿಗೆ ವಿಧೇಯವಾಗಿದೆ. ಮನುಷ್ಯನು ಕಾಲದ ಕೈಯಲ್ಲಿರುವ ಆಟಿಕೆ ಮಾತ್ರ.

3. ಕಾರ್ಲ್ ಮಾರ್ಕ್ಸ್ ಮತ್ತು ಫೆಡ್ರಿಕ್ ಏಂಗಲ್ಸ್ ಸೇರಿದಂತೆ ಭೌತಿಕವಾದಿಗಳ ದೃಷ್ಟಿಕೋನದಂತೆ ಮನುಷ್ಯನು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ಪರಿಸ್ಥಿತಿಯ ಸೃಷ್ಟಿಯಾಗಿದ್ದಾನೆ. ಕೇವಲ ಭೌತಿಕ ಮಟ್ಟದಲ್ಲಿ ಇತಿಹಾಸವನ್ನು ವ್ಯಾಖ್ಯಾನಿಸಿದವರು ಅದನ್ನು ಸಮರ್ಥಿಸಲು ಅನೇಕ ಆಧಾರ ಪ್ರಮಾಣಗಳನ್ನು ಕಂಡುಹಿಡಿದರು. ಮನುಷ್ಯನ ಗುಣಸ್ವಭಾವ ಒಡನಾಟ, ವಿಚಾರಗಳು, ಕರ್ಮ, ಸಂಪ್ರದಾಯಗಳೆಲ್ಲವೂ ಬಾಹ್ಯ ಕಾರಣಗಳಿಂದ ಸಂಭವಿಸುತ್ತದೆಂದು ಅವರು ವಾದಿಸುತ್ತಾರೆ. ಜನರ ಒಳಿತು-ಕೆಡುಕುಗಳು ಅವರು ಬದುಕುವ ವಾತಾವರಣವನ್ನು ಅವಲಂಬಿಸಿದೆಯೆನ್ನುವ ಈ ವಿಭಾಗವು ಸರಿ-ತಪ್ಪು, ಧರ್ಮ-ಅಧರ್ಮ, ನ್ಯಾಯ-ಅನ್ಯಾಯ... ಎಲ್ಲವೂ ಕೂಡಾ ಪ್ರಸ್ತುತ ಪರಿಸ್ಥಿತಿಯ ಸೃಷ್ಟಿಯೆಂದು ವಾದಿಸುತ್ತಾರೆ. ಇಲ್ಲಿಯು ಕೂಡಾ ಮನುಷ್ಯನು ಪರಿಸ್ಥಿತಿಯ ವಿಧಿಗೆ ತಲೆಬಾಗುವವನಾಗುತ್ತಾನೆ. ಆತ ಮಾಡುವ ಎಲ್ಲಾ ಕರ್ಮಗಳು ಅಲ್ಲಿ ಪರಿಸ್ಥಿತಿಯೇ ಕಾರಣವೆನ್ನಲಾಗುತ್ತದೆ.

ಧರ್ಮ ವಿರೋಧಿ ಮುಖಮುದ್ರೆಯನ್ನು ಹೊತ್ತುಕೊಂಡು ಭೌತಿಕವಾದವು ಮನುಷ್ಯನು ಸ್ವಾತಂತ್ರ್ಯವಿಲ್ಲದವನೆಂದು ಘೋಷಿಸುತ್ತದೆ. ಸ್ವಂತ, ಸ್ವತಂತ್ರವಾದ ತೀರ್ಮಾನ ತೆಗೆದುಕೊಳ್ಳುವ ಕ್ತಿಯೂ ಅವನಿಗಿಲ್ಲ, ಆತ ಪ್ರಕೃತಿ ನಿಯಮದಲ್ಲಿ ಬಂಧಿತನಾದ, ಅನುಲ್ಲಂಘನೀಯ ವಿಧಿಯ ಲಿಪಶು. ಇವಾಗ್ ಪಾವ್ಲೋ ಬರೆಯುತ್ತಾರೆ: ''ಪ್ರಕೃತಿಯಲ್ಲಿರುವ ಎಲ್ಲಾ ವ್ಯವಸ್ಥೆಗಳಂತೆ ಮನುಷ್ಯನು ಒಂದು ವ್ಯವಸ್ಥೆಯಾಗಿದ್ದಾನೆ. ಪ್ರಕೃತಿಯ ಅನುಲ್ಲಂಘನೀಯವೂ ಸಾಮಾನ್ಯವೂ ದ ನಿಯಮಗಳಿಗೆ ಮನುಷ್ಯನು ಒಳಪಟ್ಟಿದ್ದಾನೆ.'' (Psychologic Experimental, ಉದ್ದರಣೆ: ಅಲಿಜಾ ಅಲೀ ಬೋಗೋವಿಚ್– ಇಸ್ಲಾಮ್ ರಾಜಮಾರ್ಗ ಪುಟ-39)

ಫ್ರೆಡ್ರಿಕ್ ಏಂಗಲ್ಸ್ ಹೇಳುತ್ತಾರೆ: ''ಮನುಷ್ಯನು ಆಯಾ ಪರಿಸ್ಥಿತಿಯ ಹಾಗೂ ಉದ್ಯೋಗದ ಉತ್ಪನ್ನವಾಗಿದ್ದಾನೆ.'' ( ಉದ್ಧರಣೆ Ibid, ಪುಟ 39)

ಮನುಷ್ಯನ ಹೊರತು ಇತರ ಜೀವಜಾಲಗಳಿಗೆ ಇವೆಲ್ಲವೂ ಸರಿಯಾಗಿದೆ. ಆದರೆ ಮನುಷ್ಯನು ಸ್ವಾತಂತ್ರ್ಯವಿಲ್ಲದವನೋ, ಪ್ರಕೃತಿ ನಿಯಮಗಳಲ್ಲಿ ಬಂಧಿತನೋ ಅಲ್ಲ.

1. ಪ್ರಾಣಿ ಪಕ್ಷಿಗಳು, ಕೀಟಗಳು, ಜಲಚರಗಳೆಲ್ಲವೂ ಅವುಗಳ ಹುಟ್ಟುಗುಣಕ್ಕೆ ನುಗುಣವಾಗಿ ಬದುಕುತ್ತದೆ. ಅದನ್ನು ಉಲ್ಲಂಘಿಸಲು, ಬದಲಾಯಿಸಲು ಅವುಗಳಿಗೆ ಧ್ಯವಿಲ್ಲ. ಸಹಜಗುಣದ ವಿಷಯದಲ್ಲಿ ಮನುಷ್ಯನನ್ನೂ ಮೀರಿಸುವ ಜೀವಜಾಲಗಳಿವೆ. ವುಗಳ ಸಹಜಗುಣಗಳೇ ಅವುಗಳ ಉಳಿವಿಗೂ, ಸುರಕ್ಷತೆಗೂ ಕಾರಣವಾಗಿದೆ. ಆದರೆ ಹಜಗುಣಗಳನ್ನು ನಿಯಂತ್ರಿಸಲು ಅವುಗಳಿಗೆ ಸಾಧ್ಯವಾಗುವುದಿಲ್ಲ. ಬಾಯಾರಿ ಬಳಲಿದ ಯಿಗೆ ನೀರು ಲಭಿಸಿದರೆ ಕುಡಿಯದಿರಲು ಸಾಧ್ಯವಿಲ್ಲ. ಕುಕ್ಕಲು ಬರುವ ಕೋಳಿಗೆ ದುರಾಗುವ ಹುಂಜವು ಅದನ್ನು ಕ್ಷಮಿಸುವುದಿಲ್ಲ. ಜೇನ್ನೊಣವು ನಿರ್ಣಯಿಸಿದ ಗೂಡಿನ ತಿಯಲ್ಲಿ ಮಾತ್ರ ಗೂಡು ಕಟ್ಟಬಲ್ಲದು. ದೇಶಾಂತರ ಹೋಗುವ ಪಕ್ಷಿಗಳಿಗೆ ದೂರ ಪ್ರದೇಶಕ್ಕೆ ಪದಿರಲು ಸಾಧ್ಯವಿಲ್ಲ. ಹಸಿದು ಬಳಲಿದ ದನಕ್ಕೆ ಹುಲ್ಲು ದೊರೆತರೆ ತಿನ್ನದಿರಲು ಧ್ಯವಾಗದು. ಆದರೆ ಮನುಷ್ಯನ ಸ್ಥಿತಿ ಭಿನ್ನವಾಗಿದೆ. ತೀವ್ರ ದಾಹವಿದ್ದರೂ ನೀರು ದೊರೆತರೂ, ಡಿಯುವ ಬಯಕೆ ಇದ್ದರೂ ಕುಡಿಯದಿರಲು ಮನುಷ್ಯರಿಗೆ ಸಾಧ್ಯವಿದೆ. ಬಹಳ ಹಸಿದಿದ್ದರೂ, ಹಾರ ಬಳಿಯಿದ್ದರೂ ತಿನ್ನದಿರಲು ಮನುಷ್ಯನಿಗೆ ಸಾಧ್ಯವಿದೆ. ಬೈದವನಿಗೆ ತಿರುಗಿ ಬಯ್ಯುವ ಮರ್ಥ್ಯವಿದ್ದರೂ ಹಾಗೆ ಮಾಡದಿರಲು ನಮಗೆ ಸಾಧ್ಯವಿದೆ. ನಮ್ಮ ಜೀವನ ಶೈಲಿಯನ್ನು ರ್ವರಿಸಲು, ರೂಢಿಸಲು ನಮಗೆ ಸಾಧ್ಯವಿದೆ. ಮಹಾನ್ ಧ್ಯೇಯಕ್ಕಾಗಿ ಹೋರಾಡುವ ವ್ಯಕ್ತಿ ಂಬಿದ ಇಚ್ಛಾಶಕ್ತಿಯೊಂದಿಗೆ ಆ ಕೆಲಸಕ್ಕೆ ಮುಂದಾಗುತ್ತಾನೆ. ಮೋಹಗಳಿಗೆ ಕಡಿವಾಣ ಕಲು, ಬಯಕೆಗಳನ್ನು ನಿಯಂತ್ರಿಸಲು, ಇಚ್ಛೆಗಳನ್ನು ನಿಯಂತ್ರಿಸಲು ಸಾಧ್ಯವಿರುವ ನುಷ್ಯರು ಖಂಡಿತವಾಗಿಯೂ ಸಹಜಗುಣದ ಗುಲಾಮರಲ್ಲ. ಅದರ ಯಜಮಾನ ಗಿದ್ದಾನೆ. ಶಾರೀರಿಕ ರಚನೆ, ವಂಶ ಪಾರಂಪರ್ಯ ಅಥವಾ ಪರಿಸ್ಥಿತಿಯ ಸೃಷ್ಟಿಯಲ್ಲ. ವಲಾಗಿ ಸ್ವತಃ ತೀರ್ಮಾನ ಕೈಗೊಳ್ಳುವ ಸಾಮರ್ಥ್ಯವಿರುವ ಸ್ವತಂತ್ರ ವ್ಯಕ್ತಿತ್ವವುಳ್ಳವನಾಗಿದ್ದಾನೆ.

2. ನಿರ್ಬಂಧಿತನಾಗಿ ಮಾಡುವ ಕರ್ಮಗಳಿಗಾಗಿ ಯಾರೂ ಹೊಗಳಲ್ಪಡುವುದೀ
ತೆಗಳಲ್ಪಡುವುದಿಲ್ಲ. ಗೌರವಾರ್ಹನೋ, ಶಿಕ್ಷಾರ್ಹನೋ ಆಗುವುದಿಲ್ಲ. ಯಜಮಾನನ ಬಲವಂ
ದಿಂದ ಕಳ್ಳತನ ಮಾಡುವ ಗುಲಾಮ, ದಾರಿಹೋಕರಿಗೆ ಕಲ್ಲೆಸೆಯುವ ಮನೋರೋಗಿಯನ
ಅಪರಾಧಿಯೆಂದು ಹೇಳುವುದಿಲ್ಲ. ಆದರೆ ಬೇರೆ ಯಾರಿಂದಾದರೂ ಆ ಕೃತ್ಯ ಸಂಭವಿಸಿದ
ಆತ ಆ ಅಪರಾಧಕ್ಕಾಗಿ ಶಿಕ್ಷೆ ಅನುಭವಿಸುತ್ತಾನೆ. ಆದ್ದರಿಂದ ಭೂಮಿಯಲ್ಲಿ ಗೌರ
ಆಕ್ಷೇಪ, ಶಿಕ್ಷೆ, ರಕ್ಷೆಯೂ ದೊರೆಯುತ್ತಿರುವುದು. ಮನುಷ್ಯನು ನಿರ್ಬಂಧಿತಾವಸ್ಥೆಯಲ್ಲೀ
ಸ್ವತಂತ್ರನಾಗಿದ್ದಾನೆಂಬುದಕ್ಕೆ ಸೂಕ್ತ ಆಧಾರವಾಗಿದೆ. ಆತ ಸ್ವಾತಂತ್ರ್ಯವಿಲ್ಲದವನು
ಪ್ರಕೃತಿ ನಿಯಮಗಳಿಂದ ಬಂಧಿಸಲ್ಪಟ್ಟವನೂ ಆಗಿದ್ದರೆ ತಾನೆಸಗಿದ ಕ್ರೂರ ಕೃತ್ಯಗಳಿಗಾ
ಶಿಕ್ಷಿಸಲ್ಪಡುವುದರಲ್ಲಿ ಅರ್ಥವಿಲ್ಲ. ಅದೇ ವೇಳೆ ಉತ್ಕೃಷ್ಟ ಕಾರ್ಯಗಳಿಗಾಗಿ ಅವನಿಗೆ ಗೌರ
ಹಾಗೂ ಪ್ರತಿಫಲ ನೀಡುವುದಕ್ಕೂ ಅರ್ಥವಿಲ್ಲ.

3. ಭೌತಿಕ ವಾದಿಗಳ ನಂಬಿಕೆಯಂತೆ ಮನುಷ್ಯನು ಸಂಪೂರ್ಣವಾಗಿ ಪ್ರಕೃತಿಯ ವಿಧಿ
ವಿಧೇಯನೆಂದಾದರೆ ಕಾನೂನು ನಿಯಮಗಳಿಗೂ, ವ್ಯವಸ್ಥೆಗಳಿಗೂ, ಶಿಷ್ಟಾಚಾರ, ಶಿಸ್ತುಗಳಿಗ
ಯಾವುದೇ ಬೆಲೆಯಿರುವುದಿಲ್ಲ. ಮಸ್ತಿಷ್ಕ, ನರವ್ಯೂಹ, ಜೀನುಗಳು, ವಂಶವಾಹಿನಿಗಳ
ಮಾನವ ಸಾಗುತ್ತಾನೆಂದಾದರೆ ಈ ವ್ಯವಸ್ಥೆಗಳ ಅಗತ್ಯವಿತ್ತೇ? ಆದರೆ ಸಂವಿಧಾ
ಕಾನೂನು ವ್ಯವಸ್ಥೆ, ನ್ಯಾಯಾಲಯಗಳಿಲ್ಲದ ಯಾವುದೇ ಸಮೂಹವಾಗಲಿ, ರಾಷ್ಟ್ರವಾಗ
ವಿಶ್ವದಲ್ಲಿಲ್ಲ. ಇದು ಮನುಷ್ಯನಿಗೆ ಸೀಮಿತ ಸ್ವಾತಂತ್ರ್ಯವಿದ್ದು ಕರ್ಮಗಳಿಗೆ ಪ್ರತಿಯೊಬ್ಬ
ಜವಾಬ್ದಾರರೆಂಬುದನ್ನು ಎಲ್ಲರೂ ಒಪ್ಪುತ್ತಾರೆಂಬುದನ್ನು ಸೂಚಿಸುತ್ತದೆ.

ಸಂಕ್ಷಿಪ್ತವಾಗಿ ಹೇಳುವುದಿದ್ದರೆ ಭೌತಿಕವಾದಿಗಳು ಧರ್ಮವಿಶ್ವಾಸಿಗಳಿಗಿಂತಲೂ ಹೆ
ವಿಧಿಯ ಮೇಲೆ ವಿಶ್ವಾಸವುಳ್ಳವರಾಗಿದ್ದಾರೆ. ಅದರೊಂದಿಗೆ ಪ್ರಕೃತಿ ನಿಯಮಗಳ ಬ
ಹಿಡಿತದಿಂದ ಬಂಧಿತನಾಗಿ, ಸ್ವಾತಂತ್ರ್ಯವೇ ಇಲ್ಲದ ಯಂತ್ರಸಮಾನವಾದ ಪ್ರಾಣಿಯೆ
ದೃಷ್ಟಿಕೋನ ಖಂಡಿತವಾಗಿಯೂ ವಸ್ತುನಿಷ್ಠವಲ್ಲ. ಮನುಷ್ಯನು ಇತರ ಜೀವಿಗಳಿಗಿ
ಭಿನ್ನವಾದ ಅಸ್ತಿತ್ವ ಹಾಗೂ ವ್ಯಕ್ತಿತ್ವ ಹೊಂದಿರುವನೆಂದು ಒಪ್ಪಿಕೊಳ್ಳದ ದಾರ್ಶನಿಕತೆಯ
ಅಸಂಬದ್ಧವೆನಿಸುತ್ತದೆ.

## ವಿಧಿವಿಶ್ವಾಸ: ಇಸ್ಲಾಮೀ ನಿಲುವು

ಬಿಳಿಯ, ಕರಿಯ, ಸುಂದರ, ಕುರೂಪಿ, ಪುರುಷ-ಸ್ತ್ರೀ, ಕುಳ್ಳಗಿನವ, ಉದ್ದ
ನಾವು ಯಾರಾಗಿರಬೇಕು? ಎಲ್ಲಿ ಹುಟ್ಟಬೇಕು? ಭಾರತದಲ್ಲೋ? ಇಂಡೋನೇಶ್ಯದಲ್ಲೋ
ಮರುಭೂಮಿಯಲ್ಲೋ? ಮಲೆನಾಡಿನಲ್ಲೋ? ಬಡವನ ಮನೆಯಲ್ಲೋ? ಸಿರಿವಂ
ಅರಮನೆಯಲ್ಲೋ? ಸರ್ವಾಧಿಕಾರಿ ವ್ಯವಸ್ಥೆಯಲ್ಲೋ? ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲೋ
ಯಾವ ಕಾಲದಲ್ಲಾಗಿರಬೇಕು? ಹನ್ನೊಂದನೇ ಶತಮಾನದಲ್ಲೋ? ಇಪ್ಪತ್ತೊಂದ

ತಮಾನದಲ್ಲೋ? ಹೀಗೆ ವರ್ಗ, ವರ್ಣ, ದೇಶ, ಭಾಷೆ, ಕಾಲ, ರೂಪ, ಕುಲ, ಲಿಂಗ....
ೊದಲಾದವುಗಳನ್ನು ತೀರ್ಮಾನಿಸುವವರು ನಾವಲ್ಲ, ನಮ್ಮೊಡನೆ ಸಮಾಲೋಚಿಸದೇ
ದೆಲ್ಲವನ್ನೂ ತೀರ್ಮಾನಿಸಲಾಗಿದೆ. ನಮ್ಮ ಮರಣವು ಎಲ್ಲಿ ಯಾವಾಗ ಎಂಬ
ೀರ್ಮಾನವೂ ನಮ್ಮದಲ್ಲ, ಎಲ್ಲವೂ ದೇವ ನಿಶ್ಚಿತವಾಗಿದೆ. ಅದು ಅನುಲ್ಲಂಘನೀಯವಾದ
ಧಿ ನಿಯಮವಾಗಿದೆ. ಇಂತಹ ವಿಷಯಗಳಲ್ಲಿ ನಾವು ದೇವನ ವಿಧಿಯನ್ನು ಪಾಲಿಸಲು
ರ್ಬಂಧಿತರಾಗಿದ್ದೇವೆ. ಇದರಲ್ಲಿ ನಮ್ಮ ಆಸೆ, ಅಭಿಲಾಷೆ, ಇಚ್ಛೆಗಳಿಗೆ ಯಾವುದೇ ಪಾಲು ಇಲ್ಲ,
ಲ್ಲಾಹನು ಹೇಳುತ್ತಾನೆ, ''ನಿಮ್ಮ ಮಾತೆಯರ ಗರ್ಭಗಳಲ್ಲಿ ತನಗಿಷ್ಟ ಬಂದ ರೂಪವನ್ನು ನಿಮಗೆ
ೊಡುವವನು ಅಲ್ಲಾಹನು. ಪ್ರಭಲನೂ, ಯುಕ್ತಿಪೂರ್ಣನೂ ಆಗಿರುವ ಅವನ ಹೊರತು
ನ್ಯ ಆರಾಧ್ಯನಿಲ್ಲ.'' (ಪವಿತ್ರ ಕುರ್‌ಆನ್ 3:6) ''ನಾವು ನಿಮ್ಮ ಸೃಷ್ಟಿಯನ್ನು ಆರಂಭಿಸಿದೆವು.
ನಂತರ ನಾವು ನಿಮಗೆ ರೂಪ ಕೊಟ್ಟೆವು.'' (ಪವಿತ್ರ ಕುರ್‌ಆನ್ 7:11) ''ಓ ಮಾನವಾ! ಆ
ನ್ನ ಕರುಣಾಮಯ ಪ್ರಭುವಿನ ಬಗ್ಗೆ ನಿನ್ನನ್ನು ಮೋಸಗೊಳಪಡಿಸಿದ ವಸ್ತು ಯಾವುದು? ಅವನು
ನ್ನನ್ನು ಸೃಷ್ಟಿಸಿದನು. ನಿನ್ನನ್ನು ನಖಶಿಖಾಂತ ಸರಿಪಡಿಸಿದನು, ನಿನ್ನನ್ನು ಸಂತುಲಿತಗೊಳಿಸಿದನು.''
ಪವಿತ್ರ ಕುರ್‌ಆನ್ 82:6-8)

ಪುರುಷನ ಯಾವ ಬೀಜವು ಸ್ತ್ರೀಯ ಅಂಡಾಣುವಿನೊಂದಿಗೆ ಸಂಯೋಜಿಸಬೇಕೆಂದು
ರ್ಮಾನಿಸುವುದು ಮನುಷ್ಯನಲ್ಲ, ದೇವನಾಗಿದ್ದಾನೆ. ಸಂಯೋಜನೆಗೊಳ್ಳುವ ಬೀಜದ
ದಲಾವಣೆಗನುಗುಣವಾಗಿ ಮನುಷ್ಯನ ಸ್ವಭಾವ, ರೂಪ, ಪ್ರಕೃತಿಯಲ್ಲೂ ವ್ಯತ್ಯಾಸ
ಭವಿಸುವುದೆಂಬ ಅರಿವು ಮೂಡಿದಾಗ ದೇವನಿಯಮದ ಪ್ರಾಧಾನ್ಯತೆ ಅರಿವಾಗುತ್ತದೆ.
ಲ್ಲಾಹನು ಕೇಳುತ್ತಾನೆ, ''ನೀವು ಸುರಿಸುವ ವೀರ್ಯದ ಕುರಿತು ನೀವೆಂದಾದರೂ
ವೇಚಿಸಿರುವಿರಾ? ಆದ್ದರಿಂದ ಶಿಶುವನ್ನು ಉಂಟುಮಾಡುವವರು ನೀವೋ ಅಥವಾ
ವನ್ನುಂಟು ಮಾಡುವವರು ನಾವೋ? (ಪವಿತ್ರ ಕುರ್‌ಆನ್ 56: 58,59)

ಲಕ್ಷಾಂತರ ವೀರ್ಯಾಣುಗಳ ಪೈಕಿ ಅಲ್ಲಾಹನು ತನಗಿಷ್ಟ ಬಂದ ಒಂದನ್ನು
ರ್ಭಾಶಯದಲ್ಲಿರುವ ಅಂಡಾಣುವಿನೊಂದಿಗೆ ಸೇರಿಸುತ್ತಾನೆ. ಅದರ ಗುಣದಂತೆ ಮಗು
ಣ್ಣು ಅಥವಾ ಗಂಡು ಆಗುತ್ತದೆ. ಅಲ್ಲಾಹನು ಹೇಳುತ್ತಾನೆ, ''ಅಲ್ಲಾಹನು ಭೂಮಿ,
ಾಶಗಳ ಪ್ರಭುತ್ವದ ಒಡೆಯನು. ಅವನು ತಾನಿಚ್ಛಿಸಿದವರಿಗೆ ಹೆಣ್ಣು ಮಕ್ಕಳನ್ನು ಕೊಡುತ್ತಾನೆ.
ನಿಚ್ಛಿಸಿದವರಿಗೆ ಗಂಡು ಮಕ್ಕಳನ್ನು ಕೊಡುತ್ತಾನೆ. ತಾನಿಚ್ಛಿಸಿದವರಿಗೆ ಗಂಡು-ಹೆಣ್ಣುಗಳೆರಡನ್ನೂ
ರಿಸಿ ಕೊಡುತ್ತಾನೆ. ತಾನಿಚ್ಛಿಸಿದವರನ್ನು ಬಂಜೆಯಾಗಿ ಮಾಡುತ್ತಾನೆ. ಅವನು ಸರ್ವಜ್ಞನೂ,
ರ್ವ ಸಮರ್ಥನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್ 42: 49-50)

''ಅಲ್ಲಾಹನು ವೀರ್ಯದ ಒಂದು ಬಿಂದುವಿನಿಂದ ಇವನನ್ನು ಸೃಷ್ಟಿಸಿದನು. ಹಾಗೂ
ಪ ಕೊಟ್ಟನು.'' (ಪವಿತ್ರ ಕುರ್‌ಆನ್ 80:19)

ಮನುಷ್ಯನ ರಚನೆ, ಜೀವನ ರೀತಿ, ಕುಟುಂಬ ಪರಂಪರೆಯಲ್ಲಿ ಶಾರೀರಿಕ ಪ್ರಕೃತಿಯೆಂ ಪಾತ್ರವಿದೆ. ಆದುದರಿಂದ ಅದು ದೇವನಿಶ್ಚಿತವಾಗಿದೆ. ದೇವನ ಮಿತಿಯನ್ನು ಮೀರಲ ಯಾರಿಂದಲೂ ಸಾಧ್ಯವಿಲ್ಲ. ಅಲ್ಲಾಹನು ಹೇಳುತ್ತಾನೆ: ವಸ್ತುತಃ ನಿಮ್ಮನ್ನೂ ನೀವು ನಿರ್ಮಿಸು ವಸ್ತುಗಳನ್ನೂ ಸೃಷ್ಟಿಸಿದವನು ಅಲ್ಲಾಹನಾಗಿದ್ದಾನೆ.'' (ಪವಿತ್ರ ಕುರ್‌ಆನ್ 37:96) ಅಲ್ಲಾಹ ತನಗಿಷ್ಟ ಬಂದವರನ್ನು ಪಥಭ್ರಷ್ಟಗೊಳಿಸುತ್ತಾನೆ ಮತ್ತು ತನಗಿಷ್ಟ ಬಂದವರನ್ನು ಸನ್ಮಾರ್ಗ ಹಾಕಿಬಿಡುತ್ತಾನೆ.'' (ಪವಿತ್ರ ಕುರ್‌ಆನ್ 6:39) ''ಅಲ್ಲಾಹನು ಸನ್ಮಾರ್ಗ ನೀಡಿದಾತನಿ ನೀವು ಸನ್ಮಾರ್ಗ ನೀಡಲಿಚ್ಛಿಸುತ್ತೀರಾ? ವಸ್ತುತಃ ಅಲ್ಲಾಹನು ಸನ್ಮಾರ್ಗದಿಂದ ತಪ್ಪಿಸಿದಾತನಿಗಾ ನೀವು ಯಾವ ದಾರಿಯನ್ನೂ ಕಾಣಲಾರಿರಿ. (ಪವಿತ್ರ ಕುರ್‌ಆನ್ 4:88) ''ನಿಮ್ಮ ಪ್ರಭುವಿ ವಿಧಿ-ನಿಯಮವಿರುತ್ತಿದ್ದರೆ ಭೂನಿವಾಸಿಗಳೆಲ್ಲರೂ ವಿಶ್ವಾಸವಿಟ್ಟೇ ತೀರುತ್ತಿದ್ದರು. ಹೀಗಿರುವಾ ಜನರೆಲ್ಲರೂ ಸತ್ಯವಿಶ್ವಾಸಿ ಗಳಾಗಬೇಕೆಂದು ನೀವು ಒತ್ತಾಯಪಡಿಸುವಿರಾ? ಯಾರೊಬ್ಬನ ಅಲ್ಲಾಹನ ಅನುಮತಿಯ ಹೊರತು ವಿಶ್ವಾಸವಿಡಲಾರನು. (ಪವಿತ್ರ ಕುರ್‌ಆನ್ 10:99)

'ಅವಿಶ್ವಾಸಿಗಳಿಗೆ ನೀವು ಆದೇಶ ಕೊಟ್ಟರೂ, ಕೊಡದಿದ್ದರೂ ಸರಿಯೇ, ಅವರಂತ ವಿಶ್ವಾಸವಿಡುವವರರಲ್ಲ. ಅಲ್ಲಾಹನು ಅವರ ಹೃದಯಗಳ ಹಾಗೂ ಕಿವಿಗಳ ಮೇ ಮುದ್ರೆಯೊತ್ತಿರುತ್ತಾನೆ. ಅವರ ದೃಷ್ಟಿಗಳ ಮೇಲೆ ಪರದೆ ಬಿದ್ದಿದೆ. ಅವರಿಗೆ ಘೋರ ಶಿಕ್ಷೆಕಾದಿದೆ (ಪವಿತ್ರ ಕುರ್‌ಆನ್ 2:6-7)

ಭೂಮಿಯ ಮೇಲೆ ಅಥವಾ ನಿಮ್ಮ ಮೇಲೆ ಎರಗುವ ಯಾವ ಸಂಕಷ್ಟವೂ ನಾವು ಅದ ಸೃಷ್ಟಿಸುವುದಕ್ಕೆ ಮುಂಚೆ ಒಂದು ಗ್ರಂಥದಲ್ಲಿ (ವಿಧಿಲಿಖಿತದಲ್ಲಿ) ಬರೆದಿಟ್ಟುಕೊಳ್ಳದೇ ಇ ಖಂಡಿತವಾಗಿಯೂ ಹೀಗೆ ಮಾಡುವುದು ಅಲ್ಲಾಹನಿಗೆ ಅತ್ಯಂತ ಸುಲಭ ಕಾರ್ಯವಾಗಿದೆ. (ಪವಿತ್ರ ಕುರ್‌ಆನ್ 57: 22)

ಆದರೆ ಎಲ್ಲವನ್ನೂ ದೇವವಿಧಿಯೆಂದು ಹೇಳುವ ಪವಿತ್ರ ಕುರ್‌ಆನ್ ಮನುಷ್ಯ ನೀಡಲಾಗುವ ಸ್ವಾತಂತ್ರ್ಯದ ಕುರಿತು ಒತ್ತಿ ಹೇಳುತ್ತದೆ. ಹುಟ್ಟಿನಿಂದಲೇ ಮನುಷ್ಯನಿಗೆ ಒಳಿ ಕೆಡುಕುಗಳನ್ನು ವಿವೇಚಿಸುವ ಶಕ್ತಿಯನ್ನು ನೀಡಲಾಗಿದೆ. ಅಲ್ಲಾಹನು ಹೇಳುತ್ತಾನೆ: 'ಅಲ್ಲಾಹ ಮಾನವ ಚಿತ್ತದ ಹಾಗೂ ಅದನ್ನು ಸುಗಮಗೊಳಿಸಿದ ಬಳಿಕ ಅದರ ದುಷ್ಟತೆಯನ್ನೂ, ಅದ ಸಾತ್ವಿಕತೆಯನ್ನೂ ಅದಕ್ಕೆ ಪ್ರೇರೇಪಿಸಿದನು.' (ಪವಿತ್ರ ಕುರ್‌ಆನ್ 91:7-8)

ನಾವು ಅವನಿಗೆ ಎರಡು ಕಣ್ಣುಗಳನ್ನೂ, ಒಂದು ನಾಲಗೆಯನ್ನೂ, ಎರಡು ತುಟಿಗಳನ ಕೊಟ್ಟಿಲ್ಲವೇ? ಮತ್ತು ಅವನಿಗೆ ಎರಡು ಸುಸ್ಪಷ್ಟ ದಾರಿಗಳನ್ನೂ ತೋರಿಸಿ ಕೊಡಲಿಲ್ಲವೇ? (ಪವಿ ಕುರ್‌ಆನ್ 90:8-10)

ಆದ್ದರಿಂದ ಮಾನವರಿಗೆ ಒಳಿತು-ಕೆಡುಕು, ಸರಿ-ತಪ್ಪು, ಧರ್ಮ-ಅಧರ್ಮವ ಆರಿಸಿಕೊಂಡು ಸನ್ಮಾರ್ಗಿ ಹಾಗೂ ದುರ್ಮಾಗಿಯಾಗುವ ಸ್ವಾತಂತ್ರ್ಯವಿದೆ. ಹೀಗೆ ಸ್ವಯ ತೀರ್ಮಾನಿಸಿ ಬದುಕು ಸಾಗಿಸುವುದಕ್ಕೆ ಅನುಗುಣವಾಗಿ ಪರಲೋಕದ ಶಿಕ್ಷೆ-ರಕ್ಷೆ ದೊರೆಯ

ದೆ. ಕುರ್‌ಆನ್ ಹೇಳುತ್ತದೆ, ''ಸನ್ಮಾರ್ಗ ಸ್ವೀಕರಿಸಿಕೊಳ್ಳುವವನ ಸನ್ಮಾರ್ಗ ಗಮನವು ಅವನಿಗೇ
ಳಿತಾಗಿದೆ ಮತ್ತು ಪಥಭ್ರಷ್ಟನ ಪಥಭ್ರಷ್ಟತೆಯ ವಿಪತ್ತು ಅವನ ಮೇಲೆಯೇ ಬೀಳುತ್ತದೆ.
ಯಾವ ಹೊರೆ ಹೊರುವಾತನೂ, ಇನ್ನೊಬ್ಬನ ಹೊರೆಯನ್ನು ಹೊರಲಾರನು.'' (ಪವಿತ್ರ
ರ್‌ಆನ್ 17: 15) 'ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ, ಬಲಾತ್ಕಾರಗಳಿಲ್ಲ,
ನ್ಮಾರ್ಗವು ದುರ್ಮಾರ್ಗದಿಂದ ಬೇರ್ಪಡಿಸಲ್ಪಟ್ಟಿದೆ. ಇನ್ನು 'ತಾಗೂತ'(ಅತಿಕ್ರಮ)ನ್ನು
ರಾಕರಿಸಿ, ಅಲ್ಲಾಹನಲ್ಲಿ ವಿಶ್ವಾಸವಿಟ್ಟಾತನು ಎಂದೆಂದಿಗೂ ಮುರಿಯದಂತಹ ಬಲವಾದ
ಧಾರವನ್ನು ನೆಚ್ಚಿಕೊಂಡನು.' (ಪವಿತ್ರ ಕುರ್‌ಆನ್ 2:256) 'ಸ್ಪಷ್ಟವಾಗಿ (ಹೀಗೆ) ಹೇಳಿಬಿಡಿರಿ,
ದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ. ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ,
ಷ್ಟವಿದ್ದವರು ನಿರಾಕರಿಸಲಿ. (ನಿರಾಕರಿಸುವ) ಅಕ್ರಮಿಗಳಿಗೆ ನಾವು ಒಂದು ಅಗ್ನಿಯನ್ನು
ದ್ಧಗೊಳಿಸಿ ಬಿಟ್ಟಿರುತ್ತೇವೆ.' (ಪವಿತ್ರ ಕುರ್‌ಆನ್ 18:29) ''ವಾಸ್ತವದಲ್ಲಿ ಒಂದು ಜನಾಂಗವು
ತಃ ತಾನೇ ತನ್ನ ಸ್ಥಿತಿಯನ್ನು ಬದಲಾಯಿಸಿಕೊಳ್ಳುವವರೆಗೂ ಅಲ್ಲಾಹನು ಅದರ ಸ್ಥಿತಿಯನ್ನು
ದಲಾಯಿಸುವುದಿಲ್ಲ,'' (ಪವಿತ್ರ ಕುರ್‌ಆನ್ 13:11) ''ಕೇಡು ಯಾರು ಮಾಡಿದರೂ ಅದರ
ಲವನ್ನು ಅವನೇ ಪಡೆದು ತೀರುವನು.'' (ಪವಿತ್ರ ಕುರ್‌ಆನ್ 4:123) ''ಪ್ರತಿಯೊಬ್ಬನೂ ತನ್ನ
ಡಿಮೆಯ ಬದಲಿಗೆ ಅಡವಾಗಿದ್ದಾನೆ.'' (ಪವಿತ್ರ ಕುರ್‌ಆನ್ 52:21) '' ಇಂದು ನಿಮಗೆ
ವು ಮಾಡುತ್ತಿದ್ದ ಕರ್ಮಗಳ ಪ್ರತಿಫಲವನ್ನು ನೀಡಲಾಗುವುದು.'' (ಪವಿತ್ರ ಕುರ್‌ಆನ್
5:28) ''ಮಾಡಿದುಣ್ಣುವ ಹೊರತು ನೀವು ಇನ್ನಾವುದಾದರೂ ಪ್ರತಿಫಲ ಪಡೆಯಬಲ್ಲಿರಾ?''
7:90) 'ನಿಮ್ಮ ಪ್ರಭು ತನ್ನ ದಾಸರ ಪಾಲಿಗೆ ಅಕ್ರಮಿಯಲ್ಲ.'' (ಪವಿತ್ರ ಕುರ್‌ಆನ್ 41:46)
ಜನರ ಸ್ವಂತ ಕೈಗಳ ದುಡಿಮೆಯಿಂದ ನೆಲ-ಜಲಗಳಲ್ಲಿ ಕ್ಷೋಭೆಯುಂಟಾಗಿ ಬಿಟ್ಟಿದೆ.''
ಪವಿತ್ರ ಕುರ್‌ಆನ್ 30:41) ''ನಿಮಗೆ ಒದಗಿರುವ ಯಾವುದೇ ಸಂಕಷ್ಟವು ನಿಮ್ಮ ಕೈಗಳ
ಳಿಕೆಯಿಂದಲೇ ಆಗಿದೆ.'' (ಪವಿತ್ರ ಕುರ್‌ಆನ್ 42:30) ''ವಾಸ್ತವದಲ್ಲಿ ಅಲ್ಲಾಹನು ಜನರ
ಮೇಲೆ ಅಕ್ರಮವೆಸಗುವುದಿಲ್ಲ, ಜನರು ತಾವೇ ತಮ್ಮ ಮೇಲೆ ಅಕ್ರಮವೆಸಗಿಕೊಳ್ಳುತ್ತಾರೆ.''
ಪವಿತ್ರ ಕುರ್‌ಆನ್ 10:44) ''ಯಾರು ಸನ್ಮಾರ್ಗವನ್ನು ಅನುಸರಿಸುವನೋ, ಅವನ ಸನ್ಮಾರ್ಗ
ಕ್ರಿಯೆಯಿಂದ ಅವನಿಗೇ ಫಲಕಾರಿಯಾಗುವುದು.'' (ಪವಿತ್ರ ಕುರ್‌ಆನ್ 10:108)
ನಾಡುಗಳಲ್ಲಿರುವವರು ಅಕ್ರಮಿಗಳಾಗಿ ಬಿಡುವವರೆಗೂ ನಿಮ್ಮ ಪ್ರಭು ನಾಡುಗಳನ್ನು
ಶಗೊಳಿಸುವವನಾಗಿರಲಿಲ್ಲ.'' (ಪವಿತ್ರ ಕುರ್‌ಆನ್ 28:59) ''ಯಾರು ಒಳಿತಿಗಾಗಿ
ಹೋರಾಡುವರೋ ಅವರಿಗೆ ನಾವು ನಮ್ಮ ಮಾರ್ಗಗಳನ್ನು ತೋರಿಸಿಕೊಡುವೆವು.'' (ಪವಿತ್ರ
ರ್‌ಆನ್ 29:69) 'ನನ್ನ ಬೋಧನೆಯಿಂದ ವಿಮುಖನಾದವನ ಜೀವನವು ಭೂಲೋಕದಲ್ಲಿ
ಂಕೀರ್ಣವಾಗಿವುದು. ಮತ್ತು ಪುರುತ್ಥಾನದ ದಿನ ನಾವು ಅವರನ್ನು ಕುರುಡನನ್ನಾಗಿ ಮಾಡಿ
ಬ್ಬಿಸುವೆವು. ಆಗ ಅವನು ''ಓ ನನ್ನ ಪ್ರಭೂ, ಭೂಲೋಕದಲ್ಲಿ ನಾನು ದೃಷ್ಟಿಯುಳ್ಳವನಾಗಿದ್ದೆ.
ನ್ನನ್ನು ಇಲ್ಲೇಕೆ ಕುರುಡನಾಗಿ ಎಬ್ಬಿಸಿದೆ ಎಂದು ಕೇಳುವನು, ಆಗ ಅಲ್ಲಾಹನು 'ನಮ್ಮ ವಚನಗಳು

ನಿನ್ನ ಬಳಿಗೆ ಬಂದಿದ್ದಾಗ ನೀನು ಇದೇ ರೀತಿಯಲ್ಲಿ ಮರೆತು ಬಿಟ್ಟಿದ್ದೆ. ಹಾಗೆ ಇಂದು ನೀನ ಮರೆಯಲ್ಪಡುತ್ತಿರುವೆ' ಎನ್ನುವನು. ಹೀಗೆ ನಾವು ಹದತಪ್ಪಿ ಸಾಗುವವನಿಗೂ ತನ್ನ ಪ್ರಭುವಿ ವಚನಗಳ ಮೇಲೆ ವಿಶ್ವಾಸವಿರಿಸದವನಿಗೂ (ಭೂಲೋಕದಲ್ಲಿ) ಪ್ರತಿಫಲ ಕೊಡುತ್ತೇವೆ ಮತ ಪರಲೋಕದ ಯಾತನೆಯು ಅಧಿಕ ಪ್ರಚಂಡವೂ ಹೆಚ್ಚು ಶಾಶ್ವತವೂ ಆಗಿರುತ್ತದೆ. (ಪವಿತ್ರ ಕುರ ಆನ್ 20:124-127)

'ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆ ಹೊರಲಾರನು. ಮನುಷ್ಯನ ತಾನೇ ಪರಿಶ್ರಮಿಸುವುದರ ಹೊರತು ಅವನಿಗೆ ಬೇರೇನೂ ಇಲ್ಲ ಮತ್ತು ಅವನ ಪರಿಶ್ರಮವನ ಸದ್ಯವೇ ನೋಡಲಾಗುವುದು. ಆನಂತರ ಅವನ ಸಂಪೂರ್ಣ ಪ್ರತಿಫಲ ನೀಡಲಾಗುವುದು. (ಪವಿತ್ರ ಕುರ್‌ಆನ್ 53:38-41) ''ಅಣು ಗಾತ್ರದಷ್ಟು ಪುಣ್ಯಕಾರ್ಯವೆಸಗಿರುವವನು ಅದನ ಕಂಡೇ ತೀರುವನು ಮತ್ತು ಅಣು ಗಾತ್ರದಷ್ಟು ಪಾಪ ಕಾರ್ಯವೆಸಗಿದವನು ಅದನ್ನು ಕಂಡೆ ತೀರುವನು.'' (ಪವಿತ್ರ ಕುರ್‌ಆನ್ 99:7-8)

ಇಸ್ಲಾಮೀ ದೃಷ್ಟಿಕೋನದಂತೆ ಮನುಷ್ಯರು ಸ್ವಲ್ಪವೂ ಸ್ವಾತಂತ್ರ್ಯವಿಲ್ಲದವರೋ ಅಥವ ಕೇವಲ ವಿಧಿಯ ಕೈಗೊಂಬೆಯೋ, ಉಪಕರಣವೋ ಅಲ್ಲವೆಂದ ಮೇಲೆ ಉದ್ಧರಿಸಿದ ಹಲವಾರ ಕುರ್‌ಆನ್ ವಚನಗಳು ಸ್ಪಷ್ಟಪಡಿಸುತ್ತದೆ. ತನ್ನ ಜೀವನ ಮಾರ್ಗವನ್ನು ತೀರ್ಮಾನಿಸಲು ಹಾಗು ಆಯ್ದುಕೊಳ್ಳಲು ಪ್ರತಿಯೊಬ್ಬನಿಗೂ ಸ್ವಾತಂತ್ರ್ಯ ಹಾಗೂ ಅನುಮತಿಯಿದೆ. ಆದ್ದರಿಂದ ಮಾನ ಜೀವನದಲ್ಲಿ ಎರಡು ವಿಧವಿದೆ. ಊರು, ದೇಶ, ಭಾಷೆ, ಕಾಲ, ಲಿಂಗ, ವಂಶ, ಜನನ, ಮರಣ ರೂಪ... ಮೊದಲಾದವುಗಳು ಮನುಷ್ಯರ ನಿಯಂತ್ರಣದಲ್ಲೋ, ಪರಿಧಿಯಲ್ಲೋ ಇಲ್ಲ, ಇದ ಒಂದನೆಯ ಭಾಗ. ಇನ್ನೊಂದು ಭಾಗದಲ್ಲಿ ತಾನು ಏನು ಕುಡಿಯಬೇಕು? ಕುಡಿಯಬಾರದು' ಏನು ನೋಡಬೇಕು? ನೋಡಬಾರದು? ಏನು ತಿನ್ನಬೇಕು? ತಿನ್ನಬಾರದು? ಏನು ಕೇಳಬೇಕು' ಕೇಳಬಾರದು? ಏನು ಹೇಳಬೇಕು? ಹೇಳಬಾರದು? ಏನು ಮಾಡಬೇಕು? ಮಾಡಬಾರದು' ಹೇಗೆ ಬದುಕಬೇಕು? ಬದುಕಬಾರದು? ಮೊದಲಾದ ವಿಷಯಗಳನ್ನು ತೀರ್ಮಾನಿ ಅದರೆಡೆಗೆ ಸಾಗಲು ಮನುಷ್ಯನಿಗೆ ಹೊಣೆಗಾರಿಕೆಯೂ, ಸ್ವಾತಂತ್ರ್ಯವೂ ಇದೆ. ಆದರೆ ಈ ಸ್ವಾತಂತ್ರ್ಯವು ಅಪರಿಮಿತವೋ, ಅನಿಯಂತ್ರಿತವೋ ಅಲ್ಲ, ಅದಕ್ಕೆ ಉಪಯೋಗಿಸುವ ಕಣ್ಣು ಕಿವಿ, ನಾಲಗೆ, ಮೂಗು, ಕೈ, ಕಾಲು, ಶರೀರ ಹಾಗೂ ಜೀವನ ಸಂಪೂರ್ಣವಾಗಿ ಮನುಷ್ಯ ನಿಯಂತ್ರಣದಲ್ಲಿಲ್ಲವಲ್ಲಾ? ಅವೆಲ್ಲವೂ ದೇವನ ನಿಯಂತ್ರಣದಲ್ಲಿದೆ. ಆದರೊಂದಿ ಅವುಗಳನ್ನು ತಮ್ಮಿಷ್ಟದಂತೆ ಉಪಯೋಗಿಸುವ ಸಾಧ್ಯತೆ ಹಾಗೂ ಸ್ವಾತಂತ್ರ್ಯವನ್ನು ದೇವನೆ ಮನುಷ್ಯರಿಗೆ ನೀಡಿದ್ದಾನೆ. ಹೀಗೆ ಲಭ್ಯವಿರುವ ಸ್ವಾತಂತ್ರ್ಯಕ್ಕೆ ಅನುಗುಣವಾಗಿ ಮನುಷ್ಯ ಮೇಲೆ ಹಲವಾರು ಹೊಣೆಗಾರಿಕೆಯನ್ನು ವಹಿಸಲಾಗಿದೆ. ಅಥವಾ ಪ್ರತಿಯೊಬ್ಬ ಮನುಷ್ಯನು ತನಗೆ ಲಭಿಸಿದ ಸ್ವಾತಂತ್ರ್ಯವನ್ನು ಯಾವ ರೀತಿ ಉಪಯೋಗಿಸಿದ್ದಾನೆಂಬುದನ್ನು ನೋಡಿಕೊಂಡ ಅವನಿಗೆ ಜೀವನದ ವಿಜಯ ಹಾಗೂ ಪರಾಜಯ, ರಕ್ಷೆ-ಶಿಕ್ಷೆ ಲಭಿಸುತ್ತದೆ. ಹೀಗೆ ದೇವನ

ೀಡಿದ ಸ್ವಾತಂತ್ರ್ಯದಲ್ಲಿ ನಾವು ಮಾರ್ಗದರ್ಶನ ಪಡೆಯಲು ದೇವನು ಪ್ರವಾದಿಗಳನ್ನು ಳುಹಿಸಿದ್ದನು. ತಮಗಿರುವ ಅವಕಾಶ ಹಾಗೂ ಸ್ವಾತಂತ್ರ್ಯವನ್ನು ಬಳಸಿಕೊಂಡು ಯಶಸ್ವೀ ಜೀವನ ನಡೆಸುವವರಿಗೆ ಸ್ವರ್ಗದ ಸುವಾರ್ತೆ ನೀಡಲಾಗಿದೆ. ಅದೇ ರೀತಿ ದೇವಧರ್ಮವನ್ನು ತಿರಸ್ಕರಿಸಿ ಸ್ವೇಚ್ಛೆಯಿಂದ ಬಾಳುವವರಿಗೆ ಪರಾಜಯ ಹಾಗೂ ನರಕದ ಕಠಿಣ ಶಿಕ್ಷೆಯಿದೆ. ಸನ್ಮಾರ್ಗವನ್ನು ಸ್ವೀಕರಿಸಿ ಉತ್ತಮ ವ್ಯಕ್ತಿಗಳಾಗಿ ಬಾಳಲು ತೀರ್ಮಾನಿಸಿದ ಹಾಗೂ ಅದಕ್ಕಾಗಿ ಪ್ರಯತ್ನಿಸುವ ಯಾರನ್ನೂ ಅಲ್ಲಾಹನು ನಿರ್ಬಂಧಿಸಿ ದುರ್ಮಾರ್ಗಿಗಳನ್ನಾಗಿ ಮಾಡುವುದಿಲ್ಲ.

ಮನುಷ್ಯನಿಗೆ ನೀಡಲಾದ ಸ್ವಾತಂತ್ರ್ಯವನ್ನು ಹಾಗೂ ಸಾಧ್ಯತೆಯನ್ನು ಮೀರಿದ ಯಾವುದೇ ಕಾರ್ಯವನ್ನು ದೇವನು ಅವರಿಗೆ ಆಜ್ಞಾಪಿಸುವುದಿಲ್ಲ. ಅಲ್ಲಾಹನು ಹೇಳುತ್ತಾನೆ, '**ಅಲ್ಲಾಹನು ಯಾವ ಜೀವಿಯ ಮೇಲೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸುವುದಿಲ್ಲ. ಪ್ರತಿಯೊಬ್ಬನು ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು. ಮತ್ತು ಅವನು ಶೇಖರಿಸಿದ ಪಾಪದ ದಂಡವೂ ಅವನ ಮೇಲಿರುವುದು. (ಪವಿತ್ರ ಕುರ್‌ಆನ್ 2:286)**

**ಅಲ್ಲಾಹನು ಯಾರಿಗೂ ಅನ್ಯಾಯ ಮಾಡುವುದಿಲ್ಲ. ''ನಿಮ್ಮ ಪ್ರಭು ತನ್ನ ದಾಸರ ಪಾಲಿಗೆ ಅಕ್ರಮಿಯಲ್ಲ.'' (ಪವಿತ್ರ ಕುರ್‌ಆನ್ 41:46)**

ಮಾನವರ ತೀರ್ಮಾನಗಳು ಹಾಗೂ ಕರ್ಮಗಳು ದೇವನ ಅರಿವು ಮತ್ತು ವಿಧಿಗೆ ವಿಧೇಯವಲ್ಲವೇ? ಮಾನವ ಸ್ವಾತಂತ್ರ್ಯವನ್ನೂ ದೇವವಿಧಿಯನ್ನೂ ಜೋಡಿಸುವ ಕೊಂಡಿ ಯಾವುದು? ಹೇಗೆ? ಎಂಬ ಪ್ರಶ್ನೆಗಳು ಉಂಟಾಗಬಹುದು. ಆದರೆ ಇಲ್ಲಿ ಮನುಷ್ಯನು ತನ್ನ ಪರಿಧಿ ಹಾಗೂ ಪರಿಮಿತಿಯನ್ನು ಚೆನ್ನಾಗಿ ಗ್ರಹಿಸಿಕೊಳ್ಳಬೇಕು. ಭೂಮಿಯು ಅನಂತವೂ, ವಿಶಾಲವೂ ಆದ ಮಹಾಪ್ರಪಂಚದ ಒಂದು ಸಣ್ಣ ಗೋಳವಾಗಿದೆ. ಅದರ ಸಹಸ್ರ ಕೋಟಿ ಜೀವಿಗಳಲ್ಲಿ ಮನುಷ್ಯ ಓರ್ವ ಸೃಷ್ಟಿ ಮಾತ್ರ. ಆತನಿಗೆ ಇಂದಿನವರೆಗೆ ತನ್ನ ಕುರಿತು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಜೀವನ, ಬುದ್ಧಿ, ನೆನಪುಶಕ್ತಿ, ಆತ್ಮ.... ಮೊದಲಾದವುಗಳ ಕುರಿತು ಸೂಕ್ಷ್ಮವಾದ ಅರಿವು ಯಾರಿಗೂ ಇಲ್ಲ. ತಾನು ಬದುಕುತ್ತಿರುವ ಭೂಮಿ ಹಾಗೂ ಪ್ರಪಂಚದ ಕುರಿತು ಜ್ಞಾನವೂ ಪರಿಮಿತವಾಗಿದೆ. ಆ ಮಹಾ ಜ್ಞಾನ ಬಂಡಾರವನ್ನು ಸಮುದ್ರಕ್ಕೆ ಹೋಲಿಸಿದರೆ ಅದರ ಒಂದು ಹನಿಯನ್ನೂ ಅರ್ಥಮಾಡಿಕೊಳ್ಳಲು ಮನುಷ್ಯನಿಗೆ ಸಾಧ್ಯವಾಗಿಲ್ಲ. ನಮ್ಮ ಜ್ಞಾನದ ಮಿತಿಯೇ ಇದಕ್ಕೆ ಕಾರಣ. ಆದ್ದರಿಂದ ನಾವು ಪ್ರಪಂಚದ ಸೃಷ್ಟಿಕರ್ತನನ್ನು ಹಾಗೂ ಅವನ ಕರ್ಮಗಳನ್ನು ತಿಳಿಯಬೇಕೆಂದು ಹಠ ಹಿಡಿಯುವುದರಲ್ಲಿ ಅರ್ಥವಿಲ್ಲ. ಅವನಿಗೆ ಸಂಬಂಧಿಸಿದ ಎಲ್ಲವೂ ಪಂಚೇಂದ್ರಿಯಗಳಿಗೂ ಅವುಗಳ ಪರಿಧಿಯೊಳಗೆ ವಿಧೇಯವಾದ ಮನುಷ್ಯ ಬುದ್ಧಿಶಕ್ತಿಗೂ, ಚಿಂತನೆಗೂ ಮೀರಿದ ಅಲೌಕಿಕ ಜ್ಞಾನಕ್ಕೆ ಒಳಪಟ್ಟಿದೆ. ಅಲ್ಲಾಹನು ತನ್ನ ಸಂದೇಶವಾಹಕರ ಮೂಲಕ ತಿಳಿಸಿದ ವಿಷಯದ ಹೊರತು ಯಾರಿಗೂ ಅದರ ಜ್ಞಾನವಿಲ್ಲ. ಆದ್ದರಿಂದ ದೇವವಿಧಿಯ ಕುರಿತು ದಿವ್ಯಬೋಧನೆಗಳಿಂದ ಲಭ್ಯವಾದ ವಿಷಯಗಳನ್ನು ಗ್ರಹಿಸಲು ನಮಗೆ ಸಾಧ್ಯವಿಲ್ಲ. ದೇವಗ್ರಂಥದಿಂದ ಲಭಿಸಿದ ಜ್ಞಾನದಂತೆ ದೇವವಿಧಿಯೂ,

ಜ್ಞಾನವೂ ಪ್ರಪಂಚ ಹಾಗೂ ಅದರಲ್ಲಿರುವ ಸರ್ವವನ್ನೂ ಆವರಿಸಿಕೊಂಡಿದೆ. ಮನುಷ್ಯನು ಅದಕ್ಕೆ ಅತೀತನಲ್ಲ. ಅದೇ ವೇಳೆ ಸ್ವಯಂ ತೀರ್ಮಾನ ತೆಗೆದುಕೊಳ್ಳಲು ಹಾಗೂ ಅದರಂತೆ ಜೀವಿಸಲು ಅವನಿಗೆ ಸ್ವಾತಂತ್ರ್ಯ ಹಾಗೂ ಅವಕಾಶ ನೀಡಲ್ಪಟ್ಟಿದೆ. ಅದು ಅಪರಿಮಿತವೋ ಅನಿಯಂತ್ರಿತವೋ ಅಲ್ಲ. ಸ್ವಾತಂತ್ರ್ಯ ಲಭಿಸಿದ ರಂಗಗಳಲ್ಲಿ ದೇವನನ್ನು ಅನುಸರಿಸಿ ಅವನು ನಿಶ್ಚಯಿಸಿದ ದಾರಿಯಲ್ಲಿ ಮುನ್ನಡೆಯಬೇಕೆಂದು ಅಲ್ಲಾಹನು ಆಜ್ಞಾಪಿಸಿದ್ದಾನೆ. ಹೀಗೆ ಈ ಭೂಮಿಯಲ್ಲಿ ಬಾಳಿದವರಿಗೆ ಯಶಸ್ಸು ಹಾಗು ಪರಲೋಕದಲ್ಲಿ ರಕ್ಷಣೆ ದೊರೆಯುವುದೆಂದು ವಾಗ್ದಾನ ಮಾಡಿದ್ದಾನೆ. ದೇವನನ್ನು ಧಿಕ್ಕರಿಸುವ ಆಯ್ಕೆ ಹಾಗೂ ಸ್ವಾತಂತ್ರ್ಯ ಮನುಷ್ಯನಿಗೆ ನೀಡಲಾಗಿದೆ. ಅಂತಹವರಿಗೆ ಪರಾಜಯವೂ ಪರಲೋಕದಲ್ಲಿ ಕಠಿಣ ಶಿಕ್ಷೆಯ ಕುರಿತೂ ಎಚ್ಚರಿಕೆ ನೀಡಲಾಗಿದೆ. ಪ್ರತಿಯೊಬ್ಬರ ಕರ್ತವ್ಯವು ಅವರವರಿಗೆ ನೀಡಲಾದ ಸಾಮರ್ಥ್ಯ ಹಾಗು ಸ್ವಾತಂತ್ರ್ಯವನ್ನು ಹೊಂದಿಕೊಂಡಿದೆ. ಅದನ್ನು ನಿರ್ವಹಿಸಿದ ಹಾಗೂ ಉಲ್ಲಂಘಿಸಿದ ಆಧಾರದಲ್ಲಿ ಮರಣಾನಂತರ ಪರಲೋಕದಲ್ಲಿ ರಕ್ಷೆ-ಶಿಕ್ಷೆಯು ದೊರೆಯುವುದು. ಆದ್ದರಿಂದ ಸ್ವರ್ಗ ಮತ್ತು ನರಕವನ್ನು ಪಡೆಯಬೇಕಾದವರು ನಾವೇ. ಸ್ವಂತ ತೀರ್ಮಾನಗಳಿಂದ ಹಾಗೂ ಕರ್ಮಗಳಿಂದ ಎರಡರಲ್ಲಿ ಒಂದರ ಹಕ್ಕುದಾರರಾಗುತ್ತೇವೆ. ಆದ್ದರಿಂದ ಯಾರೂ ಅಕ್ರಮಕ್ಕೆ ಒಳಗಾಗುವುದಿಲ್ಲ. ಅನ್ಯಾಯಕ್ಕೆ ಗುರಿಯಾಗುವುದೂ ಇಲ್ಲ.

## ವಿಧಿವಿಶ್ವಾಸ ಹಾಗೂ ಮನಶ್ಶಾಂತಿ

ಕರ್ಮಗಳನ್ನು ಮಾಡುವವರಿಗೆ ಅವರು ಬಯಸಿದ ಫಲವೇ ಸಿಗಬೇಕೆಂದಿಲ್ಲ. ಲಾಭವನ್ನು ಬಯಸಿ ವ್ಯಾಪಾರ ಮಾಡುವವರು ನಷ್ಟಕ್ಕೊಳಗಾಗುತ್ತಾರೆ. ವರಮಾನವನ್ನು ನಿರೀಕ್ಷಿಸಿ ಕೃಷಿ ಸ್ಥಳಗಳಲ್ಲಿ ದುಡಿಯುವವರು ಬೆಳೆನಷ್ಟವನ್ನು ಅನುಭವಿಸುತ್ತಾರೆ. ನಾವು ನಮ್ಮ ತಿಳುವಳಿಕೆ, ಅನುಭವ, ಸಾಮರ್ಥ್ಯದ ಪರಿಮಿತಿಯಿಂದ ವಿಷಯಗಳನ್ನು ಗ್ರಹಿಸಿಕೊಂಡು ಅದರಂತೆ ಕಾರ್ಯಮಗ್ನರಾಗುತ್ತೇವೆ. ಕೆಲವೊಮ್ಮೆ ನಮ್ಮ ಕನಸು, ಆಶೆ ಆಕಾಂಕ್ಷೆಗಳೆಲ್ಲವೂ ನಿಮಿಷಗಳಲ್ಲೇ ನೆಲಕ್ಕಪ್ಪಳಿಸಿರುತ್ತದೆ. ಅನಿರೀಕ್ಷಿತವಾದ ಅಪಘಾತಗಳನ್ನು ಎದುರಿಸಬೇಕಾಗುತ್ತದೆ. ಹಾಗಿದ್ದರೂ ಇಂತಹ ವಿಪತ್ತಿನ ಸಾಧ್ಯತೆಯು ಯಾರನ್ನೂ ನಿಷ್ಕ್ರಿಯಗೊಳಿಸುವುದಿಲ್ಲ. ನಿಷ್ಕ್ರಿಯಗೊಳಿಸಲೂ ಬಾರದು. ವಿಜಯ ಹಾಗೂ ಗುರಿಯನ್ನು ನಿರೀಕ್ಷಿಸಿ ಕರ್ಮಗಳನ್ನು ಮುಂದುವರಿಸುವುದು ಕಂಡುಬರುತ್ತದೆ. ನಮ್ಮ ಮೋಹಗಳು ಫಲ ನೀಡುವುದಿಲ್ಲವೆಂದು ಯಾರೂ ಏನನ್ನು ಆಗ್ರಹಿಸದಿರುವುದಿಲ್ಲ. ಮನುಷ್ಯ ಆಶಿಸಿದ್ದು ಸಿಗುವುದಿಲ್ಲ. ದೇವನು ವಿಧಿಸಿದ್ದು ಮಾತ್ರ ದೊರೆಯುವುದು.

''ಭೂಮಿ-ಆಕಾಶಗಳ ಭಂಡಾರಗಳ ಬೀಗದ ಕೈಗಳು ಅವನಲ್ಲೇ ಇದೆ. ತಾನಿಚ್ಛಿಸಿದವರಿಗೆ ಧಾರಾಳ ಜೀವನಾಧಾರ ನೀಡುತ್ತಾನೆ ಮತ್ತು ತಾನಿಚ್ಛಿಸಿದವರಿಗೆ ಪರಿಮಿತವಾಗಿ ಕೊಡುತ್ತಾನೆ. ಅವನಿಗೆ ಸಕಲ ವಿಷಯದ ಜ್ಞಾನವಿದೆ.'' (ಪವಿತ್ರ ಕುರ್‌ಆನ್ 42: 12)

'ನೀವು ಬಿತ್ತುವ ಬೀಜದ ಕುರಿತು ನೀವೆಂದಾದರೂ ವಿವೇಚಿಸಿದಿರಾ? ಅವುಗಳಿಂದ ಬೆಳೆಯನ್ನು ಬೆಳೆಸುವವರು ನೀವೋ ಅಥವಾ ಅದನ್ನು ಬೆಳೆಸುವವರು ನಾವೋ? ನಾವುಚ್ಛಿಸಿದರೆ ಆ

ಹೊಲಗಳನ್ನು ಹೊಟ್ಟನ್ನಾಗಿ ಮಾಡಿಬಿಡಬಲ್ಲೆವು. ಆಗ ನೀವು-ತರತರದ ಮಾತುಗಳನ್ನಾಡುತ್ತಲೇ ಇರುವಿರಿ. ಎಲ್ಲವೂ ನಮ್ಮ ಮೇಲೆ ತಿರುಗಿ ಬಿತ್ತು. ನಿಜವಾಗಿ ನಮ್ಮ ಭಾಗ್ಯವೇ ಹಾಳು.'

(ಪವಿತ್ರ ಕುರ್‌ಆನ್ 56: 63-67)

ನಮ್ಮ ಮರಣ ಎಲ್ಲಿ? ಹೇಗೆ? ಎಂದು ಯಾರಿಗೂ ತಿಳಿದಿಲ್ಲ. ಎಲ್ಲವೂ ಅನುಲ್ಲಂಘನೀಯ ವಾದ ದೇವವಿಧಿಗೆ ವಿಧೇಯವಾಗಿದೆ ಅದನ್ನು ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ನಮ್ಮ ಆಯುಷ್ಯದ ಹ್ರಸ್ವ-ದೀರ್ಘವೆಲ್ಲವೂ ಅಲ್ಲಾಹನ ತೀರ್ಮಾನಕ್ಕೆ ಅನುಗುಣವಾಗಿದೆ. 'ಯಾವ ಜೀವಿಯೂ ತಾನು ನಾಳೆ ಏನನ್ನು ಗಳಿಸುವೆನು ಎಂಬುದನ್ನು ತಿಳಿಯುದಿಲ್ಲ ಮತ್ತು ತನಗೆ ಯಾವ ಭೂಭಾದಲ್ಲಿ ಮರಣ ಬರುವುದೆಂಬ ಅರಿವು ಯಾರಿಗೂ ಇಲ್ಲ.' (ಪವಿತ್ರ ಕುರ್‌ಆನ್ 31: 34)

'ಯಾವ ಜೀವಿಯೂ ಅಲ್ಲಾಹನ ಅನುಮತಿ ಹೊಂದದೆ ಸಾಯಲಾರದು. ಮರಣದ ಸಮಯವಂತು ಬರೆದಿಡಲ್ಪಟ್ಟಿದೆ.' (ಪವಿತ್ರ ಕುರ್‌ಆನ್ 3:145) 'ವಾಸ್ತವದಲ್ಲಿ ಜೀವದಾನ ಮಾಡುವ ವನೂ ಮರಣ ಕೊಡುವವನೂ ಅಲ್ಲಾಹನು ಮಾತ್ರವಾಗಿದ್ದಾನೆ.' (ಪವಿತ್ರ ಕುರ್ ಆನ್ 3:156) 'ಮರಣವು ನೀವು ಎಂತಹ ಭದ್ರ ಕೋಟೆಯೊಳಗಿದ್ದರೂ ನಿಮಗೆ ಬಂದೇ ತೀರುವುದು.' (ಪವಿತ್ರ ಕುರ್‌ಆನ್ 4:78)

ಮನುಷ್ಯ ಜೀವನದ ಒಳಿತು-ಕೆಡುಕುಗಳು ಸನ್ಮಾರ್ಗ -ದುರ್ಮಾರ್ಗಗಳು ಜಯಾಪ ಜಯಗಳಂತೆ ಇಹಲೋಕದ ಕಾರ್ಯಗಳು ದೇವವಿಧಿಗೆ ವಿಧೇಯವಾಗಿದೆ. ಅದೇ ವೇಳೆ ದೇವ ವಿಧಿಯಿದ್ದರೆ ಆಹಾರ ಲಭಿಸುತ್ತದೆಂದು ಭಾವಿಸಿ ಯಾರೂ ದುಡಿಯದೆ ಸುಮ್ಮನಿರುವುದಿಲ್ಲ. ದೇವನ ವಿಧಿಯಂತೆ ಮರಣ ಸಂಭವಿಸುವುದರಿಂದ, ರೋಗ ಬಂದಾಗ ದೇವೇಚ್ಛೆಯಿದ್ದರೆ ಗುಣವಾಗುತ್ತದೆಂದು ಸಮಾಧಾನಪಟ್ಟು ಚಿಕಿತ್ಸೆ ನಡೆಸದವರಿರುವುದಿಲ್ಲ. ಪ್ರಜ್ಞಾವಂತರು ಜೀವನವನ್ನು ಸಂಪೂರ್ಣವಾಗಿ ವಿಧಿಗೆ ಬಿಟ್ಟು ಕೊಟ್ಟು ಆಲಸ್ಯವಾಗಿರುವುದಿಲ್ಲ. ಸೂಕ್ತ ಮಾರ್ಗಗಳನ್ನು ಆರಿಸಿಕೊಂಡು, ತನ್ನ ಜೀವನದ ಮುನ್ನಡೆಗೂ, ಗುರಿಯಡೆಗೂ ತಲುಪಲು ಗರಿಷ್ಠ ಶ್ರಮಿಸುವುದು ವಾಡಿಕೆಯಾಗಿದೆ. ಧರ್ಮವೂ ಅದನ್ನೇ ಕಲಿಸುತ್ತದೆ. ಮನುಷ್ಯನ ಕರ್ಮಗಳನ್ನು ಅವಲಂಬಿಸಿ ದೇವವಿಧಿ ಉಂಟಾಗುತ್ತದೆ.

'ಪ್ರತಿಯೊಬ್ಬರಿಗೂ ಅವರವರ ಕರ್ಮಗಳಿಗನುಸಾರವಾದ ಸ್ಥಾನವಿದೆ. ಅಲ್ಲಾಹನು ಅವರಿಗೆ ಅವರ ಕರ್ಮಗಳ ಸಂಪೂರ್ಣ ಪ್ರತಿಫಲ ನೀಡುವಂತಾಗಲಿಕ್ಕಾಗಿ. ಅವರ ಮೇಲೆ ಖಂಡಿತ ಅನ್ಯಾಯವಾಗದು.' (ಪವಿತ್ರ ಕುರ್‌ಆನ್46: 19)

'ಸತ್ಕರ್ಮವೆಸಗಿರಿ, ನೀವು ಮಾಡುವುದನ್ನೆಲ್ಲಾ ನಾನು ನೋಡುತ್ತಿದ್ದೇನೆ.' (ಪವಿತ್ರ ಕುರ್ ಆನ್ 34: 11)

ಪ್ರವಾದಿಯವರು ಹೇಳುತ್ತಾರೆ: ''ನೀವು ಪ್ರಭಾತ ಪ್ರಾರ್ಥನೆ ಪೂರ್ತಿಗೊಳಿಸಿದರೆ, ಆಹಾರಕ್ಕಾಗಿ ಶ್ರಮಪಡದೆ ನಿದ್ರಿಸಬಾರದು.'' (ತಬ್ರಾನಿ)

'ಅಂತಿಮ ದಿನ ಆಸನ್ನವಾದ ಸಂದರ್ಭದಲ್ಲೂ ನಿಮ್ಮಲ್ಲಿ ಯಾರಾದರೂ ಕೈಯಲ್ಲಿ ಖರ್ಜೂರದ ಗಿಡವಿದ್ದರೆ ಅವನು ಅದನ್ನು ನೆಡಲಿ. ಅವನಿಗೆ ಅದರ ಪ್ರತಿಫಲ ದೊರೆಯುವುದು.'

ಒಮ್ಮೆ ಪ್ರವಾದಿ(ಸ) ರು ಇಬ್ಬರ ನಡುವಿನ ಪ್ರಕರಣದಲ್ಲಿ ತೀರ್ಪು ನೀಡಿದರು. ಅಲ್ಲಿಂದ ಮರಳುವಾಗ ಕೇಸ್‌ನಲ್ಲಿ ಪರಾಜಿತನಾದವವನು ಹೇಳಿದನು: 'ನನಗೆ ಅಲ್ಲಾಹನು ಸಾಕು. ಅವನೇ ಅತ್ಯಂತ ಉತ್ತಮ ಸಂರಕ್ಷಕ' ಇದನ್ನು ಕೇಳಿದ ಪ್ರವಾದಿಯವರು ಆತನೊಡನೆ ಹೇಳಿದರು: ದೌರ್ಬಲ್ಯವನ್ನು ಅಲ್ಲಾಹನು ದ್ವೇಷಿಸುತ್ತಾನೆ. ಆದ್ದರಿಂದ ನೀವು ಸ್ವಂತಿಕೆ ಹಾಗು ಸ್ಪೂರ್ತಿಯನ್ನು ಬೆಳೆಸಿಕೊಳ್ಳಿ. ನಂತರವೂ ಪರಾಜಿತರಾದರೆ ಹೀಗೆ ಹೇಳಬಹುದು: 'ನನಗೆ ಅಲ್ಲಾಹನೇ ಸಾಕು ಅವನೇ ಅತ್ಯುತ್ತಮ ಸಂರಕ್ಷಕ.'

ಮನುಷ್ಯನು ತನಗಿರುವ ಅವಕಾಶಗಳನ್ನೆಲ್ಲಾ ಬಾಚಿಕೊಂಡು ಪ್ರತಿಕೂಲ ಪರಿಸ್ಥಿತಿಯೊಂದಿಗೆ ಹೋರಾಡಲು ಹೊಣೆಗಾರನಾಗಿದ್ದಾನೆ. ವಿಜಯಗಳಿಸಲು ಅದು ಅನಿವಾರ್ಯವೆಂದು ಧರ್ಮವು ಕಲಿಸುತ್ತದೆ. ದೃಢನಿಶ್ಚಯ, ಸ್ಥಿರಚಿತ್ತತೆ, ತ್ಯಾಗಮನೋಭಾವ, ಬತ್ತದ ಉತ್ಸಾಹ ಅವುಗಳನ್ನು ಕರಗತ ಮಾಡಿಕೊಳ್ಳಬೇಕೆಂದು ಅದು ಹೇಳುತ್ತದೆ. ದುಡಿಯದೆ, ಸೋಮಾರಿಯಾಗಿ ಸೋಲು,ದೌರ್ಬಲ್ಯ, ತಪ್ಪುಗಳೆಲ್ಲವನ್ನೂ ವಿಧಿಯ ಮೇಲೆ ಆರೋಪಿಸುವುದು ಬಹಳ ದೊಡ್ಡ ಅಪರಾಧವಾಗಿದೆ, ಉದಾಸೀನ ಹಾಗು ಅನಾಸ್ಥೆಯಿಂದ ಉಂಟಾದ ಅನಿವಾರ್ಯಫಲಗಳಿಗೆ ದೇವವಿಧಿಯ ಕವಚವನ್ನು ತೊಡಿಸುವುದು ಖಂಡನೀಯವಾಗಿದೆ. ದುಡಿಯದೆ ಫಲವನ್ನು ನಿರೀಕ್ಷಿಸುವುದೂ, ಕಷ್ಟಪಡದೆ ಸುಖವನ್ನು ಆಶಿಸುವುದೂ ಮೂರ್ಖತನವಾಗಿದೆ. ಅಲ್ಲಾಹನು ಕರ್ಮಗಳಿಗೆ ಮಾತ್ರ ಪ್ರತಿಫಲ ನೀಡುತ್ತಾನೆ. ನಿಷ್ಕ್ರಿಯತೆಯು ನಾಶಕ್ಕೆ ಹೇತುವಾಗಿದೆ.

ಒಬ್ಬರು ಪ್ರವಾದಿಯವರೊಡನೆ ಕೇಳುತ್ತಾರೆ: 'ಪ್ರವಾದಿಗಳೇ, ನಾನು ಒಂಟೆಯನ್ನು ಕಟ್ಟಿಹಾಕಿದ ಬಳಿಕ ಅಲ್ಲಾಹನಲ್ಲಿ ಭರವಸೆಯಿರಿಸಬೇಕೇ? ಅಥವಾ ಹಗ್ಗದಿಂದ ಬಿಚ್ಚಿ ಭರವಸೆಯಿರಿಸಬೇಕೇ?' ಪ್ರವಾದಿಗಳು ಹೇಳಿದರು:'ಅದನ್ನು ಕಟ್ಟಿ ಹಾಕಿ, ಬಳಿಕ ಅಲ್ಲಾಹನಲ್ಲಿ ಭರವಸೆಯಿರಿಸಿ.'

ಆಹಾರ ಸೇವಿಸದೆ ಹಸಿವು ತಣಿಯುವುದಿಲ್ಲ, ನೀರು ಕುಡಿಯದೆ ದಾಹ ಶಮನವಾಗುವುದಿಲ್ಲ, ಬೀಜ ಬಿತ್ತದೆ ಸಸಿ ಮೊಳಕೆಯೊಡೆಯುವುದಿಲ್ಲ, ದುಡಿಯದೆ ಸಂಪಾದನೆ ಸಾಧ್ಯವಿಲ್ಲ, ಮಹಾನ್ ಯಶಸ್ಸಿಗೂ ಉತ್ತಮ ಕರ್ಮಗಳು ಅನಿವಾರ್ಯ. ಇದು ಬದಲಾವಣೆಯಿಲ್ಲದ ದೇವ ನಿಯಮವಾಗಿದೆ. ಇದನ್ನು ತಿಳಿದಿರುವ ನೈಜ ವಿಶ್ವಾಸಿ ಸದಾ ಕರ್ಮನಿರತನಾಗಿರುತ್ತಾನೆ. ಆದ್ದರಿಂದ ವಿಧಿವಿಶ್ವಾಸವು ಆಲಸಿಗಳನ್ನಾಗಿಸುವುದಿಲ್ಲ, ಉತ್ಸಾಹ ಪುಟಿದೇಳುವಂತೆ ಮಾಡುತ್ತದೆ.

ದೇವವಿಧಿ ಹಾಗೂ ದಿವ್ಯಜ್ಞಾನ ಪ್ರತ್ಯಕ್ಷವೂ ಬಹಿರಂಗವೂ ಆಗಿಲ್ಲ, ಆದ್ದರಿಂದ ತನಗೆ ಅಜ್ಞಾತವಾದ ಒಂದು ವಿಷಯದ ಕುರಿತು ಆಲೋಚಿಸಿ ಅಸ್ವಸ್ಥನಾಗುವುದರಲ್ಲಿ ಅರ್ಥವಿಲ್ಲ, ಗಡಿ

ರೇಖೆಗಳಿಲ್ಲದ ದೇವಕಾರುಣ್ಯವನ್ನು ನಿರೀಕ್ಷಿಸಿ ಕರ್ಮನಿರತನಾಗಬೇಕಾಗಿದೆ. ನಿರಾಶೆಯು ವಿಶ್ವಾಸಿಗೆ ಅಪರಿಚಿತವಾಗಿದೆ. 'ನೀವು ದೇವಕಾರುಣ್ಯದ ಬಗ್ಗೆ ನಿರಾಶರಾಗದಿರಿ.' (ಪವಿತ್ರ ಕುರ್‌ಆನ್ 39: 53)

ಶ್ರಮವಹಿಸುವ ದೃಢನಿಶ್ಚಯದ ಬಳಿಕವೇ ನೀನು ಅಲ್ಲಾಹನಲ್ಲಿ ಭರವಸೆಯಿಡು ಎಂದು ಧರ್ಮವು ಕಲಿಸುತ್ತದೆ. **'ನೀವು ಯಾವುದಾದರೊಂದು ಅಭಿಪ್ರಾಯದಲ್ಲಿ ದೃಢನಿರ್ಧಾರ ತಾಳಿದರೆ ಅಲ್ಲಾಹನ ಮೇಲೆ ಭರವಸೆಯಿಡಿರಿ.' (ಪವಿತ್ರ ಕುರ್‌ಆನ್ 3: 159)**

ಉತ್ಸಾಹದ ಚಿಲುಮೆಯಂತೆ ಅತ್ತಿತ್ತ ಓಡಾಡಿಕೊಂಡಿದ್ದ ಯುವಕ ಆಕಸ್ಮಿಕವಾಗಿ ವಾತರೋಗ ಪೀಡಿತನಾಗುತ್ತಾನೆ. ಹಲವು ವಿಧದ ಚಿಕಿತ್ಸೆ ನಡೆಸಿದರೂ ಫಲಕಾರಿಯಾಗಲಿಲ್ಲ. ಕೊನೆಗೆ ಅಲೋಪತಿ, ಆಯುರ್ವೇದ, ಹೋಮಿಯೊಪತಿಯೂ ಸೇರಿದಂತೆ ವೈದ್ಯಕೀಯ ರಂಗವು ರೋಗ ಗುಣವಾಗುವುದಿಲ್ಲವೆಂದು ಕೈಚೆಲ್ಲುತ್ತದೆ. ಆದ್ದರಿಂದ ಇನ್ನೊಂದು ಮಂಚದಿಂದಿಳಿದು ನಡೆಯಲಾರೆನೆಂದು ಆತನಿಗೆ ತಿಳಿಯುತ್ತದೆ. ಅಂತಾದರೆ ಆತ ದುಃಖಿತನಾಗುವುದು ಸಹಜ. ಇಂತಹ ಸಂದರ್ಭಗಳಲ್ಲಿ ಆತನಿಗೆ ಸಾಂತ್ವನ ನೀಡಲು ಲೋಕದ ಯಾವ ಶಕ್ತಿಗೂ ಸಾಧ್ಯವಿಲ್ಲ. ಇಪ್ಪತ್ತನೇ ಶತಮಾನದ ವೀರ ಕ್ರಾಂತಿಕಾರಿಯಾದ ವಿ.ಎ.ಲೆನಿನ್ ವಾತರೋಗ ಪೀಡಿತನಾದಾಗ ಅತ್ಯಂತ ನಿರಾಶನಾಗಿ ತನ್ನ ಆಪ್ತಮಿತ್ರ ಸ್ಟಾಲಿನ್‌ರೊಡನೆ ಸಯನೈಡ್ ಕೇಳಲು ಅದೇ ಕಾರಣ. ಆದರೆ ದೇವನವಿಧಿಯಲ್ಲಿ ವಿಶ್ವಾಸವಿರಿಸುವವರು ಸರ್ವವನ್ನೂ ಸೃಷ್ಟಿಕರ್ತನಿಗೆ ಅರ್ಪಿಸಿ ಸಮಾಧಾನ ಪಟ್ಟುಕೊಳ್ಳುತ್ತಾರೆ. ಅವರು ಮಾನಸಿಕ ಸಂತೃಪ್ತಿಯೊಂದಿಗೆ ಹೇಳಿಕೊಳ್ಳುತ್ತಾರೆ, 'ತನಗೆ ಕೈ, ಕಾಲು, ಕಣ್ಣು, ಕಿವಿ, ನಾಲಗೆ, ಮೂಗು, ಆಯುಷ್ಯ, ಆರೋಗ್ಯ ಜೀವನವನ್ನು ನೀಡಿದವನು ಅಲ್ಲಾಹನಾಗಿದ್ದಾನೆ. ಅವನು ಅನುಗ್ರಹಿಸಿದ ಆರೋಗ್ಯವನ್ನು ತಾತ್ಕಾಲಿಕವಾಗಿ ಹಿಂಪಡೆದಿದ್ದಾನೆ. ಇದೊಂದು ಪರೀಕ್ಷೆಯಾಗಿದೆ, ದೇವವಿಧಿಯೂ ಹೌದು. ನನ್ನಲ್ಲಿ ವ್ಯತಿಚಲನೆ ಉಂಟಾದರೆ ಪರಾಜಯ ಹೊಂದುತ್ತೇನೆ. ತಾಳ್ಮೆವಹಿಸಿದರೆ ಯಶಸ್ಸು ದೊರೆಯುವುದು ಯಾವ ರೋಗವೂ ಇಲ್ಲದ ಸುಂದರ ಸ್ವರ್ಗಜೀವನ ಪ್ರತಿಫಲವಾಗಿ ದೊರೆಯುವುದು.'

ನೋಡುಗರನ್ನು ಆಕರ್ಷಿಸುತ್ತಿದ್ದ ಆ ತಂದೆ ತಾಯಿಯ ಏಕೈಕ ಪುತ್ರನಾಗಿದ್ದ ನಾಲ್ಕು ವರ್ಷದ ಬಾಲಕ ಮರಣಹೊಂದುತ್ತಾನೆ. ಇಂತಹ ವ್ಯಕ್ತಿಗಳು ಅನುಭವಿಸುವ ದುಃಖ ಹಾಗೂ ನೋವು ವಿವರಿಸಲಾಸಾಧ್ಯ. ಇಂದಿನ ಕುಟುಂಬ ವ್ಯವಸ್ಥೆಯು ವಶಾಹತುಶಾಹಿ ವ್ಯವಸ್ಥೆಯ ಸೃಷ್ಟಿಯೂ, ಖಾಸಗಿ ಒಡೆತನದ ಅವಕಾಶವಿಲ್ಲದ ಮಹಿಳಾ ಸ್ವಾತಂತ್ರ್ಯದ ಕಮ್ಯೂನಿಸ್ಟ್ ಕಾಲದಲ್ಲಿ ಮಕ್ಕಳು ಹೆತ್ತವರನ್ನು ಗುರುತಿಸುತ್ತಿರಲಿಲ್ಲವೆಂದು ವಾದಿಸಿದ್ದ ಕಾರ್ಲ್ ಮಾರ್ಕ್ಸ್ ಕೂಡಾ ತನ್ನ ಮಗನ ವಿಯೋಗದಿಂದ ಅತ್ಯಂತ ದುಃಖಿತರಾಗಿದ್ದರು. 1855ರಲ್ಲಿ ಅವರ ಪ್ರೀತಿಯ ಪುತ್ರ ಎಡ್ಗಾರ್‌ಗೆ ಮಾರಕ ರೋಗ ಬಾಧಿಸಿತು. ಎಂಟು ವರ್ಷದ ಸಮರ್ಥನಾಗಿದ್ದ ಆ ಬಾಲಕನನ್ನು 'ಮುಶ್' ಎಂದು ಪ್ರೀತಿಯಿಂದ ಕರೆಯಲಾಗುತ್ತಿತ್ತು. ಏಕ ಪುತ್ರನ ರೋಗಶಯ್ಯೆಯಲ್ಲಿ ದೀರ್ಘ ರಾತ್ರಿಗಳನ್ನು ನಿದ್ರಿಸದೆ ಕಳೆದ ಮಾರ್ಕ್ಸ್ ಆ ಸಂದರ್ಭದಲ್ಲಿ ಏಂಗಲ್ಸ್‌ಗೆ ಬರೆದರು. 'ಹೃದಯ ರೋದಿಸುತ್ತಿದೆ. ತಲೆ ಹೊಗೆಯಾಡುತ್ತಿದೆ , ನಂತರ 'ಮುಶ್'

ಮರಣ ಹೊಂದಿದಾಗ ಆತ ಬರೆದರು: 'ಪಾಪ, ಮುಶ್ ತೀರಿಕೊಂಡ ... ನನ್ನ ದುಃಖ ಎಷ್ಟೆಂದು ಹೇಳಲಸಾಧ್ಯವಾಗಿದೆ. ಸಾಕಷ್ಟು ಕಷ್ಟನಷ್ಟಗಳನ್ನು ಅನುಭವಿಸಿದ ವ್ಯಕ್ತಿ ನಾನು. ಆದರೆ ನಿಜವಾದ ದುಃಖವೆಂದರೇನೆಂದು ನನಗೀಗ ಅರ್ಥವಾಯಿತು.'

ಇಂತಹ ಸಂದರ್ಭಗಳಲ್ಲೂ ವಿಧಿಯ ಮೇಲೆ ವಿಶ್ವಾಸವುಳ್ಳವರು ಸಮಾಧಾನ ಪಡುತ್ತಾರೆ. ಅವರ ಮನಸ್ಸು ಮಂತ್ರಿಸುತ್ತದೆ, ''ನನಗೆ ಮಗುವನ್ನು ಕರುಣಾಮಯಿಯಾದ ದೇವನು ಅನುಗ್ರಹಿಸಿದ್ದಾನೆ. ತನ್ನ ಪ್ರೀತಿಯಪುತ್ರನನ್ನು ಅವನೇ ಕರೆಸಿಕೊಂಡಿದ್ದಾನೆ. ಎಲ್ಲವೂ ಅವನ ಉಲ್ಲಂಘಿಸಲಾಗದ ವಿಧಿಯಾಗಿದೆ. ನನಗಿಂತಲೂ ಪ್ರೀತಿ, ಕರುಣೆ, ವಾತ್ಸಲ್ಯವಿರುವ ಸೃಷ್ಟಿಕರ್ತನಿಗೆ ನನ್ನ ಮಗನನ್ನು ಮರಳಿಸಿದ್ದೇನೆ. ಆದ್ದರಿಂದ ನಾನು ತಾಳ್ಮೆಗೆಡುವುದು ಅರ್ಥಶೂನ್ಯವಾಗಿದೆ. ಸಹನೆ ಅವಲಂಬಿಸಿದರೆ ನನಗೆ ಸ್ವರ್ಗ ಲಭಿಸುತ್ತದೆ. ಶಾಶ್ವತವಾದ ಸ್ವರ್ಗದ ದ್ವಾರದಲ್ಲಿ ನನ್ನ ಪ್ರಿಯಪುತ್ರ ಮುಗಳ್ನಗೆಯೊಂದಿಗೆ ನನ್ನನ್ನು ಸ್ವಾಗತಿಸಲು ಕಾದು ನಿಂತಿದ್ದಾನೆ.''

ವಿಧಿಯಲ್ಲಿ ವಿಶ್ವಾಸವಿಲ್ಲದವರು ಆಪತ್ತುಗಳೆರಗಿದಾಗ ಅಸಹಾಯಕರಾಗಿ ಸಹಿಸಲಾಗದ ವ್ಯಥೆ ಅನುಭವಿಸುತ್ತಾರೆ. ಅವರು ತಮ್ಮ ದೂರು ಹಾಗೂ ನೋವನ್ನು ಹೇಳಿಕೊಳ್ಳುತ್ತಿರುತ್ತಾರೆ. ಅವರ ದುಗುಡ, ಆತಂಕ ಅರಕ್ಷಿತ ಭಾವನೆಯನ್ನು ಹೋಗಲಾಡಿಸಲು ಯಾವುದೇ ಸಾಂತ್ವನದ ಮಾತುಗಳಿಗೆ ಸಾಧ್ಯವಾಗುವುದಿಲ್ಲ. ಆದರೆ ಅಲ್ಲಾಹನ ಅನುಲ್ಲಂಘನೀಯವಾದ ವಿಧಿಯಲ್ಲಿ ವಿಶ್ವಾಸವಿರಿಸುವವರು ಸಹನೆಯನ್ನು ಪಡೆಯಲು ಸಾಧ್ಯವಾಗುತ್ತದೆ. ಸಹನೆ ವಹಿಸಿದರೂ, ಇಲ್ಲದಿದ್ದರೂ ಲೌಕಿಕ ಫಲ ಒಂದೇ ಎಂಬ ಅರಿವು ಅವರಿಗಿರುತ್ತದೆ. ಮಾತ್ರವಲ್ಲ ಅಸಹನೆಯು ಅಸ್ವಸ್ಥತೆಯನ್ನು ಹೆಚ್ಚಿಸುತ್ತದೆ. ಸಹನೆ ಹಾಗೂ ಕ್ಷಮೆ ಮಾನಸಿಕ ನೆಮ್ಮದಿಯನ್ನು ನೀಡುತ್ತದೆ. ದೇವ ಸನ್ನಿಧಿಯಲ್ಲಿ ಸಹನೆ ವಹಿಸಿದವರಿಗೆ ಮಹತ್ತರವಾದ ಪ್ರತಿಫಲವೂ, ಸಹನೆ ವಹಿಸದಿರುವುದು ಅಪರಾಧವು ಆಗಿದೆ. ಐಹಿಕ ಜೀವನವು ಸಂಪೂರ್ಣವಾಗಿ ಪರೀಕ್ಷೆಯಾಗಿದೆ. ಅನುಗ್ರಹಗಳನ್ನು ನೀಡಿಯೂ, ನಿಷೇಧಿಸಿಯೂ ದೇವನು ಪರೀಕ್ಷಿಸುತ್ತಾನೆ. ಪ್ರತಿಫಲವು ಮರಣಾನಂತರ ಪರಲೋಕದಲ್ಲಿ ಲಭಿಸುತ್ತದೆ. ಅನುಗ್ರಹಗಳು ತುಂಬಿದ ಕಾಲದಲ್ಲಿ ಆಹ್ಲಾದದಲ್ಲಿ ಮಿತಿಯನ್ನು ಪಾಲಿಸಬೇಕೆಂದು ಧರ್ಮವು ಕಲಿಸುತ್ತದೆ. ಅನುಗ್ರಹಗಳು ಕಸಿಯಲ್ಪಡುವಾಗ ಕ್ಷಮೆ ಹಾಗೂ ಸಹನೆಯನ್ನು ಪಾಲಿಸಬೇಕೆಂದು, ಅಂತಹವರಿಗೆ ವಿಜಯವೆಂದೂ ಹೇಳಲಾಗಿದೆ.

'ನಾವು ನಿಮ್ಮನ್ನು ಭಯಾಶಂಕೆ, ಹಸಿವು, ಧನಹಾನಿ, ಜೀವಹಾನಿ ಮತ್ತು ಉತ್ಪನ್ನಗಳ ನಾಶಗೊಳಪಡಿಸಿ ಅವಶ್ಯವಾಗಿಯೂ ಪರೀಕ್ಷಿಸುವೆವು. ಇಂತಹ ಸನ್ನಿವೇಶಗಳಲ್ಲಿ ತಾಳ್ಮೆ ವಹಿಸಿದವರಿಗೆ ಸುವಾರ್ತೆ ನೀಡಿರಿ. ಅಂತಹವರ ಮೇಲೆ ವಿಪತ್ತೇನಾದರೂ ಎರಗಿದಾದಗ ಅವರು ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನನಡೆಗೆ ನಮಗೆ ಮರಳಲಿಕ್ಕಿದೆ ಎನ್ನುವರು, ಅವರ ಮೇಲೆ ಅವರ ಪ್ರಭುವಿನ ಕಡೆಯಿಂದ ಮಹಾ ಅನುಗ್ರಹ ಗಳಿರುವುವು ಆತನ ಕಾರುಣ್ಯವು ಅವರನ್ನು ಆಚ್ಛಾದಿಸುವುದು ಮತ್ತು ಇಂತಹವರೇ ಸನ್ಮಾರ್ಗ ಹೊಂದಿದವ ರಾಗಿರುತ್ತಾರೆ.' (ಪವಿತ್ರ ಕುರ್‌ಆನ್2: **155-157**)

ಇದನ್ನು ಅಂಗೀಕರಿಸುವ ವಿಶ್ವಾಸಿಗಳು ಸ್ವಸ್ತರೂ, ನಿರ್ಭಯರೂ ಆಗಿರುತ್ತಾರೆ. ತಮ್ಮ ಧಿಯಲ್ಲಿ ಸಂಪೂರ್ಣ ತೃಪ್ತರಾಗಿರುತ್ತಾರೆ. ಅದು ತಮಗೆ ಅನುಕೂಲವೋ ಪ್ರತಿಕೂಲವೋ ಂಬುದು ಅವರಿಗೆ ಅಪ್ರಸಕ್ತವಾಗಿದೆ. ನೋವು, ದುಃಖ, ಭಯ, ನಿಟ್ಟುಸಿರು, ವಿಧಿಯಲ್ಲಿ ಸ್ವಲ್ಪವೂ ಬದಲಾವಣೆಯನ್ನು ತರುವುದಿಲ್ಲ, ಅವರು ದೌರ್ಭಾಗ್ಯ ಹಾಗೂ ಸೌಭಾಗ್ಯದ ಹೆಸರಿನಲ್ಲಿ ದುಃಖಿಸಿ ಕಾಲಕಳೆಯದೆ, ದಿವ್ಯ ಕಾರುಣ್ಯದಲ್ಲಿ ನಿರೀಕ್ಷೆಯನ್ನಿರಿಸಿ ಸ್ವಸ್ಥತೆಯಿಂದ ಹೊಸ ಹುಮ್ಮಸ್ಸಿನಿಂದ ಕಾರ್ಯನಿರತರಾಗುತ್ತಾರೆ. ಅವರು ಕಳೆದುಹೋದ ನಷ್ಟವನ್ನು ನೆನಪಿಸಿ ನಿಟ್ಟುಸಿರು ಬಿಡುವುದಿಲ್ಲ, ಅವುಗಳನ್ನು ವರ್ತಮಾನ ಕ್ರಿಯೆಗಳಲ್ಲೂ, ಭಾವಿ ಕರ್ಮಗಳಲ್ಲೂ ಕಂಡುಕೊಳ್ಳುತ್ತಾರೆ. ಹೀಗೆ ನೈಜ ವಿಧಿವಿಶ್ವಾಸವು ಕರ್ಮಕ್ಕೆ ಪ್ರೇರಕವೂ, ಮನಶ್ಶಾಂತಿಗೆ ಕಾರಣವೂ ಆಗಿ ಪರಿವರ್ತನೆಯಾಗುತ್ತದೆ. ವಿರಲ ವಿಧಿವಿಶ್ವಾಸವು ಸೋಮಾರಿತನಕ್ಕೂ , ಕರ್ಮಶಾಹಿತ್ಯಕ್ಕೂ ಹಾದಿತೋರಿಸುತ್ತದೆ. ಇಸ್ಲಾಮ್ ಅದನ್ನು ಖಂಡಿತ ಒಪ್ಪಿಕೊಳ್ಳುವುದಿಲ್ಲ.

## 26 ಕುರ್‌ಆನ್ ವಚನಗಳಲ್ಲಿ ವಿರೋಧಾಭಾಸವೇ?

ಎಲ್ಲಾ ಕಾರ್ಯಗಳು ದೇವವಿಧಿಗೆ ಅನುಗುಣವಾಗಿ ನಡೆಯುತ್ತದೆಂದು ಹೇಳುವ ಕುರ್‌ಆನ್ ವಚನಗಳು ಮತ್ತು ಮನುಷ್ಯನ ಕರ್ಮಗಳಿಗೆ ಅನುಗುಣವಾದ ಫಲ ಉಂಟಾಗುವುದೆಂದು ಸ್ಪಷ್ಟಪಡಿಸುವ ಹಲವಾರು ವಚನಗಳನ್ನು ಇಲ್ಲಿ ಉಲ್ಲೇಖಿಸಲಾಯಿತು. ವಿಧಿವಿಶ್ವಾಸದ ಕುರಿತು ಕುರ್‌ಆನ್ ವಚನದಲ್ಲಿರುವ ವಿರೋಧಾಭಾಸವನ್ನು ಇದು ಸ್ಪಷ್ಟಪಡಿಸುತ್ತದೆಯಲ್ಲವೇ?

ವಿಧಿವಿಶ್ವಾಸಕ್ಕೆ ಸಂಬಂಧಿಸಿದ ಕುರ್‌ಆನ್ ವಚನಗಳಲ್ಲಿ ಸ್ವಲ್ಪವೂ ವಿರೋಧಾಭಾಸವಿಲ್ಲ, ಮಾತ್ರವಲ್ಲ ಅವುಗಳು ಪರಸ್ಪರ ವ್ಯಾಖ್ಯಾನಿಸಲು ವಿವರಿಸಲು ಪೂರಕವಾಗಿದೆ. ಒಂದು ಉದಾಹರಣೆಯ ಮೂಲಕ ಇದು ಸ್ಪಷ್ಟಪಡಿಸಬಹುದು.

ಸುಂದರವಾಗಿ ನಿರ್ಮಿಸಿದ ಉನ್ನತ ದರ್ಜೆಯ, ಶಿಸ್ತುಬದ್ಧವಾಗಿ ನಡೆಸಲ್ಪಡುತ್ತಿರುವ ಒಂದು ಮಾದರಿ ಶಾಲೆ, ಅಲ್ಲಿ ಸಮರ್ಥನಾದ ಮುಖ್ಯೋಪಾಧ್ಯಾಯ, ನಿಸ್ವಾರ್ಥ ಶಿಕ್ಷಕ ವೃಂದ, ಯೋಗ್ಯರಾದ ವಿದ್ಯಾರ್ಥಿಗಳು, ಮಕ್ಕಳ ಕಲಿಕೆಯನ್ನು ಆಸಕ್ತಿಯಿಂದ ಗಮನಿಸುವ ಪೋಷಕ ವೃಂದ ಹೀಗೆ ಎಲ್ಲರೂ ಶಾಲೆಯ ಉನ್ನತಿಗಾಗಿ ನಿರ್ಣಾಯಕ ಪಾತ್ರ ವಹಿಸುತ್ತಾರೆ. ಈ ಸಂಸ್ಥೆಯ ಏಳಿಗೆಯ ಹಿಂದೆ ಹಲವಾರು ಕಾರಣಗಳು, ಹಲವರ ಪರಿಶ್ರಮವಿದೆ ಎಂದರ್ಥ. ಇಂತಹ ಸಂಧರ್ಭದಲ್ಲಿ ಶಾಲೆಯು ಮಾದರಿಯೋಗ್ಯವಾಗಲು ಮುಖ್ಯೋಪಾಧ್ಯಾಯರೇ ಕಾರಣವೆನ್ನಬಹುದು. ಶಿಕ್ಷಕರೆಂದೂ, ವಿದ್ಯಾರ್ಥಿಗಳೆಂದೂ, ಪೋಷಕರೆಂದೂ ಹೇಳಬಹುದು. ಇದರಲ್ಲಿ ಯಾವುದಾದರೊಂದನ್ನು ಹೇಳಿದರೂ ತಪ್ಪಾಗಲಾರದು. ಒಮ್ಮೆ ಒಂದು ಹೆಸರನ್ನು ಇನ್ನೊಮ್ಮೆ ಇನ್ನೊಂದನ್ನು ಹೇಳಿದರೂ ತಪ್ಪಾಗಲಾರದು. ಅದು ಪರಸ್ಪರ ವಿರುದ್ಧವಾಗುವುದಿಲ್ಲ . ಅಗತ್ಯಕ್ಕನುಗುಣವಾಗಿ ಒಂದೊಂದು ಕಾರಣವನ್ನು ಎತ್ತಿ ಹೇಳಿದರೆ ಸಂದರ್ಭಕ್ಕನುಗುಣವಾದ ನೈಜ ಸಂಗತಿ ಮಾತ್ರ ಆಗುತ್ತದೆ. ಆದರೆ ಇವುಗಳಲ್ಲಿ ಯಾರಾದರೊಬ್ಬರೇ ಇದಕ್ಕೆ ಕಾರಣವೆಂದು ವಿಶ್ವಾಸವಿರಿಸುವುದಾದರೆ ಅದನ್ನು ವಿರೋಧಿಸಬೇಕಾಗುತ್ತದೆ.

ಮನುಷ್ಯನ ಕರ್ಮಗಳ ಸ್ಥಿತಿಯೂ ಅಷ್ಟೆ. ಒಬ್ಬ ವ್ಯಕ್ತಿ ದಾರಿಯಲ್ಲಿ ನಡೆದುಕೊಂಡು ಹೋಗುವಾಗ ವೃದ್ಧನೋರ್ವ ಬಿದ್ದಿರುವುದು ಕಂಡುಬರುತ್ತದೆ. ಆತನಿಗೆ ಬೇಕಾದರೆ ವೃದ್ಧನನ್ನು ಕಾಣದಂತೆ ನಟಿಸಿ ಮುಂದುವರಿಯಬಹುದು. ಆದರೆ ಹಾಗೆ ಮಾಡದೆ, ಆತ ವೃದ್ಧನನ್ನು ಎಬ್ಬಿಸಿ, ಆಸ್ಪತ್ರೆಗೆ ಕರೆದೊಯ್ದು ಚಿಕಿತ್ಸೆ ಕೊಡಿಸುತ್ತಾನೆ. ಅದನ್ನು ಆತ ಬೇರೆ ಬೇರೆ ಉದ್ದೇಶಗಳಿಗೆ ನಿರ್ವಹಿಸಬಹುದು. ವೃದ್ಧನ ಹಾಗೂ ಆತನ ಸಂಬಂಧಿಕರ ಕೃತಜ್ಞತೆ, ಪ್ರತ್ಯುಪಕಾರ, ಪ್ರತಿಫಲವನ್ನು ಬಯಸಬಹುದು. ಅದ್ಯಾವುದನ್ನೂ ಬಯಸದೆ ವೃದ್ಧನ ಮೇಲಿನ ಪ್ರೀತಿ–ಕಾರುಣ್ಯ–ವಾತ್ಸಲ್ಯ

ಹಿತಕಾಂಕ್ಷೆಯ ಭಾವನೆಯಿಂದಲೂ ಮಾಡಬಹುದು. ಅಂದರೆ ಈ ಘಟನೆಯಲ್ಲಿ ಮನುಷ್ಯನು ತೆಗೆದುಕೊಳ್ಳುವ ತೀರ್ಮಾನ, ಆತನ ಉದ್ದೇಶ ಹಾಗೂ ಆತನ ಪ್ರಯತ್ನಗಳ ಪಾಲು ಇದೆ. ಆದ್ದರಿಂದ ವೃದ್ಧನನ್ನು ಆಸ್ಪತ್ರೆಗೆ ತಲುಪಿಸಿ ಚಿಕಿತ್ಸೆ ಕೊಡಿಸಿದ್ದು ಆ ಮನುಷ್ಯನೆಂದು ಹೇಳುವು ದರಲ್ಲಿ ತಪ್ಪಿಲ್ಲ. ಅದೇ ವೇಳೆ ವೃದ್ಧನನ್ನು ಎಬ್ಬಿಸಲು ಉಪಯೋಗಿಸಿದ ಕೈಗಳು, ದೇಹ, ಆರೋಗ್ಯ ಹಾಗೂ ಸಾಮರ್ಥ್ಯವನ್ನು ನೀಡಿದವನು ದೇವನಾಗಿದ್ದಾನೆ. ವೃದ್ಧನಲ್ಲಿ ಅನುಕಂಪ ತೋರಿ, ಚಿಕಿತ್ಸೆ ಮಾಡುವ ತೀರ್ಮಾನ ತಗೆದುಕೊಂಡ ಮನಸ್ಸು ದೇವನ ದಾನವಾಗಿದೆ. ಆದ್ದರಿಂದ ವೃದ್ಧನನ್ನು ದೇವನೇ ರಕ್ಷಿಸಿದ್ದಾನೆಂದು ಹೇಳಿದರೆ ಅದು ವಸ್ತುನಿಷ್ಠವೂ, ವಾಸ್ತವಿಕತೆಯೂ ಆಗು ತ್ತದೆ. ಆಗ ಇಂತಹ ಘಟನೆಗಳನ್ನು ಮನುಷ್ಯನೊಂದಿಗೂ ಜೋಡಿಸಿ ಹೇಳಬಹುದು. ದೇವನೊಂದಿಗೂ ಜೋಡಿಸಬಹುದು. ಎರಡನ್ನೂ ಒಟ್ಟಿಗೆ ಜೋಡಿಸಿ ಏಕಕಾಲಕ್ಕೆ ಹೇಳ ಬಹುದು. ಹಾಗೆಯೇ ಇದು ಮನುಷ್ಯನ ಮಾತ್ರವೇ ಪ್ರಯತ್ನವೆಂದು ಹೇಳಿದರೆ ಅದನ್ನು ವಿರೋಧಿಸಬಹುದು. ದೇವನ ಪಾಲನ್ನು ಒತ್ತಿ ಹೇಳಬಹುದು. ಇಂತಹ ರೀತಿಗಳನ್ನು ಕುರ್ ಆನ್ ಅರಿಸಿಕೊಂಡಿದೆ. ನಮ್ಮ ಮನದ ತೀರ್ಮಾನದಲ್ಲೂ, ಉದ್ದೇಶದಲ್ಲೂ ಮನುಷ್ಯನ ಪಾಲು ಎಷ್ಟೆಂದು ಲೋಕದಲ್ಲಿ ಯಾರಿಗೂ ತಿಳಿಯುವುದಿಲ್ಲ. ಮನುಷ್ಯನ ಗ್ರಹಿಸುವ ಶಕ್ತಿಗೆ ಮೀರಿದ ವಿಷಯವಾದ್ದರಿಂದ ದೇವನು ವಿವರವಾಗಿ ಹೇಳಿಕೊಟ್ಟಿಲ್ಲ.

ಘಟನೆಗಳು, ಕರ್ಮಗಳು ಹಾಗೂ ಅವುಗಳ ಹಿಂದಿರುವ ತೀರ್ಮಾನಗಳನ್ನು ಪವಿತ್ರ ಕುರ್‌ಆನ್ ದೇವ ಮತ್ತು ಮನುಷ್ಯನೊಂದಿಗೆ ಜೋಡಿಸಿರುವುದು ಕಂಡು ಬರುತ್ತದೆ. ಕಪಟ ವಿಶ್ವಾಸಿಗಳು ಸ್ವೀಕರಿಸುವ ದೃಷ್ಟಕೋನವನ್ನು ತಿದ್ದಿ ಪವಿತ್ರ ಕುರ್‌ಆನ್ ಹೇಳುತ್ತದೆ: **''ಅವರಿಗೇನಾದರೂ ಲಾಭ ಉಂಟಾದರೆ 'ಇದು ಅಲ್ಲಾಹನ ಕಡೆಯಿಂದ' ಎನ್ನುತ್ತಾರೆ. ನಷ್ಟ ಉಂಟಾದರೆ ಓ ಪೈಗಂಬರರೇ, ಇದು ನಿಮ್ಮಿಂದಾಗಿ ಉಂಟಾಗಿರುತ್ತದೆ'' ಎನ್ನುತ್ತಾರೆ. 'ಎಲ್ಲವೂ ಅಲ್ಲಾಹನ ಕಡೆಯಿಂದಲೇ ಆಗಿದೆ' ಎಂದು ಹೇಳಿರಿ. ಇವರಿಗೆ ಏನಾಗಿಬಿಟ್ಟಿದೆ ? ಇವರಿಗೆ ಯಾವ ವಿಷಯವೂ ತಿಳಿಯುವುದಿಲ್ಲವಲ್ಲಾ.'' (ಪವಿತ್ರ ಕುರ್‌ಆನ್ 4:78)**

ಒಳಿತು-ಕೆಡುಕು ದೇವನಿಂದ ಎಂದು ಸ್ಪಷ್ಟಪಡಿಸುವ ಕುರ್‌ಆನ್ ಇಲ್ಲಿ ಕಪಟವಿಶ್ವಾಸಿಗಳ ತಪ್ಪಾದ ನಿಲುವಿಗೆ ಅವರೇ ಕಾರಣಕರ್ತರೆಂದು ಹೇಳಿ, ಅದಕ್ಕಾಗಿ ಅವರನ್ನು ಆಕ್ಷೇಪಿಸಿತು. ಸೂಕ್ತ ನಿಲುಮೆಯನ್ನು ಕೈಗೊಳ್ಳುವ ಅವಕಾಶವಿದ್ದರೂ ಅವರು ಬೇರೆಯೇ ತೀರ್ಮಾನ ಕೈಗೊಂಡದ್ದು ಇದಕ್ಕೆ ಕಾರಣವಾಗಿತ್ತು.

ಗುಣದೋಷಗಳಲ್ಲಿ ಮನುಷ್ಯನ ಕರ್ಮದಂತೆಯೇ ದೇವವಿಧಿಗೂ ಪಾಲು ಇರುವುದ ರಿಂದ ಅದಕ್ಕೆ ಕಾರಣವನ್ನು ಸೃಷ್ಟಿಕರ್ತನಿಗೆ ಜೋಡಿಸಿ ಹೇಳುವುದಕ್ಕೆ ಪವಿತ್ರ ಕುರ್‌ಆನ್‌ನಲ್ಲಿ ಬಹಳಷ್ಟು ಉದಾಹರಣೆಗಳಿವೆ.

**'ಅಲ್ಲಾಹನು ನಿಮಗೆ ಯಾವುದೇ ರೀತಿಯ ಕೇಡನ್ನುಂಟುಮಾಡಿದರೆ, ಅವನ ಹೊರತು ನಿಮ್ಮನ್ನು ಆ ಕೇಡಿನಿಂದ ರಕ್ಷಿಸುವವರು ಯಾರೂ ಇಲ್ಲ, ಅವನು ನಿಮಗೆ ಒಳಿತನ್ನುಂಟು ಮಾಡಿದರೆ ಅವನು ಸಕಲ ಕಾರ್ಯಗಳಿಗೆ ಸಮರ್ಥನು.' (6: 17) 'ಅಲ್ಲಾಹನನು ತನಗಿಷ್ಟ ಬಂದವರನ್ನು**

ಪಥಭ್ರಷ್ಟಗೊಳಿಸುತ್ತಾನೆ ಮತ್ತು ತನಗಿಷ್ಟಬಂದವರಿಗೆ ಸನ್ಮಾರ್ಗ ದರ್ಶನ ನೀಡುತ್ತಾನೆ. ಅವನು ಮಹಾ ಪ್ರತಾಪಶಾಲಿಯೂ, ಧೀಮಂತನನೂ ಆಗಿದ್ದಾನೆ.' (14: 4)

ಅದರೊಂದಿಗೆ ಸನ್ಮಾರ್ಗ-ದುರ್ಮಾರ್ಗದ ಪ್ರಾಪ್ತಿಯಲ್ಲಿ ಮನುಷ್ಯನ ಪಾಲನ್ನು ಪವಿತ್ರ ಕುರ್‌ಆನ್ ಎತ್ತಿ ಹೇಳಿದೆ. 'ಯಾರು ಅಣುತೂಕ ಒಳಿತು ಮಾಡುತ್ತಾನೋ ಅದನ್ನು ಅವನು ಕಂಡೇ ತೀರುವನು. ಯಾರು ಅಣುತೂಕ ಕೆಡಕು ಮಾಡುವನೋ ಅವನು ಅದನ್ನು ಪಡೆದೇ ತೀರುವನು.' (ಪವಿತ್ರ ಕುರ್‌ಆನ್99: 7-8)

'ಒಬ್ಬನು ಇನ್ನೊಬ್ಬನ ಹೊರೆಯನ್ನು ಹೊರುವುದಿಲ್ಲ, ಮನುಷ್ಯನು ತಾನೇ ಪರಿಶ್ರಮಿಸಿದುದರ ಹೊರತು ಅವನಿಗೆ ಬೇರೇನೋ ಇಲ್ಲ.' (ಪವಿತ್ರ ಕುರ್‌ಆನ್53: 38-39)

'ಅಲ್ಲಾಹನು ಯಾವ ಜೀವಿಯ ಮೇಲೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸು ವುದಿಲ್ಲ, ಪ್ರತಿಯೊಬ್ಬನೂ ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು ಮತ್ತು ಅವನು ಶೇಖರಿಸಿದ ಪಾಪದ ದಂಡ ಅವನ ಮೇಲೆಯೇ ಇರುವುದು.' (ಪವಿತ್ರ ಕುರ್‌ಆನ್2: 286)

'ನಿನಗೊದಗುವ ಪ್ರತಿಯೊಂದು ಒಳಿತು ಅಲ್ಲಾಹನ ಕೃಪೆಯಿಂದ ಒದಗುತ್ತದೆ ಮತ್ತು ನಿನಗೊದಗುವ ಪ್ರತಿಯೊಂದು ವಿಪತ್ತೂ ನಿನ್ನ ಕರ್ಮದಿಂದಾಗಿರುತ್ತದೆ.' (ಪವಿತ್ರ ಕುರ್ ಆನ್4:79) 'ಸತ್ಯ ವಿಶ್ವಾಸ ಮತ್ತು ಸತ್ಕರ್ಮಗಳ ನಿಲುಮೆಯನ್ನಿರಿಸಿಕೊಂಡವರಿಗೆ ಅವರ ಪ್ರತಿಫಲಗಳು ಸರ್ವ ಸಂಪೂರ್ಣವಾಗಿ ಕೊಡಲ್ಪಡುವುವು ಮತ್ತು ಅಲ್ಲಾಹನು ಆಕ್ರಮಿಗಳನ್ನು ಎಂದೆಂದಿಗೂ ಪ್ರೀತಿಸುವುದಿಲ್ಲ.' (ಪವಿತ್ರ ಕುರ್‌ಆನ್3:57)

'ಆ ಮಾರ್ಗದಶನವನ್ನು ಮಾನ್ಯಮಾಡಲು ನಿರಾಕರಿಸುವವರೂ ನಮ್ಮ 'ದೃಷ್ಟಾಂತ' ಗಳನ್ನು ಸುಳ್ಳಾಗಿಸುವವರೂ ನರಕಾಗ್ನಿಯಲ್ಲಿ ಬೀಳುವವರಾಗಿದ್ದು, ಅಲ್ಲಿ ಅವರು ಸದಾ ಕಾಲ ಇರುವರು.' (2:39) 'ಸತ್ಯನಿಷೇಧಿಗಳೇ, ಇಂದು ನೆಪಗಳನೊಡ್ಡಬೇಡಿರಿ, ನಿಮಗೆ ನೀವು ಮಾಡುತ್ತಿದ್ದ ಕರ್ಮಗಳಿಗೆ ತಕ್ಕುದಾದ ಪ್ರತಿಫಲವನ್ನೇ ನೀಡಲಾಗುತ್ತಿದೆ.' (66:7)

ಒಳಿತು-ಕೆಡುಕುಗಳಲ್ಲಿ ಮನುಷ್ಯನ ಪಾಲು ಮತ್ತು ದೇವವಿಧಿಯು ಹೇಗೆ ಜೋಡಿಸಲ್ಪಡು ತ್ತದೆಯೆಂದು ಕುರ್‌ಆನ್ ಸ್ಪಷ್ಟಪಡಿಸುತ್ತದೆ. 'ಹೇಳಿರಿ ಅಲ್ಲಾಹನು ನಿಶ್ಚಯವಾಗಿಯೂ ತನಗಿಷ್ಟ ಬಂದವರನ್ನು ಪಥಭ್ರಷ್ಟಗೊಳಿಸುತ್ತಾನೆ ಮತ್ತು ಅವನ ಕಡೆಗೆ ವಾಲುವವರಿಗೆ ತನ್ನ ಕಡೆಗೆ ಬರುವ ದಾರಿಯನ್ನು ತೋರಿಸುತ್ತಾನೆ.' (ಪವಿತ್ರ ಕುರ್‌ಆನ್13:27) 'ಸನ್ಮಾರ್ಗವು ವ್ಯಕ್ತವಾದ ಬಳಿಕವು ಸಂದೇಶವಾಹಕರ ವಿರುದ್ಧ ಟೊಂಕ ಕಟ್ಟಿಕೊಂಡವನನ್ನೂ ಸತ್ಯವಿಶ್ವಾಸಿಗಳ ಮಾರ್ಗದ ಹೊರತು ಅನ್ಯ ಮಾರ್ಗಗಳಲ್ಲಿ ನಡೆಯುವವನನ್ನೂ ಅವನು ತಾನಾಗಿ ತಿರುಗಿಕೊಂಡ ಕಡೆಗೆ ನಾವು ತಿರುಗಿಸಿ ಬಿಡುವೆವು.' (ಪವಿತ್ರ ಕುರ್‌ಆನ್ 4:115)

ಸಂಕ್ಷಿಪ್ತದಲ್ಲಿ, ಕರ್ಮಗಳ ಪ್ರತಿಫಲದ ಕುರಿತು ತಿಳಿದುಕೊಳ್ಳಲು ಸಾಧ್ಯವಿರುವ ಮನುಷ್ಯನಿಗೆ, ಆಲೋಚಿಸಿ ತೀರ್ಮಾನಿಸಲು, ಅದರಂತೆ ಕಾರ್ಯ ಪ್ರವೃತವಾಗಲು ಸ್ವಾತಂತ್ರ್ಯ ನೀಡಲಾಗಿದೆ. ಆದರೆ ಈ ಸ್ವಾತಂತ್ರ್ಯ ಅಪರಿಮಿತವೋ, ಅನಿಯಂತ್ರಿತವೋ ಅಲ್ಲ, ಅದು ದೇವೇಚ್ಛೆಗೂ, ವಿಧಿಗೂ ವಿಧೇಯವಾಗಿದೆ. ಈ ಸೀಮಿತ ಪರಿಧಿಯೊಳಗೆ ಮನುಷ್ಯನಿಗೆ

ನೀಡಲಾಗಿರುವ ಸ್ವಾತಂತ್ರ್ಯಕ್ಕೆ ಅನುಗುಣವಾಗಿ ಹೊಣೆಗಾರಿಕೆಯನ್ನು ನೀಡಲಾಗಿದೆ. ಈ ಹೊಣೆಗಾರಿಕೆಯ ನಿರ್ವಹಣೆ ಹಾಗು ಉಲ್ಲಂಘನೆಯು ಜೀವನದ ಜಯಾಪಜಯಗಳನ್ನು, ಸ್ವರ್ಗ-ನರಕವನ್ನು ತೀರ್ಮಾನಿಸುತ್ತದೆ. ಆದ್ದರಿಂದ ಅಲ್ಲಾಹನು ಯಾರಿಗೂ ಅವನ ಸಾಮರ್ಥ್ಯಕ್ಕೆ ಮೀರಿದ ಹೊಣೆಯನ್ನು ಹೊರಿಸುವುದಿಲ್ಲ. ಯಾರಿಗೂ ಅನ್ಯಾಯ ಮಾಡುವುದಿಲ್ಲ. ದೇವವಿಧಿ ಮತ್ತು ಮನುಷ್ಯ ಸ್ವಾತಂತ್ರ್ಯದ ಕುರಿತು ಹಾಗೂ ಅವುಗಳ ನಡುವಿನ ಸಂಬಂಧದ ಕುರಿತು ಮಾನವನಿಗೆ ಅರ್ಥವಾಗುವ ರೀತಿಯಲ್ಲಿ ವಿವರಿಸಲಾಗಿರುವ ಕುರ್‌ಆನ್‌ನ ಸೂಕ್ತಗಳಲ್ಲಿ ಸ್ವಲ್ಪವೂ ವಿರೋಧಾಭಾಸವಿಲ್ಲ.

ಎರಡನೇ ಖಲೀಫ ಉಮರುಲ್ ಫಾರೂಕ್(ರ) ರ ಕಾಲದಲ್ಲಿ ದೇವವಿಧಿ ಮತ್ತು ಮಾನವಸ್ವಾತಂತ್ರ್ಯದ ಇಸ್ಲಾಮೀ ದೃಷ್ಟಿಕೋನವನ್ನು ಅನಾವರಣಗೊಳಿಸುವ ಘಟನೆ ನಡೆಯಿತು. ಫಲಸ್ತೀನ್‌ನಲ್ಲಿ ಪ್ಲೇಗ್ ರೋಗ ವ್ಯಾಪಕವಾಯಿತು. ಕೆಲವೇ ದಿನಗಳಲ್ಲಿ ಅದು ಸಿರಿಯಾಕ್ಕೂ ತಲುಪಿತು. ಆ ರೋಗಪೀಡಿತರಾದವರೆಲ್ಲ ಮರಣ ಹೊಂದಿದರು. ಔಷಧಿ, ಚಿಕಿತ್ಸೆಯಾವುದೂ ಫಲಕಾರಿಯಾಗಲಿಲ್ಲ. ಒಂದೇ ತಿಂಗಳಿನಲ್ಲಿ ಹದಿನೈದು ಸಾವಿರ ಜನರ ಅಂತ್ಯವಾಯಿತು. ವಿಷಯದ ಗಂಭೀರತೆ ಅರ್ಥಮಾಡಿಕೊಂಡ ಖಲೀಫ, ಸೈನಿಕರ ಒಂದು ತಂಡದೊಂದಿಗೆ ಸಿರಿಯಾಕ್ಕೆ ಹೊರಟರು. ದಾರಿ ಮಧ್ಯೆ ತನ್ನ ಆಪ್ತಸಂಗಾತಿಗಳೊಡನೆ, ಕಾರ್ಯಯೋಜನೆಯ ಕುರಿತು ಸಮಾಲೋಚನೆ ನಡೆಸಿದರು. ತುರ್ತುಚಿಕಿತ್ಸಾ ಸೇವೆಗಳಿಗೆ ಆದೇಶಿಸಿದ ಬಳಿಕ ಅಲ್ಲಿಗೆ ಹೋಗಬೇಕಾಗಿಲ್ಲವೆಂದು ತೀರ್ಮಾನಿಸಲಾಯಿತು. ಸಾಂಕ್ರಾಮಿಕ ರೋಗ ವ್ಯಾಪಕವಾಗಿರುವ ಸ್ಥಳಕ್ಕೆ ಪ್ರಯಾಣ ಮಾಡುವುದು ಅಪಾಯಕಾರಿಯೆಂದು ಯಾತ್ರೆ ರದ್ದುಗೊಳಿಸಲಾಯಿತು. ವಿಷಯ ತಿಳಿದ ಅಬೂ ಉಬೈದ ಓಡಿಹೋಗುತ್ತಿದ್ದೀರಾ? ಆ ಸೈನಿಕನ ಅಂತರ್ಗತವನ್ನು ಅರ್ಥಮಾಡಿಕೊಂಡ ಖಲೀಫ ಹೇಳಿದರು, 'ಹೌದು, ಒಂದು ದೇವವಿಧಿಯಿಂದ ಇನ್ನೊಂದು ದೇವವಿಧಿಯ ಕಡೆಗೆ' ಸ್ವಲ್ಪ ಹೊತ್ತು ಮೌನವಹಿಸಿದ ಬಳಿಕ ಅವರು ಹೇಳಿದರು, 'ಒಬ್ಬನು ಒಂದು ಸ್ಥಳಕ್ಕೆ ಬಂದು ತಲುಪಿದ. ಅಲ್ಲಿ ಅವನಿಗೆ ಎರಡು ಸ್ಥಳಗಳಿವೆ. ಒಂದು ಫಲಸಮೃದ್ಧವಾದದ್ದು ಮತ್ತು ಇನ್ನೊಂದು ಏನೂ ಇಲ್ಲದ್ದು. ಫಲಸಮೃದ್ಧವಾದದ್ದನ್ನು ಸಂರಕ್ಷಿಸುವವನು ಅಲ್ಲಾಹನ ವಿಧಿಯ ಪ್ರಕಾರ ಕಾರ್ಯನಿರತನಾಗುವವನಲ್ಲವೇ? ಇನ್ನೊಂದನ್ನು ನೋಡಿಕೊಳ್ಳುವವನೂ ಅಲ್ಲಾಹನ ವಿಧಿಯನ್ನೇ ಪಾಲಿಸುವುದಲ್ಲವೇ?

ಇಸ್ಲಾಮಿನ ವಿಧಿವಿಶ್ವಾಸವು ವಿಪತ್ತು ಹಾಗೂ ವಿನಾಶದ ಕೀಲಿಕೈಯಾಗಬಾರದೆಂದೂ, ಅಭಿವೃದ್ಧಿ, ಏಳಿಗೆ ಹಾಗೂ ವಿಜಯದ ಹಾದಿಯಲ್ಲಿ ಆಘಾತ ನೀಡಬಾರದೆಂದೂ ಉಮರುಲ್ ಫಾರೂಕ್ ಸ್ಪಷ್ಟ ಭಾಷೆಯಲ್ಲಿ ಸಮಾಜಕ್ಕೆ ಕಲಿಸಿಕೊಟ್ಟಿದ್ದಾರೆ. ದೇವವಿಧಿಯ ನಿರೀಕ್ಷೆಯಲ್ಲಿ ಮನುಷ್ಯನು ತನಗೆ ನೀಡಲಾದ ಸ್ವಾತಂತ್ರ್ಯದ ಸಂಪೂರ್ಣ ಪ್ರಯೋಜನ ಪಡೆದುಕೊಳ್ಳಬೇಕೆಂಬ ಪಾಠವನ್ನು ಅದು ಒಳಗೊಂಡಿದೆ.

## 27 ಗುಲಾಮಗಿರಿಯನ್ನು ನಿಷೇಧಿಸದಿರಲು ಕಾರಣವೇನು?

**ಇಸ್ಲಾಮ್ ಗುಲಾಮತನವನ್ನು ನಿಷೇಧಿಸಿಲ್ಲವೆಂದು ನಾನು ಭಾವಿಸಿದ್ದೇನೆ. ಹಾಗಿದ್ದರೆ ಸಮಾನತೆ ಹಾಗೂ ನ್ಯಾಯದ ಕುರಿತು ಮಾತನಾಡಲು ಇಸ್ಲಾಮಿಗೆ ಯಾವ ಅಧಿಕಾರವಿದೆ?**

ಮನುಷ್ಯರೆಲ್ಲಾ ಒಂದೇ ದೇವನ ಸೃಷ್ಟಿಗಳೆಂದು, ಒಂದೇ ತಂದೆ ತಾಯಿಯ ಮಕ್ಕಳೆಂದು ಇಸ್ಲಾಮ್ ಕಲಿಸುತ್ತದೆ. ಆದ್ದರಿಂದ ಅವರ ನಡುವೆ ಭೇದಭಾವ ಸಲ್ಲದೆಂದು ಅದು ಆಜ್ಞಾಪಿಸುತ್ತದೆ, **'ಮನುಷ್ಯರೇ, ನಿಮ್ಮನ್ನು ಒಂದು ಗಂಡು ಮತ್ತು ಹೆಣ್ಣಿನಿಂದ ಸೃಷ್ಟಿಸಲಾಗಿದೆ. ನಿಮ್ಮನ್ನು ಕುಲಗೋತ್ರಗಳಾಗಿಯೂ, ಸಮುದಾಯಗಳಾಗಿಯೂ ವಿಂಗಡಿಸಿರುವುದು ನೀವು ಪರಸ್ಪರ ಪರಿಚಯಪಡುವ ಸಲುವಾಗಿ ಮಾತ್ರ.' (ಪವಿತ್ರ ಕುರ್‌ಆನ್ 49: 13)**

ಪ್ರವಾದಿಯವರು ಹೇಳುತ್ತಾರೆ: 'ನಿಶ್ಚಯವಾಗಿಯೂ ನಿಮ್ಮ ದೇವನು ಒಬ್ಬನೇ ನಿಮ್ಮೆಲ್ಲರ ತಂದೆಯೂ ಒಬ್ಬರೇ. ಎಲ್ಲರೂ ಆದಮನ ಮಕ್ಕಳು ಆದಮರನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ. ಆದ್ದರಿಂದ ಅರಬನಿಗೆ ಅರಬೇತರನಿಗಿಂತಲೋ, ಬಿಳಿಯನಿಗೆ ಕರಿಯನಿಗಿಂತಲೂ ಯಾವುದೇ ಶ್ರೇಷ್ಠತೆಯಿಲ್ಲ ದೇವಭಕ್ತಿಯ ಹೊರತು.' ( ಮುಸ್ಲಿಂ, ಅಬುದಾವೂದ್)

ಕಾನೂನಿನ ಮುಂದೆ ಎಲ್ಲರೂ ಸಮಾನರೆಂಬುದು ಇಸ್ಲಾಮಿನ ಸಿದ್ಧಾಂತ. ಮಾನವ ಹಕ್ಕುಗಳ ವಿಚಾರದಲ್ಲಿ ಸರ್ವರೂ ಸಮಾನರು, ಸಂಪತ್ತು, ಸ್ಥಾನಮಾನಗಳು ಅವರಿಗೆ ವಿಶೇಷ ಹಕ್ಕನ್ನು ಕರುಣಿಸುವುದಿಲ್ಲ, ಮಾತ್ರವಲ್ಲ ಅಂತಹ ಅಸಮಾನತೆಯನ್ನು ಅದು ತೀವ್ರವಾಗಿ ಖಂಡಿಸುತ್ತದೆ.

ಇಷ್ಟೆಲ್ಲಾ ಇರುವಾಗಲೂ ಇಸ್ಲಾಮ್ ಗುಲಾಮತನವನ್ನು ನಿಷೇಧಿಸಲಿಲ್ಲವೇಕೆ ಎಂಬ ಪ್ರಶ್ನೆಯು ವಿಶಾಲವಾದ ವಿವರಣೆಯನ್ನು ಬಯಸುತ್ತದೆ.

1. ಪ್ರವಾದಿ ಮುಹಮ್ಮದ್ (ಸ) ರ ಕಾಲದಲ್ಲಿ ವಿಶ್ವದಲ್ಲಿ ಕ್ರೂರವಾದ ಗುಲಾಮಗಿರಿಯು ವ್ಯಾಪಕವಾಗಿತ್ತು. ಪ್ರಾಚೀನ ರೋಮ್‌ನಲ್ಲಿ ಗುಲಾಮರು ಜಾನುವಾರುಗಳಂತೆ ಮಾರಾಟ ವಾಗುವ ವ್ಯಾಪಾರ ಸರಕಾಗಿದ್ದರು. ತಪ್ಪಿಸಿಕೊಳ್ಳದಿರಲು ಕಾಲುಗಳಿಗೆ ಭಾರವಾದ ಸರಪಳಿ ಯನ್ನು ಬಿಗಿದ ಸ್ಥಿತಿಯಲ್ಲಿ ಅವರು ಕಠಿಣವಾದ ಕೆಲಸವನ್ನು ಮಾಡುತ್ತಿದ್ದರು. ಅವರ ವಾಸ ಸ್ಥಳವು ಜಾನುವಾರುಗಳ ಹಟ್ಟಿಯಂತಿತ್ತು. ಆಹಾರದ ಹೊರತು ಬೇರಾವ ಹಕ್ಕುಗಳು ಅವರಿಗಿರಲಿಲ್ಲ, ಅದು ಕೂಡ ಯಜಮಾನ ತಿಂದುಳಿದ ಆಹಾರವಾಗಿತ್ತು. ಚಾಟಿಯೇಟಿಗೆ ಬೆನ್ನು ತೋರಿಸಬೇಕಾದವರಾಗಿದ್ದರು. ಗೂಳಿಕಾಳಗದಂತೆ ಗುಲಾಮರ ನಡುವೆಯೂ ಕಾಳಗವನ್ನು

ಏರ್ಪಡಿಸುವುದು ಸಾಮಾನ್ಯವಾಗಿತ್ತು. ಹೀಗೆ ಪರಸ್ಪರ ಹೊಡೆದಾಡಿ ಸಾಯುವುದನ್ನು ವೀಕ್ಷಿಸು ವುದು ಯಜಮಾನರಿಗೆ ವಿನೋದವಾಗಿತ್ತು.

ಭಾರತದ ಸ್ಥಿತಿಯೂ ಭಿನ್ನವಾಗಿರಲಿಲ್ಲ, ಭಾರತೀಯ ಜಾತಿವ್ಯವಸ್ಥೆಯ ಆಧಾರದಲ್ಲಿ ಗುಲಾಮಗಿರಿ ಚಾಲ್ತಿಯಲ್ಲಿತ್ತು. ಆದ್ದರಿಂದ ಅದನ್ನು ದೇವವಿಧಿ ಎಂದು ಪರಿಗಣಿಸಲಾಗುತ್ತಿತ್ತು. ಅಮೇರಿಕಾ, ಆಫ್ರಿಕಾಗಳಲ್ಲೂ ಇತ್ತೀಚಿಗಿನವರೆಗೂ ಕ್ರೂರವಾದ ಗುಲಾಮ ಪದ್ಧತಿ, ವರ್ಣ ಭೇದ ನೀತಿ ನೆಲೆನಿಂತಿತ್ತು. ಇತರ ಪಾಶ್ಚಾತ್ಯ ದೇಶಗಳ ಸ್ಥಿತಿಯೂ ಭಿನ್ನವಾಗಿರಲಿಲ್ಲ.

ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಇಸ್ಲಾಮ್ ಈ ವಿಷಯದಲ್ಲಿ ಮಹತ್ತರವಾದ ಬದಲಾವಣೆಯನ್ನು ತಂದಿತು. ಮೊದಲನೇಯದಾಗಿ ಗುಲಾಮರ ಕುರಿತು ಸಮಾಜದಲ್ಲಿದ್ದ ಭಾವನೆಗಳಲ್ಲಿ ಸಂಪೂರ್ಣ ಬದಲಾವಣೆಯನ್ನು ಸೃಷ್ಟಿಸಿತು. ಗುಲಾಮರು ಇತರ ಮನುಷ್ಯ ರಂತೆಯೇ ಎಂದು ಘೋಷಿಸಿತು. ಆ ಪ್ರಜ್ಞೆಯನ್ನು ಎಲ್ಲರಲ್ಲೂ ಬೆಳೆಸಲು ಪ್ರಯತ್ನಿಸಿತು. ಅಲ್ಲಾಹನು ಆದೇಶಿಸಿದನು: **'ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಿರಿ, ಸಂಬಂಧಿಕ ರೊಂದಿಗೂ, ಅನಾಥರೊಂದಿಗೂ, ನಿರ್ಗತಿಕರೊಂದಿಗೂ ಆಪ್ತರಾದ ನೆರೆಹೊರೆಯವರೊಂದಿಗೂ, ಅನುಚರರರೊಂದಿಗೂ ಪ್ರಯಾಣಿಕರೊಂದಿಗೂ ನಿಮ್ಮ ಅಧೀನದಲ್ಲಿರುವ ದಾಸ-ದಾಸಿಯರೊಂದಿಗೂ ಉತ್ತಮ ರೀತಿಯಿಂದ ವರ್ತಿಸಿರಿ. ದುರಂಕಾರ ಹೊಂದಿರುವ ಗರ್ವಿಷ್ಟನನ್ನೂ ಆತ್ಮಸ್ತುತಿಗೈಯುವವನನ್ನೂ ಅಲ್ಲಾಹನು ಮೆಚ್ಚುವುದಿಲ್ಲ.'** (ಪವಿತ್ರ ಕುರ್‌ಆನ್4: 36)

ಪ್ರವಾದಿವರ್ಯರು ಹೇಳಿರುವರು: 'ಅವರು ನಿಮ್ಮ ಸಹೋದರರೂ, ಬಂಧುಗಳೂ ಆಗಿದ್ದಾರೆ. ನಿಮ್ಮ ಕೈ ಅಧೀನದಲ್ಲಿರುವ ಸಹೋದರನಿಗೆ ನೀವು ತಿನ್ನುಂವತಹ ಆಹಾರ ಹಾಗೂ ತಾನು ಧರಿಸುವಂತಹ ವಸ್ತ್ರವನ್ನೇ ನೀಡಬೇಕು. ಅವರಿಗೆ ಅಸಾಧ್ಯವಾದ ಕಾರ್ಯವನ್ನು ವಹಿಸಿ ಕೊಡಬಾರದು ಅಥವಾ ಕಷ್ಟಕರವಾದ ಕೆಲಸವನ್ನು ವಹಿಸಿಕೊಡಬೇಕಾದಾಗ ನೀವೂ ಸಹಾಯ ಮಾಡಿರಿ.' (ಬುಖಾರಿ)

'ಇದು ನನ್ನ ಗುಲಾಮ, ಇದು ನನ್ನ ಗುಲಾಮಸ್ತ್ರೀ' ಎಂದು ಹೇಳಬಾರದೆಂದು ಕಲಿಸಿದ ಪ್ರವಾದಿವರ್ಯರು 'ಅವರನ್ನು ನಿಮಗೆ ಅಧೀನಗೊಳಿಸಿದ ಅಲ್ಲಾಹನು ನಿಮ್ಮನ್ನು ಅವರ ಅಧೀನಕ್ಕೆ ತರಲು ಶಕ್ತನು' ಎಂದು ಸಮೂಹವನ್ನು ಎಚ್ಚರಿಸಿದರು.

ಪೈಗಂಬರರು ಹೇಳಿದರು: 'ಯಾರಾದರೂ ತನ್ನ ಗುಲಾಮನನ್ನು ಕೊಂದರೆ ನಾವು ಅವನನ್ನು ಕೊಲ್ಲುವೆವು. ಯಾರಾದರೂ ತನ್ನ ಗುಲಾಮನ ಅಂಗಚ್ಛೇದ ಮಾಡಿದರೆ ನಾವು ಅವನ ಅಂಗಚ್ಛೇದ ಮಾಡುವೆವು. ಯಾರಾದರೂ ಗುಲಾಮನನ್ನು ಷಂಡೀಕರಣಗೊಳಿಸಿದರೆ, ನಾವು ಅವನನ್ನು ಷಂಡನನ್ನಾಗಿ ಮಾಡುವೆವು.'' (ಬುಖಾರಿ ಮುಸ್ಲಿಂ) ಗೌರವಪೂರ್ಣ ಆಹಾರ, ವಸ್ತ್ರ ವಸತಿಯನ್ನು ಕಡ್ಡಾಯಗೊಳಿಸಿದ ಇಸ್ಲಾಮ್ ಗುಲಾಮರ ಸುರಕ್ಷಿತತೆಯನ್ನು ಭದ್ರಗೊಳಿಸಿತು. ಇತರ ಸ್ತ್ರೀಯರಿಗೆ ವಿವಾಹವೇಳೆಯಲ್ಲಿ ಮಹ್ರ್(ವಿವಾಹಧನ) ಕಡ್ಡಾಯಗೊಳಿಸಿದಂತೆ ಗುಲಾಮಸ್ತ್ರೀಯರಿಗೂ ನಿಶ್ಚಯಿಸಿತು. ಪವಿತ್ರ ಕುರ್‌ಆನ್ ಹೇಳುತ್ತದೆ: ''ನಿಮ್ಮಲ್ಲಾರಾದರೂ

ಕುಲೀನ ಮುಸ್ಲಿಮ್ ಸ್ತ್ರೀ (ಮುಹ್ಸನಾತ್)ಯರೊಂದಿಗೆ ವಿವಾಹ ಮಾಡಿಕೊಳ್ಳುವಷ್ಟು ಸ್ಥಿತಿವಂತನಾಗಿರದಿದ್ದರೆ ನಿಮ್ಮ ಸ್ವಾಧೀನದಲ್ಲಿರುವ ವಿಶ್ವಾಸಿನಿಯರಾದ ದಾಸಿಯರ ಪೈಕಿ ಯಾರೊಂದಿಗಾದರೂ ವಿವಾಹ ಮಾಡಿಕೊಳ್ಳಲಿ. ಅಲ್ಲಾಹನು ನಿಮ್ಮ ವಿಶ್ವಾಸವನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ನೀವೆಲ್ಲರೂ ಒಂದೇ ವರ್ಗಕ್ಕೆ ಸೇರಿದವರು. ಆದುದರಿಂದ ನೀವು ಅವರ ಪೋಷಕರ ಅನುಮತಿಯಿಂದ ಅವರೊಂದಿಗೆ ವಿವಾಹ ಮಾಡಿಕೊಳ್ಳಿರಿ ಮತ್ತು ಅವರ ವಿವಾಹಧನವನ್ನು ಅವರಿಗೆ ಸಲ್ಲಿಸಿರಿ.'' **(4:26)** ಪ್ರವಾದಿ(ಸ) ರು ಹೇಳುತ್ತಾರೆ: 'ನೀವು ಅವರನ್ನು ಗೌರವಿಸಿ ಮತ್ತು ಅನುಸರಿಸಿ, ನಿಮ್ಮ ನಾಯಕನಾಗಿ ಒಣಗಿದ ದ್ರಾಕ್ಷಿಯಂತಹ ತಲೆಗೂದಲಿರುವ ಗುಲಾಮ ನೀಗ್ರೋ ವ್ಯಕ್ತಿ ಆಯ್ಕೆಯಾದರು ಸರಿ.'

ಖಲೀಫಾ ಉಮರ್(ರ) ಮರಣಾಸನ್ನರಾಗಿದ್ದ ಸಂದರ್ಭದಲ್ಲಿ ಭಾವೀ ಖಲೀಫರ ಕುರಿತ ಚರ್ಚೆಯಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದರು: 'ಅಬೂಹುದೈಫ ಬಿಡುಗಡೆಗೊಳಿಸಿದ ಗುಲಾಮರಾಗಿದ್ದ ಸಲೀಮ್ ಬದುಕಿದ್ದಿದ್ದರೆ ಅವರನ್ನು ನಾನು ಆಡಳಿತಗಾರನನ್ನಾಗಿ ನೇಮಿಸುತ್ತಿದ್ದೆ!'

ಅಬೂಬಕರ್ ಸಿದ್ದೀಕ್, ಉಮರುಲ್ ಫಾರೂಕ್‌ರಂತಹ ಬಹಳ ಪ್ರಮುಖರಾದ ಅನುಚರರನ್ನೊಳಗೊಂಡ ತಂಡದ ಸೇನಾಧಿಪತಿಯಾಗಿ ವಿಮೋಚಿತ ಗುಲಾಮನಾದ ಝೈದ್‌ರ ಮಗ ಉಸಾಮ(ರ) ಆಯ್ಕೆಯಾದಾಗ ಪ್ರವಾದಿಯವರು ಝೈದರಿಗೆ ತನ್ನ ಪಿತೃಸಹೋದರಿಯ ಪುತ್ರಿ ಝೈನಬರನ್ನು ವಿವಾಹ ಮಾಡಿಸಲು ಸಿದ್ಧರಾದರು.

ಸ್ವತಂತ್ರ್ಯ ವ್ಯಕ್ತಿಗಳ ಮತ್ತು ಗುಲಾಮರ ನಡುವೆ ಸಹೋದರತೆಯನ್ನು ಸ್ಥಾಪಿಸುವುದು ಪ್ರವಾದಿವರ್ಯರ ದಿನಚರಿಯಾಗಿತ್ತು. ನಿಗ್ರೋ ಗುಲಾಮರಾಗಿದ್ದ ಬಿಲಾಲ್, ಖುಷ್ ಅಮೀರ್ ಗೋತ್ರದವರಾದ ಖಾಲಿದುಬ್ನು ರುದೈಹರ ನಡುವೆ, ಗುಲಾಮರಾಗಿದ್ದ ಝೈದ್ ಹಾಗೂ ಸ್ವಂತ ಚಿಕ್ಕಪ್ಪನಾದ ಹಂಝರ ನಡುವೆಯೂ, ಗುಲಾಮರಾಗಿದ್ದ ಖಾರಿಜಬ್ನು ಝೈದ್ ಹಾಗು ನಂತರ ಪ್ರಥಮ ಖಲೀಫರಾದ ಅಬೂಬಕರ್ ಸಿದ್ದೀಕ್‌ರ ನಡುವೆ ಪ್ರವಾದಿವರ್ಯರು ಸಹೋದರತೆಯನ್ನು ಸ್ಥಾಪಿಸಿದರು.

ಗುಲಾಮರನ್ನು ನಿರ್ಲಕ್ಷಿಸಲು, ಕಷ್ಟಕ್ಕೊಳಪಡಿಸಲು ಇಸ್ಲಾಮ್ ಅನುಮತಿಸುವುದಿಲ್ಲ.

ಒಮ್ಮೆ ಗುಲಾಮನನ್ನು ಹಿಂಬದಿಯಿಂದ ನಡೆಸುತ್ತಾ ವಾಹನದಲ್ಲಿ ಸವಾರಿಮಾಡುತ್ತಿದ್ದ ಪ್ರಯಾಣಿಕರೊಂದಿಗೆ ಅಬೂಹುರೈರಾ(ರ) ಹೇಳಿದರು: 'ನಿನ್ನ ಹಿಂದೆ ಅವನನ್ನೂ ಹತ್ತಿಸಿಕೋ, ಅವನು ನಿನ್ನ ಸಹೋದರನಾಗಿದ್ದಾನೆ. ನಿನ್ನಂತಹ ಆತ್ಮವೇ ಅವನಲ್ಲಿದೆ.'

ಹೀಗೆ ಗುಲಾಮರಿಗೆ ಸಮಾಜದಲ್ಲಿ ಗೌರವಾರ್ಹ ಸ್ಥಾನಮಾನ, ಹಕ್ಕು ಹಾಗೂ ಪರಿಗಣನೆಯನ್ನು ನೀಡಿ ಅವನ ಹಕ್ಕುಗಳನ್ನು ಸಂರಕ್ಷಿಸಿದ ಇಸ್ಲಾಮ್ ಅವನೊಂದಿಗೆ ಅನ್ಯಾಯವೆಸಗುವುದನ್ನು ಶಿಕ್ಷಾರ್ಹ ಅಪರಾಧವೆಂದು ತಿಳಿಸಿತು. ಅದರೊಂದಿಗೆ ಗುಲಾಮರ ಬಾಧ್ಯತೆ ಹಾಗೂ ಶಿಕ್ಷೆಯನ್ನು ಗಮನಾರ್ಹವಾಗಿ ಕಡಿತಗೊಳಿಸಿತು.

2. ಇಸ್ಲಾಮ್ ಗುಲಾಮತನವನ್ನು ಅಂಗೀಕರಿಸುವುದಿಲ್ಲ, ಕೊನೆಗೆ ಗುಲಾಮಗಿರಿಯನ್ನು ನಿರ್ಮೂಲನೆಗೊಳಿಸುವ ಕ್ರಮಗಳನ್ನು ಅದು ಕೈಗೊಂಡಿತು. ಗುಲಾಮರ ಬಿಡುಗಡೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿತು. ಅಲ್ಲಾಹನು ಹೇಳುತ್ತಾನೆ: 'ಆದರೆ ಅವನು ದುರ್ಗಮ ಏರನ್ನು ಏರುವ **ಸಾಹಸವನ್ನೇ ಮಾಡಲಿಲ್ಲ, ಆ ದುರ್ಗಮ ಏರು ಏನೆಂದು ನಿಮಗೇನು ಗೊತ್ತು? ಯಾವುದಾದರೂ ಕೊರಳನ್ನು ದಾಸ್ಯಬಂಧನದಿಂದ ವಿಮೋಚಿಸುವುದು.' (ಪವಿತ್ರ ಕುರ್‌ಆನ್ 90:11-13)**

ಇಸ್ಲಾಮ್ ಝಕಾತ್‌ನ ಪಾಲನ್ನು ಗುಲಾಮರ ಬಿಡುಗಡೆಗಾಗಿ ನಿಶ್ಚಯಿಸಿದೆ. (9:60) ತನ್ನ ಅಧೀನದಲ್ಲಿರುವ ಗುಲಾಮರನ್ನು ಬಿಡುಗಡೆಗೊಳಿಸುವುದು ಮತ್ತು ಇತರರ ಅಧೀನದಲ್ಲಿರುವ ಗುಲಾಮರನ್ನು ಖರೀದಿಸಿ ಬಿಡುಗಡೆಗೊಳಿಸುವ ವಿಧಾನವನ್ನು ಇಸ್ಲಾಮ್ ಕಲಿಸಿತು. ಹೀಗೆ ಪ್ರವಾದಿವರ್ಯರು ಹಾಗೂ ಅನುಯಾಯಿಗಳು ತಮ್ಮ ಗುಲಾಮರನ್ನು ಬಿಡುಗಡೆಗೊಳಿಸಿದ್ದರು. ಅಬೂಬಕರ್(ರ)ರಂತಹ ಸಹೃದಯಿಗಳು ತಮ್ಮ ಸಂಪತ್ತಿನ ಸಿಂಹಪಾಲನ್ನು ಇತರರಿಂದ ಗುಲಾಮರನ್ನು ಖರೀದಿಸಿ, ನಂತರ ಬಿಡುಗಡೆಗೊಳಿಸಲು ಉಪಯೋಗಿಸಿದರು. ಹತ್ತು ಜನರಿಗೆ ಓದು-ಬರಹವನ್ನು ಕಲಿಸಿಕೊಡುವ ಗುಲಾಮರನ್ನು ಪ್ರವಾದಿವರ್ಯರು ಬಿಡುಗಡೆಗೊಳಿಸುತ್ತಿದ್ದರು.

ಹಲವು ಪಾಪಕರ್ಮಗಳಿಗೆ ಪ್ರಾಯಶ್ಚಿತ್ತವಾಗಿ ಗುಲಾಮರ ಬಿಡುಗಡೆಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿತ್ತು. 'ಸತ್ಯ ವಿಶ್ವಾಸಿಯೊಬ್ಬನು ಇನ್ನೊಬ್ಬ ಸತ್ಯವಿಶ್ವಾಸಿಯನ್ನು ಪ್ರಮಾದದಿಂದಾಗಿ ವಧಿಸಿಬಿಟ್ಟರೆ ಅದರ ಪ್ರಾಯಶ್ಚಿತ್ತವು ಒಬ್ಬ ಸತ್ಯವಿಶ್ವಾಸಿ ವ್ಯಕ್ತಿಯನ್ನು **ದಾಸ್ಯದಿಂದ ಮುಕ್ತಗೊಳಿಸುವುದು.' (ಪವಿತ್ರ ಕುರ್‌ಆನ್ 4: 92)**

ಶಪಥ ಮುರಿಯುವುದು, ಉಪವಾಸದ ಸಂದರ್ಭದಲ್ಲಿ ಪತಿ-ಪತ್ನಿ ಲೈಂಗಿಕ ಸಂಪರ್ಕದಲ್ಲೇರ್ಪಡುವಂತಹ ಅಪರಾಧಗಳಿಗೆ ಗುಲಾಮರನ್ನು ಬಿಡುಗಡೆಗೊಳಿಸುವುದನ್ನು ಪರಿಹಾರವಾಗಿ ನಿಶ್ಚಯಿಸಲಾಗಿದೆ. ಹೀಗೆ ಗುಲಾಮ ವಿಮೋಚನೆಗೆ ಇಸ್ಲಾಮ್ ವಿವಿಧ ಮಾರ್ಗಗಳನ್ನು ನಿಶ್ಚಯಿಸಿತು. ಪರಲೋಕದಲ್ಲಿ ಅದಕ್ಕೆ ಅತ್ಯುನ್ನತ ಪ್ರತಿಫಲವನ್ನು ವಾಗ್ದಾನ ಮಾಡಿತು. ಆದ್ದರಿಂದ ಇಸ್ಲಾಮೀ ಸಮಾಜದಲ್ಲಿ ಸಂಭವಿಸಿದಂತೆ ವ್ಯಾಪಕ ರೀತಿಯಲ್ಲಿ ಗುಲಾಮ ವಿಮೋಚನೆ ನಡೆದ ಬೇರೆ ಕಾಲಘಟ್ಟವು ಇತಿಹಾಸದಲ್ಲಿಲ್ಲ.

ಕರಾರು ಪತ್ರವನ್ನು ಬರೆದು ಸ್ವತಂತ್ರರಾಗಲು ಇಸ್ಲಾಮ್ ಗುಲಾಮರಿಗೆ ಅವಕಾಶ ನೀಡಿತು. ಇದರಿಂದ ಗುಲಾಮ ಮತ್ತು ಯಜಮಾನ ಸೇರಿ ಒಂದು ಮೌಲ್ಯವನ್ನು ನಿರ್ಣಯಿಸಿ, ಸ್ವಾತಂತ್ರ್ಯಗಳಿಸಲು ಗುಲಾಮರಿಗೆ ಸಾಧ್ಯವಾಯಿತು. ಇಂತಹ ಸಂದರ್ಭಗಳಲ್ಲಿ ಸ್ವತಂತ್ರ್ಯಗೊಳಿಸಬೇಕಾದುದು ಯಜಮಾನನ ಕರ್ತವ್ಯವಾಗಿದೆ. ಮಧ್ಯಪ್ರವೇಶಿಸಲು ಅಥವಾ ಕರಾರನ್ನು ನಿರಾಕರಿಸಲು ಆತನಿಗೆ ಅವಕಾಶವಿಲ್ಲ. ಕರಾರುಪತ್ರವನ್ನು ಬರೆಯುವ ಕ್ಷಣದಿಂದಲೇ ಗುಲಾಮ ಗುಲಾಮನಾಗಿ ಉಳಿಯುವುದಿಲ್ಲ. ಕೂಲಿ ಕಾರ್ಮಿಕನ ಸ್ಥಾನಕ್ಕೆ ತಲುಪುತ್ತಾನೆ. ನಂತರ ಮಾಡುವ ಕೆಲಸಗಳಿಗೆ ಪ್ರತಿಫಲ ದೊರೆತು ಅದು ದಾಸ್ಯಮುಕ್ತಿಯ ಮೌಲ್ಯವಾಗಿ

ಬದಲಾಗುತ್ತದೆ. ಇತರ ಕಾರ್ಮಿಕರಿಂದ ಹಣ ಪಡೆದು ವಿಮೋಚನಾ ಧನವನ್ನು ಶೇಖರಿಸುವ ಅವಕಾಶವೂ ಆತನಿಗೆ ಇದೆ, ಇಂತಹ ವ್ಯವಸ್ಥೆಯು ಯುರೋಪಿನಲ್ಲಿ ಹದಿನಾಲ್ಕನೇ ಶತಮಾನದಲ್ಲಷ್ಟೇ ಅಂಗೀಕರಿಸಲ್ಪಟ್ಟಿದೆಯೆಂಬುದು ಗಮನಾರ್ಹವಾಗಿದೆ.

ಹೀಗೆ ವಿವಿಧ ರೀತಿಯಲ್ಲಿ ವಿಮೋಚನೆ ಹೊಂದಿದ ಗುಲಾಮರು ಇಸ್ಲಾಮೀ ಚರಿತ್ರೆಯಲ್ಲಿ ಅತ್ಯುನ್ನತ ಸ್ಥಾನವನ್ನು ಅಲಂಕರಿಸಿ, ಆಡಳಿತದಲ್ಲೂ ಅಧಿಕಾರ ಚಲಾಯಿಸಿದರು. ಬಿಲಾಲ್ ಇಬ್ನು ರಬಾಹ್‌ರಂತೆ ಅತ್ಯುನ್ನತ ಪದವಿಯನ್ನು ಪಡೆದವರು ಅವರಲ್ಲಿದ್ದಾರೆ.

3.ಗುಲಾಮರು ವಂಶಪಾರಂಪರ್ಯವಾಗಿ ಮುಂದುವರಿಯುವ ವ್ಯವಸ್ಥೆಗೆ ಇಸ್ಲಾಮ್ ತಡೆಯೊಡ್ಡಿತು. ಯಜಮಾನನಿಗೆ ಗುಲಾಮ ಸ್ತ್ರೀಯಿಂದ ಮಕ್ಕಳಾದರೆ ಅದು ಯಜಮಾನನ ಮಕ್ಕಳೆಂದು ಪರಿಗಣಿಸಿ, ಆತನ ಇತರ ಮಕ್ಕಳಂತೆ ಸಂಪೂರ್ಣ ಸ್ವತಂತ್ರ ಪ್ರಜೆಗಳೆಂದು ಇಸ್ಲಾಮ್ ಘೋಷಿಸಿತು. ಮಾತ್ರವಲ್ಲ ಯಜಮಾನನ ಮರಣದೊಂದಿಗೆ ಅವರ ತಾಯಂದಿರು ಸ್ವತಂತ್ರರಾಗುತ್ತಾರೆಂದು ಹೇಳಿತು ಮತ್ತು ಯಜಮಾನನು ಗುಲಾಮ ಸ್ತ್ರೀಯರನ್ನು ವೇಶ್ಯಾ ವೃತ್ತಿಗಿಳಿಸಿ ವರಮಾನ ಗಳಿಸುವ ಅತ್ಯಂತ ನೀಚ ಸಂಪ್ರದಾಯವನ್ನು ನಿಷೇಧಿಸಿತು.

4. ಕ್ರಮಬದ್ಧವಾಗಿ ಗುಲಾಮಗಿರಿಯನ್ನು ಕೊನೆಗೊಳಿಸಲು ಪ್ರಬುದ್ಧ ನಿಲುವನ್ನು ಸ್ವೀಕರಿಸಿದ ಇಸ್ಲಾಮ್, ಕೆಲವು ಅನಿವಾರ್ಯ ಕಾರಣಗಳಿಂದ ಅದನ್ನು ಸಂಪೂರ್ಣವಾಗಿ ನಿಷೇಧಿಸಿಲ್ಲ. ಯುದ್ಧಗಳ ಹೊರತಾಗಿ ಗುಲಾಮರಿಗೆ ಉಂಟಾಗುವ ಎಲ್ಲವನ್ನೂ ಇಸ್ಲಾಮ್ ಸಂಪೂರ್ಣವಾಗಿ ಕೊನೆಗೊಳಿಸಿತು. ಪ್ರವಾದಿಯವರ ನಿಯೋಗದ ಕಾಲದಲ್ಲಿ ಯುದ್ಧ ಕೈದಿಗಳನನ್ನು ವಧಿಸುವ ಅಥವಾ ಗುಲಾಮರಾಗಿಸುವ ಪದ್ಧತಿ ಜಾರಿಯಲ್ಲಿತ್ತು. ಈ ಪರಿಸ್ಥಿತಿ ದೀರ್ಘ ಕಾಲದವರೆಗೆ ಮುಂದುವರಿಯಿತು. ಶತ್ರು ರಾಷ್ಟ್ರಗಳೊಂದಿಗೆ ಯುದ್ಧ ನಡೆಯುವಾಗ ಅವರ ಕೈದಿಗಳಾಗುವ ಮುಸ್ಲಿಮ್ ಕೈದಿಗಳನ್ನು ವಧಿಸುವ ಅಥವಾ ಗುಲಾಮರಾಗಿಸುವ ಸಂಪ್ರದಾಯ ಚಾಲ್ತಿಯಲ್ಲಿರುವಾಗ, ಇಸ್ಲಾಮೀ ರಾಷ್ಟ್ರವು ಸೆರೆಹಿಡಿಯುವ ಶತ್ರು ರಾಷ್ಟ್ರದ ಕೈದಿಗಳ ಕುರಿತು ಬೇರೆ ನಿರ್ಧಾರ ತೆಗೆದುಕೊಳ್ಳುವುದು ಸೂಕ್ತವೋ ಪ್ರಾಯೋಗಿಕವೋ ಆಗಿರಲಿಲ್ಲ. ಆದರೂ ಯುದ್ಧ ಕೈದಿಗಳನ್ನು ವಧಿಸುವುದನ್ನು ಇಸ್ಲಾಮ್ ನಿಷೇಧಿಸಿತು. ಅವರ ಮೇಲೆ ಸೌಜನ್ಯತೋರುವುದೋ ಅಥವಾ ಪರಿಹಾರ ಧನ ಪಡೆದು ಬಿಡುಗಡೆಗೊಳಿಸುವುದೋ ಆಗಬಹುದೆಂದು ಆದೇಶಿಸಿತು.(47:4)

ಯುದ್ಧ ಕೈದಿಗಳನ್ನೆಲ್ಲಾ ಇರಿಸಿಕೊಳ್ಳಲು ಸೂಕ್ತ ಸೌಕರ್ಯವಿಲ್ಲದಿದ್ದಾಗ ಶತ್ರು ರಾಷ್ಟ್ರಗಳಂತೆ ಇಸ್ಲಾಮಿ ರಾಷ್ಟ್ರವು ಅವರನ್ನು ಗುಲಾಮರಾಗಿಸುತ್ತಿತ್ತು. ಇದರ ಕುರಿತು ಪ್ರಮುಖ ಇಸ್ಲಾಮೀ ವಿದ್ವಾಂಸ ಮುಹಮ್ಮದ್ ಕುತುಬ್ ಬರೆಯುತ್ತಾರೆ: ಯುದ್ಧ ಕೈದಿಗಳ ವಿಷಯದಲ್ಲಿ 'ಶತ್ರುಗಳು ಬೇರೆ ನಿಲುವು ಸ್ವೀಕರಿಸಲು ಸಿದ್ಧರಾಗುವವರೆಗೆ' ಎಂದು ದಾಸ್ಯ ಸಂಪ್ರದಾಯಕ್ಕೆ ಕಾಲ ನಿರ್ಣಯಿಸಿತು. ಮುಸ್ಲಿಮ್ ಯುದ್ಧ ಕೈದಿಗಳು ಏಕಪಕ್ಷೀಯವಾಗಿ ಗುಲಾಮಗಿರಿಗೆ ಎಸೆಯಲ್ಪಡಬಾರದೆಂಬ ಉದ್ದೇಶ ಮಾತ್ರ ಇದರಲ್ಲಿತ್ತು. ಇಲ್ಲಿ ಆಲೋಚಿಸಬೇಕಾದ ಒಂದು

ಸಂಗತಿಯಿದೆ 'ಸೌಜನ್ಯ ತೋರಿಯೋ, ಪರಿಹಾರ ಧನ ಪಡೆದೋ ಬಿಡುಗಡೆಗೊಳಿಸಿರಿ' ಎಂಬ ಯುದ್ಧ ಕೈದಿಗಗಳ ಕುರಿತ ಒಂದೇ ಕುರ್‌ಆನ್ ಸೂಕ್ತವು ಕೈದಿಗಳನ್ನು ಗುಲಾಮರಾಗಿಸುವ ವಿಷಯವನ್ನು ಹೇಳಿಲ್ಲ, ಅದು ಶಾಶ್ವತ ನಿಯಮವಾಗಬಾರದೆಂಬ ಉದ್ದೇಶ ಅದರಲ್ಲಿದೆ. ಪರಿಹಾರ ಧನ ಪಡೆದು ಬಿಡುಗಡೆಗೊಳಿಸುವ ವಿಷಯ ಹೇಳಲಾಯಿತು. ಪಡೆಯದೆಯೇ ಸ್ವತಂತ್ರಗೊಳಿಸುವುದನ್ನೂ ಹೇಳಲಾಯಿತು. ಕಾರಣವೇನೆಂದರೆ ಈ ಎರಡು ದೋರಣೆಗಳು ಮುಂದಿನ ಪೀಳಿಗೆಯ ಯುದ್ಧಕೈದಿಗಳಿಗಾಗಿ ಇಸ್ಲಾಮ್ ನಿಶ್ಚಯಿಸಿದ ಶಾಶ್ವತ ನಿಯಮವಾಗಿದೆ. ಗುಲಾಮ ಸಂಪ್ರದಾಯವನ್ನು ಮುಸ್ಲಿಮರು ಅತ್ಯಂತ ನಿರ್ಬಂಧ ಪರಿಸ್ಥಿತಿಯ ಅನಿವಾರ್ಯತೆ ಯಿಂದ ಸ್ವೀಕರಿಸಿದ್ದರು. ಅದೊಂದು ಇಸ್ಲಾಮೀ ನಿಲುವು ಎಂಬ ಆಧಾರದಲ್ಲಿ ಖಂಡಿತ ಅಲ್ಲ. (ತಪ್ಪುಕಲ್ಪನೆಗೊಳಗಾದ ಧರ್ಮ–ಪುಟ–62)

ಪ್ರವಾದಿ ಮುಹಮ್ಮದ್(ಸ) ರ ಕಾಲದಲ್ಲಿ ಯುದ್ಧ ಕೈದಿಗಳ ವಿಷಯದಲ್ಲಿ ಮುಖ್ಯವಾಗಿ ಐದು ರೀತಿಯ ತೀರ್ಮಾನಗಳನ್ನು ಸ್ವೀಕರಿಸಲಾಗಿತ್ತು.

a. ಶತ್ರುಗಳು ಬಂಧನಕ್ಕೊಳಪಡಿಸಿದ ಕೈದಿಗಳಿಗೆ ಬದಲಿಯಾಗಿ ತಮ್ಮ ವಶದಲ್ಲಿರುವ ಯುದ್ಧಕೈದಿಗಳನ್ನು ಅವರಿಗೆ ಒಪ್ಪಿಸುವುದು.

b. ಪರಿಹಾರ ಧನ ಪಡೆದು ಬಿಡುಗಡೆಗೊಳಿಸುವುದನ್ನು ಬದ್ರ್‌ಯುದ್ಧದ ಸಂದರ್ಭದಲ್ಲಿ ಮಾತ್ರ ಕೈಗೊಳ್ಳಲಾಗಿತ್ತು. ಅಂದು ಇಸ್ಲಾಮೀ ರಾಷ್ಟ್ರವು ಆರ್ಥಿಕ ಮುಗ್ಗಟ್ಟು ಅನುಭವಿಸುತ್ತಿದ್ದು ಮಕ್ಕಾದ ಶ್ರೀಮಂತರು ಕೈದಿಗಳಾಗಿದ್ದುದು ಇದಕ್ಕೆ ಕಾರಣವಾಗಿರಬಹುದು.

c. ದೇಶದ ಭದ್ರತೆಗೆ ಬೆದರಿಕೆಯಿಲ್ಲದಿದ್ದರೆ ಉಚಿತವಾಗಿ ಬಿಡುಗಡೆ ಗೊಳಿಸುವುದು. ಹುನೈನ್ ಯುದ್ಧಕೈದಿಗಳ ವಿಷಯದಲ್ಲಿ ಪ್ರವಾದಿಯವರು ಈ ದೋರಣೆಯನ್ನು ಸ್ವೀಕರಿಸಿದ್ದರು. ಬನು ಮುಸ್ತಲಿಕ್ ಯುದ್ಧಕೈದಿಗಳ ಕುರಿತೂ ಇದೇ ನಿಲುವು ತಾಳಲಾಗಿತ್ತು.

d. ಶತ್ರುಗಳ ವಶವಾಗುವ ಇಸ್ಲಾಮೀ ಪ್ರಜೆಗಳನ್ನು ಗುಲಾಮರಾಗಿಸುವಂತೆಯೇ ಮುಸ್ಲಿಮರ ವಶವಾಗುವ ಕೈದಿಗಳನ್ನು ಗುಲಾಮರನ್ನಾಗಿ ಸೈನಿಕರಿಗೆ ಹಂಚುವುದು. ಆಗಲೂ ಗುಲಾಮರೊಂದಿಗೆ ಉತ್ತಮ ರೀತಿಯಲ್ಲಿ ವರ್ತಿಸಲು ಹಾಗೂ ತಾವು ಸೇವಿಸುವ ಆಹಾರ,ಧರಿಸುವ ಉಡುಪು, ವಸತಿಯನ್ನು ನೀಡುವಂತೆ ಆದೇಶ ನೀಡಲಾಗಿತ್ತು.

e. ಮುಸ್ಲಿಮರಿಗೆ ಕಡ್ಡಾಯ ಸೈನಿಕ ಸೇವೆ ನಿಶ್ಚಯಿಸಿದ್ದರಿಂದ, ಅದರಿಂದ ಮುಕ್ತರಾದ ಧಾರ್ಮಿಕ ಅಲ್ಪಸಂಖ್ಯಾತರಿಂದ ದೇಶದ ರಕ್ಷಣೆಗಾಗಿ ನೀಡಬೇಕಾದ 'ಜಿಝಿಯಾ'ವನ್ನು ಸ್ವೀಕರಿಸಿ ಕೈದಿಗಳನ್ನೆಲ್ಲಾ ಬಿಡುಗಡೆಗೊಳಿಸಲಾಗುತ್ತಿತ್ತು. ನಜ್ರಾನಿನ ಕ್ರೈಸ್ತರ ಕುರಿತು ಪ್ರವಾದಿಯವರ ತೀರ್ಮಾನ ಇದುವೇ ಆಗಿತ್ತು. ಹಿಂದಿನ ಕಾಲದ ಇಸ್ಲಾಮೀ ರಾಷ್ಟ್ರದ ಆಡಳಿತಗಾರರ ನಿಲುವೂ ಇದೇ ಆಗಿತ್ತು.

ಅತ್ಯಂತ ಅನಿವಾರ್ಯವಾದ ಸಂದರ್ಭಗಳಲ್ಲಿ ಅಪರೂಪವಾಗಿ ಯುದ್ಧ ಕೈದಿಗಳನ್ನು ಗುಲಾಮರನ್ನಾಗಿಸುವ ನಿರ್ಧಾರವನ್ನು ತಗೆದುಕೊಳ್ಳಲಾಗುತ್ತಿತ್ತು. ಅದೊಂದು ಶಾಶ್ವತ

ಸಂಪ್ರದಾಯವಾಗಿರಲಿಲ್ಲ. ಆದ್ದರಿಂದಲೇ ಇಸ್ಲಾಮ್ ಅನಿವಾರ್ಯ ಸಂದರ್ಭದ ತಾತ್ಕಾಲಿಕ ನಿರ್ಧಾರವಾಗಿ ಗುಲಾಮ ಸಂಸ್ಕೃತಿಯನ್ನು ಒಪ್ಪಿಕೊಂಡಿತ್ತು. ಮುಹಮ್ಮದ್ ಕುತುಬ್ ಬರೆಯುತ್ತಾರೆ: 'ಖಂಡಿತವಾಗಿಯೂ ಇಸ್ಲಾಮ್ ಗುಲಾಮಗಿರಿಯನ್ನು ಅಂಗೀಕರಿಸಿಲ್ಲ. ಗುಲಾಮರ ವಿಮೋಚನೆಗಾಗಿ ಇಸ್ಲಾಮ್ ತೋರಿಸಿಕೊಟ್ಟ ವಿವಿಧ ವಿಧಾನಗಳೇ ಇದಕ್ಕೆ ಸಾಕ್ಷಿ. ಅದರ ಬೇರನ್ನು ಕಡಿದು ಹಾಕಲು ಇಸ್ಲಾಮ್ ಸಾಕಷ್ಟು ಪ್ರಯತ್ನಿಸಿತು. ಇಸ್ಲಾಮ್‌ಗೆ ಏಕಮುಖವಾಗಿ ತೀರ್ಮಾನ ತೆದುಕೊಳ್ಳಲು ಸಾಧ್ಯವಾಗದ ಅದರ ನಿಯಂತ್ರಣದಲ್ಲಿಲ್ಲದ ಒಂದು ಅನಿವಾರ್ಯ ಪರಿಸ್ಥಿತಿ ಎದುರಾಗಿತ್ತು. ಅದು ಇಸ್ಲಾಮಿನ ನಿಯಂತ್ರಣವಿಲ್ಲದ ರಾಷ್ಟ್ರಗಳು ಹಾಗೂ ಜನರಿಗೆ ಸಂಬಂಧಪಟ್ಟಿತು. ಅವರು ಮುಸ್ಲಿಮ್ ಯುದ್ಧ ಕೈದಿಗಳನ್ನು ಬಹಳ ಕ್ರೂರ ಶಿಕ್ಷೆಗೊಳಪಡಿಸಿದರು. ಆದ್ದರಿಂದ ಗುಲಾಮರೊಂದಿಗೆ ಅತ್ಯಂತ ನೀಚವಾಗಿ ವರ್ತಿಸುವುದನ್ನು ಬಿಟ್ಟು, ಗುಲಾಮರಾಗಿಸುವ ನಿರ್ಧಾರದಲ್ಲಾದರೂ. ಸಮಾನವಾದ ನಿಲುವನ್ನು ಸ್ವೀಕರಿಸಲು ನಿರ್ಬಂಧಿಸಿತು. ಗುಲಾಮ ಸಂಪ್ರದಾಯವನ್ನು ನಿಷೇಧಿಸದಿರಲು ಇಸ್ಲಾಮನ್ನು ನಿರ್ಬಂಧಿಸಿದ ಆ ಏಕೈಕ ಕಾರಣವು ಕೊನೆಗೊಳ್ಳಲು ವಿಶ್ವದ ಇತರ ಶಕ್ತಿಗಳ ಸಹಕಾರ ಅಗತ್ಯವಿತ್ತು. ಆ ಸಹಕಾರ ಲಭಿಸುವ ಕ್ಷಣದಿಂದಲೇ ನಿಸ್ಸಂಶಯವಾಗಿ ಇಸ್ಲಾಮ್ ತಾನು ಪ್ರತಿಪಾದಿಸಿದ ಆ ಮಹತ್ತರವಾದ ಸಿದ್ಧಾಂತದೆಡೆಗೆ ಮರಳುತ್ತದೆ. ಎಲ್ಲರಿಗೂ ಸಮಾನತೆ ಮತ್ತು ಸ್ವಾತಂತ್ರ್ಯ ಎಂಬ ತತ್ವದೆಡೆಗೆ ಸಾಗುತ್ತದೆ.' (ತಪ್ಪುಕಲ್ಪನೆಗೊಳಗಾದ ಧರ್ಮ-ಪುಟ-64)

ಈಗಲೂ ಯುದ್ಧ ಕೈದಿಗಳನ್ನು ಆರೋಪಿಗಳೆಂದು ಪರಿಗಣಿಸಿ ಸೆರೆಮನೆಯಲ್ಲಿ ಇರಿಸಲಾಗುತ್ತಿದೆ. ಜೈಲಿನ ಕತ್ತಲು ಕೋಣೆಯಲ್ಲಿ ಬಂಧಿತರಾಗಿ ವರ್ಷಗಳನ್ನು ಕಳೆಯುವುದಕ್ಕಿಂತ, ಇಸ್ಲಾಮೀ ಸಮೂಹದಲ್ಲಿದ್ದಂತೆ ಎಲ್ಲಾ ಮೂಲಭೂತ ಅಗತ್ಯಗಳು ಪೂರೈಸಲ್ಪಡುವ, ಜನರೊಂದಿಗೆ ವಾಸಿಸುವ ಆ ಬದುಕೇ ಇದಕ್ಕಿಂತ ಎಷ್ಟೋ ಉತ್ತಮ ಎಂಬುದು ವಾಸ್ತವ, ಗುಲಾಮನೆಂಬ ವಿಶೇಷಣವು ಅದೆಷ್ಟೇ ಅರೋಚಕವಾಗಿದ್ದರೂ ಸರಿ.

ಒಂದು ಸಾಮಾಜಿಕ ವ್ಯವಸ್ಥೆಯ ಅವಿಭಾಜ್ಯ ಭಾಗವಾಗಿ ಬೇರೂರಿದ್ದ ಸಂಪ್ರದಾಯವನ್ನು ತಟ್ಟನೆ ಕಾನೂನಿನ ಮೂಲಕ ನಿಷೇಧಿಸುವುದೇ ಫಲಪ್ರದವಾಗುವುದಿಲ್ಲ. ಗುಲಾಮ ಸಂಸ್ಕೃತಿ ಯನ್ನು ಆ ಕಾಲದಲ್ಲಿ ಒಂದು ವಾಕ್ಯದಿಂದ ಕೊನೆಗೊಳಿಸುವುದು ಸಾಧ್ಯವಾಗುತ್ತಿರಲಿಲ್ಲ. ಅಂತಹ ತುರ್ತುಕ್ರಮ ಕೈಗೊಂಡರೂ ಮರುದಿನ ಸಮಾಜದ ಎಲ್ಲರೂ ಗುಲಾಮರನ್ನು ಸಾಮಾನ್ಯ ಸ್ವತಂತ್ರ ವ್ಯಕ್ತಿಗಳಂತೆ ಸ್ವೀಕರಿಸಲು ಮಾನಸಿಕವಾಗಿ ಸಿದ್ಧರಿರಲಿಲ್ಲ. ಒಂದು ಮುಂಜಾನೆ ಮುಕ್ತವಾದ ಎಲ್ಲ ಗುಲಾಮರೊಂದಿಗೆ ಸಮಾಜವು ಸಮಾನತೆಯಿಂದ ವರ್ತಿಸುವುದನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ವಿವಾಹ ಸಂಬಂಧ ಬೆಳೆಸಲು ಇದು ತಡೆಯಾಗಬಹುದು. ವಿಮೋಚನೆಗೊಂಡ ಗುಲಾಮರ ಒಂದು ವರ್ಗ ರೂಪಗೊಳ್ಳುತ್ತಿತ್ತು. ಮೊದಲು ಲಭ್ಯವಾಗಿದ್ದ ಉದ್ಯೋಗ, ಸಂರಕ್ಷಣೆ ಲಭಿಸದೆ ಈ ವಿಭಾಗದ ಜೀವನ ದುಸ್ತರವಾಗಬಹುದು. ಅಬ್ರಹಾಂ ಲಿಂಕನ್ ಅಮೇರಿಕಾದ ಸಂಯುಕ್ತ ಸಂಸ್ಥಾನದ ಗುಲಾಮಗಿರಿ ವ್ಯವಸ್ಥೆಯನ್ನು ನಿಲ್ಲಿಸಿದಾಗ ಉಂಟಾದ ಅನುಭವ

ಇದಕ್ಕೆ ಸಾಕ್ಷಿಯಾಗಿದೆ. ಗುಲಾಮರು ಸ್ವತಂತ್ರರಾಗಲು ಮಾನಸಿಕವಾಗಿ ಸಿದ್ಧರಾಗಿಲ್ಲದ ಕಾರಣ ಯಜಮಾನರ ಬಳಿಗೆ ಬಂದು ತಮ್ಮನ್ನು ಮರಳಿ ಗುಲಾಮರಾಗಿ ಸ್ವೀಕರಿಸಬೇಕೆಂದು ವಿನಂತಿಸುವ ಪರಿಸ್ಥಿತಿ ಉಂಟಾಗಿತ್ತು. ಆದ್ದರಿಂದ ಇಸ್ಲಾಮ್ ಗುಲಾಮಗಿರಿಯನ್ನು ಕೊನೆಗೊಳಿಸಲು ಅತ್ಯಂತ ಕ್ರಮಬದ್ಧವಾದ, ಸುವ್ಯವಸ್ಥಿತವಾದ ಮಾರ್ಗವನ್ನು ಅವಲಂಬಿಸಿತು.

5. ನಿಯಮವೆಂದರೆ ಮಾನವ ಶರೀರದ ಚಲನೆಗಳ ಮೇಲೆ ವಿಧಿಸಲಾಗುವ ನಿಯಂತ್ರಣವಾಗಿದೆ. ಆದ್ದರಿಂದ ನಾವು ಹೇಗೆ ಬದುಕಬೇಕೆಂದು ತೀರ್ಮಾನಿಸಬೇಕಾದುದು ನಿಯಮವಾಗಿದೆ. ಇಂತಹ ನಿಯಮಗಳನ್ನು ನಿರ್ಮಿಸುವ ಅತ್ಯಧಿಕ ಅಧಿಕಾರ ಯಾರಿಗೆ ಎಂಬುದಕ್ಕೆ ಮಾನವ ಸ್ವಾತಂತ್ರ್ಯದೊಂದಿಗೆ ಅಭೇದ್ಯವಾದ ನಂಟಿದೆ. ಪ್ರಜೆಗಳು ತಮ್ಮಿಚ್ಛೆಯಂತೆ ಬದುಕುವ ಅರಕ್ಷಿತತೆ ಹಾಗೂ ಅರಾಜಕತೆಯ ಗೂಡಾಗಿರುತ್ತದೆ. ಆದ್ದರಿಂದ ಸಮಾಜವು ವ್ಯವಸ್ಥಿತವಾಗಿ ಮುಂದುವರಿಯಲು ನಿಯಮಗಳು ಅನಿವಾರ್ಯವಾಗಿದೆ. ಅದನ್ನು ರೂಪಿಸುವ ಪರಮಾಧಿಕಾರವನ್ನು ಯಜಮಾನರು ವಹಿಸಿಕೊಳ್ಳುತ್ತಾರೆ. ಅದಕ್ಕೆ ಗುಲಾಮರು ವಿಧೇಯರಾಗಬೇಕಾಗುತ್ತದೆ. ಆದ್ದರಿಂದ ಕಾನೂನು ನಿರ್ಮಾಣದ ಪರಮಾಧಿಕಾರ ದೇವನಿಗಲ್ಲದೆ ಬೇರಾರಿಗೂ ಇಲ್ಲವೆಂಬ ಪರಮಸತ್ಯವನ್ನು ಅಂಗೀಕರಿಸದವರೆಲ್ಲರೂ ತಮ್ಮಂತಹ ಮನುಷ್ಯರ ಗುಲಾಮರೂ ಆಜ್ಞಾನುವರ್ತಿಗಳೂ ಆಗುತ್ತಾರೆ. ಈ ಅರ್ಥದಲ್ಲಿ ವೀಕ್ಷಿಸುವಾಗ ಕಾನೂನು ರಚನೆಯ ಪರಮಾಧಿಕಾರವನ್ನು ಸರ್ಕಾರಕ್ಕೆ ಒಪ್ಪಿಸುವ ಆಧುನಿಕ ಸಮೂಹಗಳು ಗುಲಾಮಗಿರಿಯ ಸಮೂಹಗಳಾಗಿದೆ. ಅಂತಹವರಿಗೆ ದಾಸ್ಯತನದಿಂದ ಮುಕ್ತಿಯೆಂದೂ ಮರೀಚಿಕೆಯಾಗಿಯೇ ಉಳಿಯುತ್ತದೆ.

ಕಾನೂನು ರಚನೆಯ ಪರಮಾಧಿಕಾರವನ್ನೋ, ಸ್ವೇಚ್ಛೆಯನ್ನೋ ಇತರರ ಮೇಲೆ ಹೇರಲು ಇಸ್ಲಾಮ್ ಯಾರಿಗೂ ಅನುಮತಿ ನೀಡುವುದಿಲ್ಲ. ಆ ಅಧಿಕಾರ ಸೃಷ್ಟಿಕರ್ತನಿಗೆ ಮಾತ್ರ ಇದೆ ಎಂದು ಅದು ಸಾರುತ್ತದೆ. ಆಡಳಿತಾಧಿಕಾರಿಗಳಿಗೆ ಅವನ ಕಾನೂನನ್ನು ಜಾರಿಗೊಳಿಸುವ ಅಧಿಕಾರ ಮಾತ್ರವಿದೆ. ಈಜಿಪ್ಟನ್ನು ಜಯಿಸಿದ, ಆ ದೇಶದ ಪ್ರಥಮ ಮುಸ್ಲಿಮ್ ಗವರ್ನರ್ ಆದ ಅಮ್ರ್ ಬಿನ್ ಆಸ್‌ರ ಮಗ ಓರ್ವ ಸಾಮಾನ್ಯ ಪ್ರಜೆಗೆ ಅನ್ಯಾಯವಾಗಿ ಹೊಡೆದ ದೂರು ದೊರೆತಾಗ ಖಲೀಫಾ ಉಮರುಲ್ ಫಾರೂಕ್ ಪ್ರತೀಕಾರ ತೀರಿಸಿದ ಬಳಿಕ ಗವರ್ನರ್‌ರೊಂದಿಗೆ ಹೀಗೆ ಕೇಳಿದರು: 'ಅಮ್ರ್, ನೀವು ಜನರನ್ನು ಗುಲಾಮರನ್ನಾಗಿಸಲು ಪ್ರಾರಂಭಿಸಿದ್ದು ಯಾವಾಗ? ಅವರ ತಾಯಂದಿರು ಅವರನ್ನು ಸ್ವತಂತ್ರರಾಗಿ ಹಡೆದಿದ್ದಾರೆ.'

ಗುಲಾಮ ಸಂಸ್ಕೃತಿಯ ಕುರಿತು ಇಸ್ಲಾಮ್‌ನ ನಿಲುವು ಏನೆಂದು ಉಮರುಲ್ ಫಾರೂಕ್‌ರ ಈ ಪ್ರಶ್ನೆ ಸಂಶಯಾತೀತವಾಗಿ ಸ್ಪಷ್ಟಪಡಿಸುತ್ತದೆ. ಗುಲಾಮಗಿರಿಯನ್ನು ಸಂಪೂರ್ಣ ನಿರ್ಮೂಲನೆ ಗೊಳಿಸಬಯಸುವ ಇಸ್ಲಾಮ್ ಇತಿಹಾಸದಲ್ಲಿ ಕಂಡುಬರುವಂತಹ ಆ ನೀಚ ಸಂಪ್ರದಾಯವನ್ನು ಖಂಡಿತವಾಗಿಯೂ ಒಪ್ಪಿಕೊಳ್ಳುವುದಿಲ್ಲ.

❖❖❖❖

## 28 ಆಯುಧ ಬಲದಿಂದ ಧರ್ಮಪ್ರಚಾರ

**ಭಾರತದಲ್ಲಿ ಮುಸ್ಲಿಮರಾದ ನೀವು ಅಲ್ಪಸಂಖ್ಯಾತರಾಗಿರುವುದರಿಂದ ನಮ್ಮೊಂದಿಗೆ ಜಿಹಾದ್ ನಡೆಸಲಿಲ್ಲವಲ್ಲವೇ? ಇಸ್ಲಾಮ್ ಕಾಫಿರರ ವಿರುದ್ಧ ಜಿಹಾದ್ ನಡೆಸಬೇಕೆಂದು ಆದೇಶಿಸುತ್ತದಲ್ಲವೇ?**

ಭಾರತದಲ್ಲಿ ಮುಸ್ಲಿಮರು ಜಿಹಾದ್ ನಡೆಸುತ್ತಿಲ್ಲವೆಂಬ ಭಾವನೆ ಸರಿಯಲ್ಲ, ಏಕೆಂದರೆ ಪ್ರತಿಯೊಬ್ಬ ಮುಸಲ್ಮಾನನ ಮೇಲೂ ಜಿಹಾದ್ ಕಡ್ಡಾಯವಾಗಿದೆ. ಆದರಿಂದ ದೂರಸರಿಯಲು ಯಾರಿಗೂ ಅನುಮತಿಯಿಲ್ಲ, ನರಕದಿಂದ ಮುಕ್ತಿಗೆ ಮತ್ತು ಸ್ವರ್ಗ ಪ್ರವೇಶಕ್ಕೆ ಅದು ಅನಿವಾರ್ಯವಾಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ: 'ಸತ್ಯವಿಶ್ವಾಸಿಗಳೇ, ನಿಮ್ಮನ್ನು ವೇದನಾಯುಕ್ತ ಯಾತನೆಯಿಂದ ರಕ್ಷಿಸುವಂತಹ ಒಂದು ವ್ಯಾಪಾರವನ್ನು ನಾವು ನಿಮಗೆ ತೋರಿಸಿ ಕೊಡಲೇ? ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮೇಲೆ ವಿಶ್ವಾಸವಿರಿಸಿರಿ ಮತ್ತು ನಿಮ್ಮ ಸಂಪತ್ತುಗಳಿಂದಲೂ, ಜೀವನಗಳಿಂದಲೂ ಅಲ್ಲಾಹನ ಮಾರ್ಗದಲ್ಲಿ ಹೋರಾಡಿರಿ. ನೀವು ಅರಿಯುವವರಾಗಿದ್ದರೆ, ನಿಮ್ಮ ಪಾಲಿಗೆ ಇದೇ ಉತ್ತಮವಾಗಿದೆ.'(ಪವಿತ್ರ ಕುರ್‌ಆನ್ 61:10–11)

ಅಲ್ಲಾಹನ ಮಾರ್ಗದಲ್ಲಿ ಹೋರಾಟ ನಡೆಸುವವರು ಮತ್ತು ಅದಕ್ಕಾಗಿ ಸಹನೆ ವಹಿಸುವವರ ಹೊರತು ಸ್ವರ್ಗ ಪ್ರವೇಶ ಸಾಧ್ಯವಲ್ಲವೆಂದು ಕುರ್‌ಆನ್ ಹೇಳುತ್ತದೆ. ಮುಸ್ಲಿಮ್ ಸಮುದಾಯವನ್ನು ನಿಯೋಗಿಸಲಾದ ಉದ್ದೇಶವೇ ಜಿಹಾದ್ ನಿರ್ವಹಿಸಲಿಕ್ಕಾಗಿದೆ: 'ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕಾದ ರೀತಿಯಲ್ಲಿ ಹೋರಾಡಿರಿ. ಅವನು ತನ್ನ ಕಾರ್ಯಕ್ಕಾಗಿ ನಿಮ್ಮನ್ನು ಆರಿಸಿಕೊಂಡಿರುತ್ತಾನೆ. ಮತ್ತು ಧರ್ಮದಲ್ಲಿ ನಿಮಗೇನೂ ಸಂಕೀರ್ಣತೆಯನ್ನು ಇರಿಸಿಲ್ಲ.' (ಪವಿತ್ರ ಕುರ್‌ಆನ್ 22:78)

ಜಿಹಾದ್ ಯಾರದಾದರೂ ವಿರುದ್ಧವೆಂದು ಭಾವಿಸಿದರೆ ಅದು ಖಂಡಿತಾ ಅಸಂಬದ್ಧವಾಗಿದೆ. ಅದು ಸತ್ಯ ಸಂಸ್ಥಾಪನೆಗಾಗಿ ನಡೆಸುವ ನಿರಂತರ ಪ್ರಯತ್ನವಾಗಿದೆ. ಬಯಕೆಗಳನ್ನು ಕಡಿತಗೊಳಿಸಿ, ಇಚ್ಛೆಗಳನ್ನು ನಿಯಂತ್ರಿಸಿ, ಆಗ್ರಹಗಳ ಮೇಲೆ ಆಧಿಪತ್ಯ ಸ್ಥಾಪಿಸಿ, ಬದುಕನ್ನು ಸಂಪೂರ್ಣವಾಗಿ ದೇವಾದೇಶಕ್ಕೆ ಬದ್ಧಗೊಳಿಸಿ ನೈಜ ಸತ್ಯವಿಶ್ವಾಸಿಯಾಗಲು ಪಡುವ ಪರಿಶ್ರಮವೆಲ್ಲವೂ ಜಿಹಾದ್ ಆಗಿದೆ. ಯುದ್ಧರಂಗದಿಂದ ಮರಳಿ ಬರುವಾಗ ಪ್ರವಾದಿವರ್ಯರು ಹೇಳಿದರು: 'ನಾವು ಅತಿ ಸಣ್ಣ ಜಿಹಾದ್‌ನಿಂದ ಅತ್ಯಂತ ದೊಡ್ಡ ಜಿಹಾದ್‌ನೆಡೆಗೆ ಮರಳಿಬಂದಿದ್ದೇವೆ.' ಆಗ ಪ್ರವಾದಿಯ ಅನುಯಾಯಿಗಳು ಕೇಳುತ್ತಾರೆ.

ಅತ್ಯಂತ ದೊಡ್ಡ ಜಿಹಾದ್ ಯಾವುದು?' ಪ್ರವಾದಿ(ಸ) ಹೇಳುತ್ತಾರೆ: 'ದೇಹೇಚ್ಛೆಯೊಂದಿಗಿನ ಹೋರಾಟವು ಅತ್ಯಂತ ದೊಡ್ಡ ಜಿಹಾದ್ ಆಗಿದೆ.'

ಕುಟುಂಬದ ಇಸ್ಲಾಮೀಕರಣಕ್ಕೆ ನಡೆಸುವ ಶಿಕ್ಷಣ, ಸಂಸ್ಕರಣೆ, ಸದುಪದೇಶ ಎಲ್ಲವೂ ಜಿಹಾದ್‌ನಲ್ಲಿ ಒಳಗೊಂಡಿದೆ. ಸತ್ಯದ ಸಂಸ್ಥಾಪನೆ ಹಾಗೂ ಒಳಿತಿನ ಪ್ರಚಾರಕ್ಕಾಗಿ, ಧರ್ಮದ ಉತ್ಥಾನಕ್ಕಾಗಿ ನಡೆಸುವ ಭಾಷಣ, ಲೇಖನ, ಚರ್ಚೆ, ಸಂಭಾಷಣೆ, ಶಿಕ್ಷಣ ಪ್ರಚಾರವೆಲ್ಲವೂ ಇದರಲ್ಲಿ  ಸೇರಿಕೊಂಡಿದೆ. ಸಮುದಾಯದ ಉನ್ನತಿಯನ್ನು ಗಮನದಲ್ಲಿರಿಸಿ ವೈಜ್ಞಾನಿಕ, ಆರ್ಥಿಕ, ಸಾಂಕೇತಿಕ, ಸಾಂಸ್ಕೃತಿಕ, ಕಲೆ, ಸಾಹಿತ್ಯ ರಂಗಗಳಲ್ಲಿ ಮಾಡುವ ಕರ್ಮಗಳು ಜಿಹಾದ್ ನೊಂದಿಗೆ ಸೇರುತ್ತದೆ. ದೇವ ಧರ್ಮದ ಸಂಸ್ಥಾಪನೆಗಾಗಿ ನಡೆಸುವ ಪ್ರತಿಯೊಂದು ಪ್ರಯತ್ನವೂ ದೇವಮಾರ್ಗದ ಜಿಹಾದ್ ಆಗಿದೆ. ಜಿಹಾದ್ ಎಂಬುದು ಒಂದು ಸಮಗ್ರ ಪದವಾಗಿದೆ. ಬೌದ್ಧಿಕ ಹಾಗೂ ವೈಚಾರಿಕ ಕ್ರಾಂತಿ ಉಂಟಾಗಲು, ಜನರ ಭಾವನೆ, ಆಲೋಚನೆ, ಇಚ್ಛೆಗಳನ್ನು ಸಂಸ್ಕರಿಸಲು, ಅವರ ದೃಷ್ಟಿಕೋನವನ್ನು ದೇವನ ಸನ್ಮಾರ್ಗದೆಡೆಗೆ ತಿರುಗಿಸಲು ನಡೆಸಲಾಗುವ ಮಾತುಕತೆ ಹಾಗೂ ಲಿಖಿತವಾದ ವಿಧಾನಗಳಿಂದ ಆರಂಭಗೊಂಡು, ಶತ್ರುವಿನೊಂದಿಗೆ ಆಯುಧ ಹೋರಾಟ ನಡೆಸುವವರೆಗೆ ಅದು ಮುಂದುವರಿಯುತ್ತದೆ. ವ್ಯಕ್ತಿಯು ತನ್ನ ಮಾನ, ಸ್ವಾಭಿಮಾನ, ಪ್ರಾಣ, ಸೊತ್ತುಗಳನ್ನು ರಕ್ಷಿಸಲು ಹೋರಾಡುವುದು ಜಿಹಾದ್ ಆಗಿದೆ. ಆ ಮಾರ್ಗದ ಮರಣವು ದೇವಮಾರ್ಗದಲ್ಲಿ ಹುತಾತ್ಮತೆಯನ್ನು ದಯಪಾಲಿಸುತ್ತದೆ.

ಆದ್ದರಿಂದ ಮುಸ್ಲಿಮರು ಅಲ್ಪಸಂಖ್ಯಾತರಾದರೂ ಬಹುಸಂಖ್ಯಿತರಾದರೂ ಜಿಹಾದ್ ಕಡ್ಡಾಯವಾಗಿದೆ. ಪರಿಸ್ಥಿತಿಗೆ ಅನುಗುಣವಾಗಿ ಅದರ ವಿಧಾನಗಳಲ್ಲಿ ವ್ಯತ್ಯಾಸವಿರುತ್ತದೆ. ಅದು ಮುಸ್ಲಿಮೇತರರ ವಿರುದ್ಧ ಶಸ್ತ್ರಾಸ್ತ್ರ ಹೋರಾಟವೋ, ಯುದ್ಧವೋ ಅಲ್ಲ. ದೇವಮಾರ್ಗದಲ್ಲಿ ತ್ಯಾಗ ಮತ್ತು ಪರಿಶ್ರಮವಾಗಿದೆ.

ಪ್ರಶ್ನೆಯಲ್ಲಿ ಕೇಳಿರುವಂತೆ ಮುಸ್ಲಿಮೇತರರೆಲ್ಲಾ ಕಾಫಿರ್‌ಗಳಲ್ಲ 'ಕಾಫಿರ್' ಎಂಬುದು ಇಸ್ಲಾಮಿನ ಸಾಂಕೇತಿಕ ರೂಪವಾಗಿದೆ. ಸತ್ಯ ಹಾಗೂ ಸನ್ಮಾರ್ಗವನ್ನು ಸಂಪೂರ್ಣ ಅರ್ಥೈಸಿಕೊಂಡ ಬಳಿಕವೂ ಪ್ರಜ್ಞಾಪೂರ್ವಕವಾಗಿ ಅದನ್ನು ನಿರಾಕರಿಸುವವರನ್ನು ಕಾಫಿರ್ ಎನ್ನಲಾಗುತ್ತದೆ. ಕಾಫಿರ್‌ಗಳೊಂದಿಗೂ ಅನಿವಾರ್ಯ ಕಾರಣಗಳಿಲ್ಲದೆ, ಶಸ್ತ್ರಾಸ್ತ್ರ ಹೋರಾಟ ಸಲ್ಲದೆಂದು ಇಸ್ಲಾಮ್ ಆಜ್ಞಾಪಿಸುತ್ತದೆ. ಮುಸ್ಲಿಮ್ ಬಾಹುಳ್ಯವಿರುವ ಅಥವಾ ಅಲ್ಪಸಂಖ್ಯಿತರಾಗಿರುವ ಸ್ಥಳದಲ್ಲಾದರೂ ಸರಿ.

ಮುಹಮ್ಮದರು ಹಲವಾರು ಯುದ್ಧವನ್ನು ನಡೆಸಿಲ್ಲವೇ? ಇಸ್ಲಾಮಿನ ಧರ್ಮ ಪ್ರಚಾರದಲ್ಲಿ ಶಸ್ತ್ರಾಸ್ತ್ರ ಹೋರಾಟವು ಪ್ರಮುಖ ಪಾತ್ರ ವಹಿಸಿದೆಯಲ್ಲವೇ ?

ಪ್ರವಾದಿ ಮುಹಮ್ಮದ್(ಸ)ರು ಪ್ರವಾದಿತ್ವದ ಬಳಿಕ ಸುದೀರ್ಘವಾದ 13 ವರ್ಷ ಮಕ್ಕಾದಲ್ಲಿ ಇಸ್ಲಾಮೀ ಪ್ರಚಾರ ನಡೆಸಿದರು. ಆ ಕಾಲದಲ್ಲಿ ವಿರೋಧಿಗಳು ಪ್ರವಾದಿಯವರನ್ನು ಹಾಗೂ ಅವರ ಅನುಯಾಯಿಗಳನ್ನು ತೀವ್ರವಾಗಿ ಹಿಂಸಿಸಿದರು. ಅಸಹನೀಯವಾದ

ಬೈಗುಳ, ಊರಿನಿಂದ ಬಹಿಷ್ಕಾರ ನಡೆಯಿತು. ಆಗಲೂ ಪ್ರವಾದಿಯವರು ಅವರ ವಿರುದ್ಧ ಪ್ರತೀಕಾರಕ್ಕೆ ಪ್ರಯತ್ನಿಸಲಿಲ್ಲ. ಅನುಯಾಯಿಗಳು ಪ್ರತೀಕಾರವೆಸಗಲು ಅನುಮತಿ ಕೇಳಿದರೂ ಪ್ರವಾದಿವರ್ಯರು ಒಪ್ಪಲಿಲ್ಲ. 'ಕೈಗಳನ್ನು ತಡೆದಿರಿಸಿ, ನಮಾಝ್ ನಿಷ್ಠೆಯಿಂದ ಪಾಲಿಸಿ, ಝಕಾತ್ ನೀಡಿ' ಎಂಬುದು ಆಗ ದೇವಾಜ್ಞೆಯಾಗಿತ್ತು.

ಮಕ್ಕಾದಲ್ಲಿ ಬದುಕು ಅಸಹನೀಯವಾದಾಗ ಪ್ರವಾದಿ ಮತ್ತು ಅನುಯಾಯಿಗಳು ಮದೀನಾದಲ್ಲಿ ಅಭಯ ಪಡೆದರು. ಮದೀನಾದಲ್ಲಿ ಸ್ಥಾಪಿತವಾದ ಇಸ್ಲಾಮೀ ಸಮೂಹ ಹಾಗು ರಾಷ್ಟ್ರದ ವಿರುದ್ಧ ಶತ್ರುಗಳು ಅಕ್ರಮಗಳನ್ನು ಮುಂದುವರಿಸಿದರು. ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮುಸ್ಲಿಮರಿಗೆ ಅದರ ವಿರುದ್ಧ ಹೋರಾಡುವ ಅನುಮತಿ ಲಭಿಸಿತು. ಅಲ್ಲಾಹನು ಹೇಳಿದನು: **'ನಿಶ್ಚಯವಾಗಿಯೂ ಅಲ್ಲಾಹನು ಸತ್ಯವಿಶ್ವಾಸಿಗಳ ಪರವಾಗಿ ರಕ್ಷಣೆ ಮಾಡುತ್ತಾನೆ. ಅಲ್ಲಾಹನು ಯಾವುದೇ ವಿಶ್ವಾಸಘಾತುಕ ಕೃತಘ್ನನನ್ನು ಮೆಚ್ಚುವುದಿಲ್ಲ. ಯಾರ ವಿರುದ್ಧ ಯುದ್ಧ ನಡೆಸಲಾಗುತ್ತಿದೆಯೋ ಅವರಿಗೆ ಅನುಮತಿ ನೀಡಲಾಗಿದೆ. ಏಕೆಂದರೆ ಅವರು ಮರ್ದಿತರು ಮತ್ತು ನಿಶ್ಚಯವಾಗಿಯೂ ಅಲ್ಲಾಹನು ಅವರಿಗೆ ಸಹಾಯ ಮಾಡಲು ಸಮರ್ಥನು. 'ನಮ್ಮ ಪ್ರಭು ಅಲ್ಲಾಹ್' ಎಂದಿಷ್ಟೇ ಹೇಳಿದ ತಪ್ಪಿಗಾಗಿ ತಮ್ಮ ಮನೆಗಳಿಂದ ಅನ್ಯಾಯವಾಗಿ ಹೊರಹಾಕಲ್ಪಟ್ಟವರು. ಅಲ್ಲಾಹನು ಜನರಲ್ಲಿ ಕೆಲವರನ್ನು ಬೇರೆ ಕೆಲವರ ಮೂಲಕ ನೀಗಿಸದಿರುತ್ತಿದ್ದರೆ ಅಲ್ಲಾಹನ ನಾಮವನ್ನು ಅತಿ ಹೆಚ್ಚಾಗಿ ಸ್ಮರಿಸಲಾಗುತ್ತಿರುವ ಆಶ್ರಮಗಳು, ಇಗರ್ಜಿಗಳು, ಯಹೂದಿಯರ ಆರಾಧನಾಲಯಗಳು, ಮಸೀದಿಗಳು ಧ್ವಂಸಗೊಳ್ಳುತ್ತಿದ್ದವು. ಯಾರು ಅಲ್ಲಾಹನಿಗೆ ಸಹಾಯ ಮಾಡುವರೋ ಅವರಿಗೆ ಅವನು ಖಂಡಿತ ಸಹಾಯ ಮಾಡುವನು. ಅಲ್ಲಾಹನು ಮಹಾ ಶಕ್ತಿವಂತನೂ ಪ್ರಬಲನೂ ಆಗಿರುತ್ತಾನೆ.' (ಪವಿತ್ರ ಕುರ್‌ಆನ್ 22:38-40)**

ಎಲ್ಲಾ ಧರ್ಮೀಯರ ಆರಾಧನಾ ಸ್ವಾತಂತ್ರ್ಯವನ್ನು ಸಂರಕ್ಷಿಸಲು ಇಸ್ಲಾಮ್ ಯುದ್ಧಕ್ಕೆ ಅನುಮತಿ ನೀಡಿದೆಯೆಂದು ಈ ಕುರ್‌ಆನ್ ವಚನವು ಸಂದೇಹಾತೀತವಾಗಿ ಸ್ಪಷ್ಟಪಡಿಸುತ್ತದೆ.

ಅತಿಕ್ರಮವೆಸಗದವರ ಮೇಲೆ ಆಕ್ರಮಣವೆಸಗಲು ಇಸ್ಲಾಮ್ ಅನುಮತಿ ನೀಡುವುದಿಲ್ಲ. ಎಂತಹ ಸಂದರ್ಭಗಳಲ್ಲಿ ಯುದ್ಧಕ್ಕೆ ಅನುಮತಿಯನ್ನೂ ಆದೇಶಗಳನ್ನೂ ನೀಡಲಾಯಿತೆಂದು ಸ್ಪಷ್ಟಪಡಿಸುವ ಹಲವಾರು ಕುರ್‌ಆನ್ ವಚನಗಳಿವೆ. ಕೆಲವನ್ನು ಇಲ್ಲಿ ವಿವರಿಸುತ್ತೇನೆ.

**'ನಿಮ್ಮೊಡನೆ ಯುದ್ಧ ಮಾಡುವವರೊಂದಿಗೆ ನೀವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ. ಆದರೆ ಅತಿಕ್ರಮಿಸಬೇಡಿರಿ. ಅಲ್ಲಾಹನು ಅತಿಕ್ರಮಿಸುವವರನ್ನು ಮೆಚ್ಚುವುದಿಲ್ಲ. ಅವರೊಡನೆ ಹೋರಾಟ ನಡೆಸಬೇಕಾದ ಸಂದರ್ಭ ಬಂದಾಗಲೆಲ್ಲ ಹೋರಾಟ ನಡೆಸಿರಿ ಮತ್ತು ಅವರು ನಿಮ್ಮನ್ನು ಹೊರಕ್ಕಟ್ಟಿದಲ್ಲಿಂದ ನೀವು ಅವನ್ನು ಹೊರಕಟ್ಟಿರಿ ಏಕೆಂದರೆ ಹತ್ಯೆಯು ಕೆಟ್ಟದಾಗಿದ್ದರೂ ಕ್ಷೋಭೆಯು (ಫಿತ್ನ) ಅದಕ್ಕಿಂತಲೂ ಕೆಟ್ಟದಾಗಿದೆ. ಅವರು 'ಮಸ್ಜಿದುಲ್ ಹರಾಮ್'ನ ಬಳಿ ನಿಮ್ಮೊಡನೆ ಹೋರಾಡದಿದ್ದರೆ ನೀವು ಹೋರಾಡಬೇಡಿರಿ, ಆದರೆ ಅಲ್ಲಿಯೂ ಅವರು ನಿಮ್ಮೊಡನೆ ಹೋರಾಡಿದರೆ, ನೀವು ಅವರನ್ನು ನಿರ್ದಾಕ್ಷಿಣ್ಯವಾಗಿ ವಧಿಸಿರಿ. ಇಂತಹ**

ತ್ಯನಿಷೇಧಿಗಳಿಗೆ ಇದೇ ಪ್ರತಿಫಲ. ಅನಂತರ ಅವರು ಹಿಂಜರಿದರೆ ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆಂಬುದನ್ನು ನೀವು ಅರಿತಿರಬೇಕು. ಕ್ಷೋಭೆಯು ಸಂಪೂರ್ಣ ಅಳಿದು ಹೋಗುವವರೆಗೂ ಧರ್ಮವು ಪರಿಪೂರ್ಣವಾಗಿ ಅಲ್ಲಾಹನಿಗೇ ಆಗುವವರೆಗೂ ನೀವು ಅವರ ವಿರುದ್ಧ ಹೋರಾಡಿರಿ ಅನಂತರ ಅವರು ಹಿಮ್ಮೆಟ್ಟಿದರೆ ಆಕ್ರಮಿಗಳ ಹೊರತಾ ಇನ್ನಾರ ಮೇಲೂ ಕೈಯೆತ್ತಬಾರದೆಂಬುದನ್ನು ನೀವು ತಿಳಿದಿರಬೇಕು.' (ಪವಿತ್ರ ಕುರ್‌ಆನ್ :2)

'ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ಕೆರಳಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವ ಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ. ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಅರಿಯುವವನಾಗಿದ್ದಾನೆ.' (ಪವಿತ್ರ ಕುರ್‌ಆನ್5:8)

ನಿಮ್ಮೊಡನೆ ಯುದ್ಧಕ್ಕೆ ಸಿದ್ಧರಾಗದವರೊಡನೆ ಸ್ವೀಕರಿಸಬೇಕಾದ ನಿಲುವಿನ ಕುರಿತು ಪವಿತ್ರ ಕುರ್‌ಆನ್ ಬಹಳ ಸ್ಪಷ್ಟವಾಗಿ ವಿವರಿಸಿದೆ: 'ಧರ್ಮದ ವಿಷಯದಲ್ಲಿ ನಿಮ್ಮೊಡನೆ ಯುದ್ಧ ಮಾಡಿರದ ಹಾಗು ನಿಮ್ಮನ್ನು ನಿಮ್ಮ ಮನೆಯಿಂದ ಹೊರಹಾಕಿರದವರೊಂದಿಗೆ ಸೌಜನ್ಯ ಹಾಗೂ ನ್ಯಾಯದಿಂದ ವರ್ತಿಸುವುದರಿಂದ ಅಲ್ಲಾಹನು ನಿಮ್ಮನ್ನು ತಡೆಯುವುದಿಲ್ಲ, ಅಲ್ಲಾಹನು ನ್ಯಾಯಪಾಲನೆ ಮಾಡುವವರನ್ನು ಪ್ರೀತಿಸುತ್ತಾನೆ. ನೀವು ಧರ್ಮದ ವಿಷಯದಲ್ಲಿ ನಿಮ್ಮ ವಿರುದ್ಧ ಯುದ್ಧ ಮಾಡಿರುವ ಹಾಗೂ ನಿಮ್ಮನ್ನು ನಿಮ್ಮ ಮನೆಗಳಿಂದ ಹೊರಹಾಕಿರುವ ಮತ್ತು ನಿಮ್ಮನ್ನು ಹೊರಹಾಕುವ ವಿಷಯದಲ್ಲಿ ಪರಸ್ಪರ ಸಹಕರಿಸಿರುವ ಜನರೊಂದಿಗೆ ಸ್ನೇಹ ಬೆಳೆಸುವುದರಿಂದ ಮಾತ್ರ ಅಲ್ಲಾಹನು ನಿಮ್ಮನ್ನು ತಡೆಯುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುವವರೇ ಆಕ್ರಮಿಗಳು.' (ಪವಿತ್ರ ಕುರ್‌ಆನ್60:8-9)

ಪವಿತ್ರ ಕುರ್‌ಆನಿನ ಆಜ್ಞೆಗಳಂತೆ ಕಾರ್ಯನಿರತರಾದ ಪ್ರವಾದಿವರ್ಯರು ಇಸ್ಲಾಮ್ ಮತ್ತು ಮುಸ್ಲಿಮರನ್ನು ಆಕ್ರಮಿಸಿದವರೊಂದಿಗೆ ಮತ್ತು ತಮ್ಮೊಡನೆ ಯುದ್ಧ ಮಾಡಿದವರೊಂದಿಗೆ ಮಾತ್ರ ಹೋರಾಡಿದ್ದಾರೆ. ಪ್ರವಾದಿಯವರ ಕಾಲದಲ್ಲಿ ಸುಮಾರು ಎಪ್ಪತ್ತೊಂದು ಹೋರಾಟಗಳು ನಡೆದಿವೆ. ಅದರಲ್ಲಿ 27ರಲ್ಲಿ ಪ್ರವಾದಿಯವರು ಸ್ವತಃ ಹೋರಾಟ ನಡೆಸಿದ್ದಾರೆ. ಉಳಿದ 44ರಲ್ಲಿ ಅನುಯಾಯಿ ತಂಡಗಳು ಹೋರಾಟ ನಡೆಸಿತ್ತು. ಒಟ್ಟು 81 ಯುದ್ಧಗಳಿಂದ 1018 ಜನರು ಸಾವನ್ನಪ್ಪಿದ್ದರು. 259 ಮುಸ್ಲಿಮರು ಮತ್ತು 759 ಶತ್ರುಗಳ ಅಂತ್ಯವಾಗಿತ್ತು. ಅತ್ಯಂತ ಅನಿವಾರ್ಯ ಸಂದರ್ಭಗಳಲ್ಲಿ ಯುದ್ಧವನ್ನು ನಡೆಸಿದ ಪ್ರವಾದಿಯವರು ಸಾಮೂಹಿಕ ಹತ್ಯಾಕಾಂಡಕ್ಕೆ ಶ್ರಮಿಸಲಿಲ್ಲವೆಂಬುದು ಈ ಅಂಕಿ ಅಂಶದಿಂದ ಸ್ಪಷ್ಟವಾಗುತ್ತದೆ.

ಮರ್ದಿತರ ಬಿಡುಗಡೆಗಾಗಿ ಮರ್ದಕರೊಂದಿಗೆ ಹೋರಾಡಬೇಕೆಂದು ಇಸ್ಲಾಮ್ ತನ್ನ ಅನುಯಾಯಿಗಳಿಗೆ ಆದೇಶಿಸಿದೆ: 'ಓ, ನಮ್ಮ ಪ್ರಭು, ಆಕ್ರಮಿಗಳು ವಾಸಿಸುವ ಈ ನಾಡಿನಿಂದ ನಮ್ಮನ್ನು ಹೊರತೆಗೆ, ನೀನು ನಿನ್ನ ಕಡೆಯಿಂದ ನಮಗೊಬ್ಬ ಮೇಲ್ವಿಚಾರಕನನ್ನು

ಮತ್ತು ಒಬ್ಬ ಸಹಾಯಕನನ್ನು ನಿಯೋಜಿಸು' ಎಂದು ಮೊರೆಯಿಡುತ್ತಿರುವ ಮರ್ದನಕ್ಕೊಳಗಾ ಪುರುಷರು-ಸ್ತ್ರೀಯರು ಮತ್ತು ಮಕ್ಕಳಿಗಾಗಿ ನೀವು ಅಲ್ಲಾಹನ ಮಾರ್ಗದಲ್ಲಿ ಯು ಮಾಡದಿರಲು ಕಾರಣವೇನು?' (ಪವಿತ್ರ ಕುರ್‌ಆನ್ 4:75)

ಈ ಆದೇಶದಿಂದ ಮುಸ್ಲಿಮರು ರೋಮ್-ಪರ್ಶಿಯಾ ಸಾಮ್ರಾಜ್ಯಗಳಲ್ಲಿ ಬಂಧಿತರಾ ಗುಲಾಮರಾಗಿ ನರಕಯಾತನೆ ಅನುಭವಿಸಿದ ವ್ಯಕ್ತಿಗಳ ಬಿಡುಗಡೆಗಾಗಿ ಪ್ರಯತ್ನಿಸಿದರು ಇದರಿಂದ ಆ ಬೃಹತ್ ಸಾಮ್ರಾಜ್ಯ ಶಕ್ತಿಗಳು ಇಸ್ಲಾಮ್‌ನೊಂದಿಗೆ ಸಂಘರ್ಷ ನಡೆಸಿತು. ಅವುಗಳ ಪರಾಜಯಗೊಂಡು ನೆಲಕಚ್ಚಿಸಿದಾಗ ವಸಾಹತುಶಾಹಿಗಳಾಗಿದ್ದ ಇರಾನ್, ಇರಾಕ್, ಸಿರಿಯ ಜೋರ್ಡಾನ್, ಫೆಲೆಸ್ತೀನ್, ಈಜಿಪ್ಟ್‌ನಂತಹ ದೇಶಗಳು ಸ್ವತಂತ್ರಗೊಂಡು, ಇಸ್ಲಾಮೀ ಸಾಮ್ರಾಜ್ಯ ಭಾಗಗಳಾದವು. ರೋಮ್ ಮತ್ತು ಪರ್ಶಿಯನ್ ಸಾಮ್ರಾಜ್ಯಗಳಿಂದ ರೋಸಿಹೋಗಿದ್ದ ಆ ರಾಷ್ಟ್ರ ಜನರು ಮುಸ್ಲಿಮರ ಆಗಮನವನ್ನು ಸಂತೋಷದಿಂದ ಸ್ವಾಗತಿಸಿದರು. ಹೀಗೆ ಇಸ್ಲಾಮಿಗೆ ರಾಷ್ಟ್ರ ಭಾಗವಾದ ಅಲ್ಲಿನ ನಿವಾಸಿಗಗಳನ್ನು ಧರ್ಮಬದಲಾಯಿಸಲು ಮುಸ್ಲಿಮರು ನಿರ್ಬಂಧಿಸಲಿಲ್ಲ ಅದಕ್ಕೆ ಇಸ್ಲಾಮ್ ಅನುಮತಿಯನ್ನು ನೀಡುವುದಿಲ್ಲ.

ಇಸ್ಲಾಮಿನಿಂದ ಆಕರ್ಷಿತರಾಗಿ ತಮ್ಮಿಚ್ಛೆಯಿಂದ ಇಸ್ಲಾಮ್ ಸ್ವೀಕರಿಸಲು ಸಿದ್ಧರಾಗಿದ್ದವರು ಮುಸ್ಲಿಮರಾದರು. ಉಳಿದವರು ಪೂರ್ವಧರ್ಮದಲ್ಲೇ ಮುಂದುವರಿದರು. ಆದ್ದರಿಂದಲೆ ಇಸ್ಲಾಮಿನ ಪ್ರಚಾರ ಆಯುಧ ಬಲದಿಂದ ಆಗಿಲ್ಲ, ನಿಷ್ಪಕ್ಷಪಾತಿಗಳಾದ ಇತಿಹಾಸಕಾರರು ಇದನ್ನು ಸ್ಪಷ್ಟಪಡಿಸಿದ್ದಾರೆ. ಇಸ್ಲಾಮ್ ಖಡ್ಗದಿಂದ ಪ್ರಚಾರವಾಗಿದೆಯೆಂಬ ಸುಳ್ಳಾರೋಪವನ ಖಂಡಿಸಿ ಸರ್ ಥಾಮಸ್ ಆರ್ನಲ್ಡ್ ಒಂದು ಬೃಹತ್ ಗ್ರಂಥವನ್ನು ರಚಿಸಿದ್ದರು. ಅವ 'ಇಸ್ಲಾಮ್: ಸಂದೇಶ ಮತ್ತು ಪ್ರಸಾರ' ಎಂಬ ಕೃತಿಯು ವಿವಿಧ ರಾಷ್ಟ್ರಗಳಲ್ಲಿ ಇಸ್ಲಾಮಿ ಪ್ರಚಾರದ ಸಂಧರ್ಭವನ್ನು ವಿವರವಾಗಿ ತಿಳಿಸಿ, ಪಾಶ್ಚಾತ್ಯರ ಆರೋಪಗಳು ಆಧಾ ರಹಿತವೆಂದು ಸಮರ್ಥಿಸುತ್ತದೆ. ಮಧ್ಯ ಪೌರ್ವಾತ್ಯ ದೇಶಗಳ ಇಸ್ಲಾಮ್ ಧರ್ಮ ಪ್ರಚಾರವನ್ನು ವಿವರಿಸುತ್ತಾ ಆರ್ನಲ್ಡ್ ಬರೆಯುತ್ತಾರೆ: 'ಮೇಲೆ ತಿಳಿಸಲಾದ ವಿವರಣೆಗಳಿಂ ಕ್ರೈಸ್ತಗೋತ್ರಗಳು ತಮ್ಮಿಚ್ಛೆಯಂತೆ ಇಸ್ಲಾಮ್ ಸ್ವೀಕರಿಸಿವೆ ಎಂದು ನಾವು ಊಹಿಸಬಹುದು ವಿಜಯಿಗಳಾದ ಮುಸ್ಲಿಮರು ಹಾಗೂ ಮುಂದಿನ ತಲೆಮಾರಿನ ಮುಸ್ಲಿಮರು ಅವರೊಂದಿ ತೋರಿದ ಸಹಿಷ್ಣತೆಯು ಇದಕ್ಕೆ ಪ್ರೇರೇಪಿಸಿತು. ಮಹಮ್ಮದೀಯರ ನಡುವೆ ಈಗಲೂ ಬದುಕುತ್ತಿರುವ ಕ್ರೈಸ್ತ ಅರಬರು ಸಹಿಷ್ಣತೆಯ ಜೀವಂತ ಸಾಕ್ಷಿಗಳಾಗಿದ್ದಾರೆ.' (ಪುಟ 64) ಅವರು ಮುಂದುವರಿಯುತ್ತಾರೆ: 'ಮುಸ್ಲಿಮರ ಆಡಳಿತದ ಪ್ರಾರಂಭ ಕಾಲದಲ್ಲಿ ಅವರು ಕ್ರೈಸ್ತರೊಂದಿ ತೋರಿದ ಸಹಿಷ್ಣತೆಯ ಆಧಾರದಲ್ಲಿ ಇಸ್ಲಾಮ್‌ನ ಪ್ರಚಾರ ಖಡ್ಗದಿಂದ ನಡೆಯಿತು ಎಂ ವಾದವು ಸರಿಯೆನಿಸುವುದಿಲ್ಲ.' (ಪುಟ:83)

ಭಾರತದ ಇಸ್ಲಾಮ್ ಧರ್ಮದ ಪ್ರಚಾರದ ಕುರಿತು ಡಾ|| ಈಶ್ವರಿ ಪ್ರಸಾದ್ ಹೇಳುತ್ತಾರೆ ಉದ್ಯೋಗ ಭಡ್ತಿ ಹಾಗೂ ಪ್ಯೂಡಲ್ ಸ್ಥಾನಮಾನಗಳಿಗಾಗಿ ಹಾತೊರೆಯುತ್ತಿದ್ದವರಲ್ಲಿ ಹಲವರು

ಇಸ್ಲಾಮ್ ಸ್ವೀಕರಿಸಿದರು. ಅವರಲ್ಲಿ ಕೆಳಜಾತಿಯ ವ್ಯಕ್ತಿಗಳೇ ಅಧಿಕವಾಗಿದ್ದರು. ಇದಕ್ಕೆ ಮುಖ್ಯವಾಗಿ ಹಿಂದೂ ಧರ್ಮದಲ್ಲಿದ್ದ ಅತಿಕ್ರೂರವಾದ ಜಾತಿ ವ್ಯವಸ್ಥೆ ಕಾರಣವಾಗಿತ್ತು. ಅವರಿಗೆ ಮೃಗಕ್ಕಿಂತಲೂ ಕೆಳಗಿನ ಸ್ಥಾನವನ್ನು ನೀಡಲಾಗಿತ್ತು. ಇಸ್ಲಾಮ್ ಧರ್ಮವು ಸಮಾನತೆಯನ್ನು ಪ್ರತಿಪಾದಿಸುವುದು ಕಾರಣವಾಗಿತ್ತು.' (Ram Gopal Indian Muslims A Political History P-2)

ಡಾ|| ರಾಯ್ ಚೌಧರಿ ಬರೆಯುತ್ತಾರೆ: 'ಬಂಗಾಳದ ದಮನಿಸಲ್ಪಟ್ಟ ಕೆಳವರ್ಗದ ಜನರಿಗೆ ಇಸ್ಲಾಮ್ ಸಾಂತ್ವನವಾಗಿತ್ತು. ಸವರ್ಣೀಯರ ದೌರ್ಜನ್ಯಗಳಿಗೆ ಕೊನೆಯಾಯಿತೆಂದು ಅವರಿಗೆ ಆಶ್ವಾಸವಾಯಿತು.' (ಡಾ|| ರಾಯ್ ಚೌಧರಿ, ಹಿಸ್ಟರಿ ಆಫ್ ಮುಸ್ಲಿಮ್ ರೂಲ್ ಪ್ರಸ್ತಾವನೆ-14 ಚರಿತ್ರೆವಾದಗಳು ಪುಟ 344)

ದೀರ್ಘಕಾಲ ಬಂಗಾಳದ ಸಿವಿಲ್ ಸರ್ವಿಸ್‌ನಲ್ಲಿದ್ದ ಸರ್ ಹೆನ್ರಿಕೋಟನ್ India and Home Affairs ಎಂಬ ಗ್ರಂಥದಲ್ಲಿ ಬರೆಯುತ್ತಾರೆ. 'ಬಂಗಾಳದ ಮುಸ್ಲಿಮರು ಕೆಳವರ್ಗದ ಹಿಂದುಗಳ ಸಂತಾನವಾಗಿದ್ದಾರೆ. ಸಾಮಾಜಿಕ ನ್ಯಾಯಕ್ಕಾಗಿ ಅವರ ಹಿರಿಯರು ಮತಾಂತರಗೊಂಡಿದ್ದರು.' (ಉದ್ಧರಣೆ: Ibid ಪುಟ:335)

ಹರ್ಬನ್ಸ್ ಮುಖಿಯ ಬರೆಯುತ್ತಾರೆ: 'ಮತಾಂತರ ನಡೆದ ವಿಷಯವನ್ನು ಯಾರೂ ನಿರಾಕರಿಸುವುದಿಲ್ಲ, ಹೆಚ್ಚಿನ ಜನರು ಸ್ವ ಇಚ್ಛೆಯಿಂದ ಮತಾಂತರಗೊಂಡಿದ್ದರು. ಜನರ ನಡುವೆಯೇ ಬೆರೆತು, ಅವರೊಂದಿಗೆ ಅವರದೇ ಭಾಷೆಯಲ್ಲಿ ವ್ಯವಹರಿಸಿದ ಸೂಫಿಗಳ ಪ್ರಭಾವದಿಂದ ಇದು ಸಾಧ್ಯವಾಗಿದೆ.' ( ಕೋಮುವಾದ ಮತ್ತು ಪ್ರಾಚೀನ ಭಾರತದ ಇತಿಹಾಸ ರಚನೆ,ಪುಟ-48)

ಗಾಂಧೀಜಿ ಬರೆಯುತ್ತಾರೆ: 'ಇಂದು ಮಾನವ ಸಮೂಹದ ಹೃದಯದಲ್ಲಿ ಆಧಿ ಪತ್ಯ ಸಾಧಿಸಿದ ಓರ್ವರ ಜೀವನದ ಅತ್ಯುತ್ತಮ ಗುಣಗಳನ್ನು ತಿಳಿಯಲು ನಾನು ಪ್ರಯತ್ನಿಸಿದೆ. ಆ ಕಾಲದಲ್ಲಿ ಇಸ್ಲಾಮ್ ಸಮಾಜದಲ್ಲಿ ಉನ್ನತ ಸ್ಥಾನ ಪಡೆಯಲು 'ಖಡ್ಗ ' ಕಾರಣವಲ್ಲವೆಂದು ಮನದಟ್ಟಾಯಿತು. ಪೈಗಂಬರರ ಮಾದರಿ, ಸರಳತೆ, ಉದಾತ್ತವಾದ ಆತ್ಮಸ್ಥೈರ್ಯ, ಕರಾರು ಪಾಲನೆ, ಕುಟುಂಬಿಕರು ಹಾಗೂ ಅನುಯಾಯಿಗಳೊಂದಿನ ಸಮರ್ಪಣಾಭಾವ, ನಿರ್ಭಯತೆ, ದೇವನಲ್ಲೂ ತನ್ನ ಹೊಣೆಗಾರಿಕೆಯಲ್ಲಿಯೂ ದೃಢವಿಶ್ವಾಸ ಕಾರಣವಾಗಿತ್ತೇ ವಿನಾ ಖಡ್ಗವಲ್ಲ, ಅವರ ಮುನ್ನಡಗೆ ಹಾಗೂ ಅವರ ಗುರಿಯೆಡಗಿನ ಹಾದಿಯಲ್ಲಿರುವ ಅಡೆತಡೆಗಳನ್ನು ಆ ಗುಣಗಳೇ ನಿವಾರಿಸಿತು.' (ಯಂಗ್ ಇಂಡಿಯಾ 16-9-1924)

ಪಾಶ್ಚಾತ್ಯ ಗ್ರಂಥಕರ್ತ ಮಿಸ್ಟರ್ ರಾಬರ್ಟ್ ಸೇನ್ ಬರೆಯುತ್ತಾರೆ, 'ತಮ್ಮ ಧರ್ಮದಲ್ಲಿ ಆವೇಶ ಹಾಗೂ ಇತರ ಧರ್ಮಗಳೊಂದಿಗೆ ಸಹಿಷ್ಣುತೆಯ ಚೈತನ್ಯವನ್ನು ಉಳಿಸಿಕೊಳ್ಳಲು ಮುಸ್ಲಿಮರಿಗೆ ಮಾತ್ರ ಸಾಧ್ಯವಾಯಿತು. ಅವರು ಖಡ್ಗವೆತ್ತುವುದರೊಂದಿಗೇ ಇಸ್ಲಾಮಿನಲ್ಲಿ ಆಸಕ್ತಿಯಿಲ್ಲದವರಿಗೆ ಅವರದೇ ಧರ್ಮದಲ್ಲಿ ಉಳಿಯುವ ಅನುಮತಿ ನೀಡಿದರು.'

(Civilization of Arab ಉದ್ಧರಣೆ: ಇಸ್ಲಾಮ್ ಮತ ಸಹಿಷ್ಣುತೆ, ಪುಟ-168)

ಪ್ರವಾದಿವರ್ಯರು ಅತ್ಯಂತ ಅನಿವಾರ್ಯ ಸಂದರ್ಭಗಳಲ್ಲಿ ತಮ್ಮ ವಿರುದ್ಧ ಅಕ್ರಮ ಅನ್ಯಾಯವೆಸಗಿದವರ ವಿರುದ್ಧ ಹಾಗೂ ಅನೀತಿಯನ್ನು ಕೊನೆಗೊಳಿಸುವ ಉದ್ದೇಶದಿಂದ ಮಾತ್ರ ಯುದ್ಧದಲ್ಲಿ ಭಾಗವಹಿಸಿದರೆಂದೂ, ಖಡ್ಗದಿಂದ ಇಸ್ಲಾಮ್ ಪ್ರಸಾರವಾಯಿತೆಂಬುದು ಮಿಥ್ಯಾರೋಪ ಮಾತ್ರವೆಂದೂ ನಿಷ್ಪಕ್ಷಪಾತವಾಗಿ ಅಧ್ಯಯನ ನಡೆಸುವವರಿಗೆ ಖಂಡಿತ ತಿಳಿದು ಬರುತ್ತದೆ ಎಂಬುದು ವಾಸ್ತವ.

## 29 ಇಸ್ಲಾಮೀ ರಾಷ್ಟ್ರದ ಧಾರ್ಮಿಕ ಅಲ್ಪಸಂಖ್ಯಾತರು

ಭಾರತದಲ್ಲಿ ಸರ್ವಧರ್ಮಿಯರಿಗೂ ಸಮಾನ ಅವಕಾಶವಿರಲು ಇಲ್ಲಿ ಹಿಂದೂ ಧರ್ಮೀಯರು ಬಹುಸಂಖ್ಯಾತರಾಗಿರುವುದು ಕಾರಣವಲ್ಲವೇ.? ಇಲ್ಲಿ ಮುಸ್ಲಿಮರು ಬಹು ಸಂಖ್ಯಾತರಾಗಿದ್ದರೆ ಇದೊಂದು ಇಸ್ಲಾಮೀ ರಾಷ್ಟ್ರವಾಗಿ ಮಾರ್ಪಟ್ಟು, ಇತರ ಧರ್ಮೀಯರು ಎರಡನೇ ದರ್ಜೆಯ ಪೌರರಾಗುತ್ತಿರಲಿಲ್ಲವೇ ಅಥವಾ ಇಸ್ಲಾಮ್‌ಗೆ ಬಲವಂತವಾಗಿ ಮತಾಂತರ ಕ್ಕೊಳಪಡುತ್ತಿರಲಿಲ್ಲವೇ?

ಸಮಾಜದಲ್ಲಿ ಗಾಢವಾಗಿ ಬೇರೂರಿರುವ ತಪ್ಪುಕಲ್ಪನೆಗಳೇ ಇಂತಹ ಪ್ರಶ್ನೆಗಳಿಗೆ ಕಾರಣ. ಮುಸ್ಲಿಮರು ಬಹುಸಂಖ್ಯಾತರಾಗಿರುವ ರಾಷ್ಟ್ರಗಳು ಧರ್ಮಾಧಾರಿತ ಇಸ್ಲಾಮೀ ರಾಷ್ಟ್ರಗಳೆಂಬ ಭಾವನೆ ಸರಿಯಲ್ಲ. ಇಸ್ಲಾಮೀ ವ್ಯವಸ್ಥೆಯನ್ನು ಸಂಪೂರ್ಣವಾಗಿ ಜಾರಿಗೆ ತರುವ ರಾಷ್ಟ್ರಗಳು ಮಾತ್ರ ಇಸ್ಲಾಮೀ ರಾಷ್ಟ್ರ ಎಂಬ ಹೆಸರಿಗೆ ಅರ್ಹವಾಗುತ್ತದೆ. ಈಗ ಮುಸ್ಲಿಮ್ ರಾಷ್ಟ್ರಗಳೆಂದು ಹೇಳಿಕೊಳ್ಳುವ ಯಾವುದೇ ರಾಷ್ಟ್ರವೂ ವಿಶ್ವದಲ್ಲಿ ಕಂಡುಬರುತ್ತಿಲ್ಲ. ಭಾಗಶಃ ಇಸ್ಲಾಮೀ ವ್ಯವಸ್ಥೆಗಳನ್ನು ಪಾಲಿಸುವ ರಾಷ್ಟ್ರಗಳಿವೆ. ಆದರೆ ಅವೆಲ್ಲಾ ಅಷ್ಟರ ಮಟ್ಟಿಗೆ ಇಸ್ಲಾಮೀ ರಾಷ್ಟ್ರವಾಗುತ್ತವೆ.

ಇಸ್ಲಾಮೀ ರಾಷ್ಟ್ರದ ಮುಸ್ಲಿಮೇತರ ಪ್ರಜೆಗಳಿಗೆ ತಮ್ಮ ವಿಶ್ವಾಸದಂತೆ ಬಾಳಲು, ಆರಾಧನಾ ಕರ್ಮಗಳನ್ನು ನಿರ್ವಹಿಸಲು, ತಮ್ಮ ಆಚಾರ, ಸಂಪ್ರದಾಯವನ್ನು ಅನುಷ್ಠಾನಗೊಳಿಸುವ ಸ್ವಾತಂತ್ರ್ಯವಿರುತ್ತದೆ. ಯಾರ ಮೇಲೂ ಇಸ್ಲಾಮನ್ನು ಬಲವಂತವಾಗಿ ಹೇರುವ ಪ್ರಶ್ನೆಯೇ ಇಲ್ಲ. ಇದನ್ನು ಇಸ್ಲಮ್ ಬಲವಾಗಿ ಖಂಡಿಸುತ್ತದೆ. 'ಧರ್ಮದಲ್ಲಿ ಯಾವುದೇ ಬಲಾತ್ಕಾರವಿಲ್ಲ. ಸತ್ಯವನ್ನು ಮಿಥ್ಯದಿಂದ ಬೇರ್ಪಡಿಸಲಾಗಿದೆ.' (ಪವಿತ್ರ ಕುರ್‌ಆನ್ 2:256)

'ನೀವು ಹೀಗೆ ಹೇಳಿಬಿಡಿರಿ- ಇದು ನಿಮ್ಮ ಪ್ರಭುವಿನ ಕಡೆಯಿಂದ ಬಂದ ಸತ್ಯ ಇಷ್ಟವಿದ್ದವರು ಸ್ವೀಕರಿಸಿಕೊಳ್ಳಲಿ. ಇಷ್ಟವಿದ್ದವರು ನಿರಾಕರಿಸಲಿ.' (ಪವಿತ್ರ ಕುರ್‌ಆನ್ 18:29)

ಪ್ರವಾದಿಗಳಿಗೂ ಧರ್ಮವನ್ನು ಸ್ವೀಕರಿಸುವಂತೆ ಒತ್ತಾಯ ಮಾಡುವ ಅನುಮತಿಯಿರಲಿಲ್ಲ. ಅಲ್ಲಾಹನನು ಹೇಳುತ್ತಾನೆ: 'ಜನರು ವಿಶ್ವಾಸಿಗಳಾಗಲು ನೀವು ಅವರನ್ನು ಒತ್ತಾಯಿಸುವುದೇ? ದೇವನಿಚ್ಛೆಯಿಲ್ಲದಿದ್ದರೆ ಒಬ್ಬನಿಗೂ ವಿಶ್ವಾಸ ಹೊಂದಲು ಸಾಧ್ಯವಿಲ್ಲ.' (ಪವಿತ್ರ ಕುರ್‌ಆನ್ 6:69)

'ಸಂದೇಶವಾಹಕರೇ, ನೀವು ಉಪದೇಶ ಮಾಡುತ್ತಾ ಸಾಗಿರಿ. ನೀವು ಕೇವಲ ಉಪ ದೇಶಕರು ಅವರ ಮೇಲೇನೂ ಬಲಾತ್ಕಾರ ಮಾಡುವವರಲ್ಲ.' (ಪವಿತ್ರ ಕುರ್‌ಆನ್ 88:21-22)

'ವಿಶ್ವದ ಪ್ರಥಮ ಇಸ್ಲಾಮೀ ರಾಷ್ಟ್ರವಾದ ಮದೀನಾದಲ್ಲಿ, ಅದರ ಸ್ಥಾಪಕರಾದ ಪ್ರವಾದಿ ಮುಹಮ್ಮದ್(ಸ)ರು ದೇಶದ ಧಾರ್ಮಿಕ ಅಲ್ಪಸಂಖ್ಯಾತರಿಗೆ ನೀಡಿದ ಸ್ವಾತಂತ್ರ್ಯ ಹಾಗೂ ಸೌಕರ್ಯಗಳು ಇತರ ಯಾವುದೇ ಜಾತ್ಯತೀತ ಹಾಗೂ ಧರ್ಮಾಧಾರಿತ ರಾಷ್ಟ್ರಗಳಲ್ಲೂ ಕಾಣಲು ಸಾಧ್ಯವಿದೆಯೇ ಎಂಬುದು ಚಿಂತನಾರ್ಹ ವಿಷಯವಾಗಿದೆ. ಮದೀನಾದಲ್ಲಿ ಅಂಗೀಕರಿಸಲಾದ ನಿಯಮಾವಳಿಗಳಲ್ಲಿ ಇದನ್ನು ಕಾಣಬಹುದು. 'ನಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಬರುವ ಯಹೂದಿಯರಿಗೆ ಧರ್ಮದ ಆಧಾರದಲ್ಲಿ ಪಕ್ಷಪಾತ ವರ್ತನೆಗಳಿಂದ, ದ್ರೋಹಗಳಿಂದ ರಕ್ಷಣೆ ನೀಡಲಾಗುವುದು. ಮುಸ್ಲಿಮ್ ಸಮುದಾಯದ ಸದಸ್ಯರಂತೆ ಅವರು ಕೂಡ ನಮ್ಮ ಸಹಾಯಕ್ಕೂ ಪ್ರೀತಿಯ ಸಂರಕ್ಷಣೆಗೂ ಅರ್ಹರು. ಅವರು ಮುಸ್ಲಿಮರೊಂದಿಗೆ ಸೇರಿ ಒಂದೇ ರೀತಿಯ ರಾಷ್ಟ್ರವಾಗುತ್ತಾರೆ. ಮುಸ್ಲಿಮರಂತೆಯೇ ತಮ್ಮ ಧರ್ಮವನ್ನು ಆಚರಿಸುವ ಸ್ವಾತಂತ್ರ್ಯವನ್ನು ಅವರಿಗೆ ನೀಡಲಾಗಿದೆ.'

ಸರ್ ಥಾಮಸ್ ಆರ್ನಲ್ಡ್ ಬರೆಯುತ್ತಾರೆ: 'ಮುಹಮ್ಮದ್ ಹಲವು ಅರಬ್-ಕ್ರೈಸ್ತ ಗೋತ್ರಗಳೊಂದಿಗೆ ಒಪ್ಪಂದವನ್ನು ಏರ್ಪಡಿಸಿದ್ದರು. ಅವರಿಗೆ ಸಂರಕ್ಷಣೆ ಹಾಗೂ ಸ್ವಂತ ಧರ್ಮವನ್ನು ಆಚರಿಸುವ ಸ್ವಾತಂತ್ರ್ಯವನ್ನು ನೀಡಿದರು.' (ಇಸ್ಲಾಮ್ ಸಂದೇಶ ಪ್ರಚಾರ ಪುಟ-60)

ಪ್ರವಾದಿವರ್ಯರ ಮಾರ್ಗವನ್ನು ಅನುಸರಿಸಿದ, ಎಲ್ಲಾ ಮುಸಲ್ಮಾನ ಆಡಳಿತಗಾರರು ಇದೇ ನಿಲುವನ್ನು ಅಂಗೀಕರಿಸಿದರು. ಭಾರತದ ಇತಿಹಾಸದ ಪುಟಗಳಲ್ಲಿ ಅತ್ಯಧಿಕವಾಗಿ ತಪ್ಪಾಗಿ ಚಿತ್ರೀಕೃತವಾದ, ವಿಮರ್ಶಿಸಲ್ಪಟ್ಟ ಔರಂಗಜೇಬ್‌ರ ಧಾರ್ಮಿಕ ಸಹಿಷ್ಣುತೆಯ ಕುರಿತು ಅಲೆಗ್ಸಾಂಡರ್ ಹಾಮಿಲ್ಟನ್ ಬರೆಯುತ್ತಾರೆ: 'ಹಿಂದೂಗಳಿಗೆ ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯ ನೀಡಿದ್ದಲ್ಲದೆ, ಹಿಂದೂ ರಾಜರ ಅಧೀನದಲ್ಲಿರುವಾಗ ನಡೆಯುತ್ತಿದ್ದ ವ್ರತಾನುಷ್ಠಾನಗಳು, ಉತ್ಸವಗಳು, ಜಾತ್ರೆಗಳಿಗೂ ಸೌಲಭ್ಯ ಏರ್ಪಡಿಸಲಾಗುತ್ತಿತ್ತು. ಕೇವಲ ಮೀರತ್ ನಗರದಲ್ಲೇ ನೂರಕ್ಕಿಂತಲೂ ಹೆಚ್ಚು ವಿಭಿನ್ನ ಹಿಂದೂ ಪಂಗಡಗಳಿದ್ದರೂ, ಅವರೊಳಗೆ ಪ್ರಾರ್ಥನೆಯ ಸಿದ್ಧಾಂತಗಳ ವಿಷಯದಲ್ಲಿ ಯಾವುದೇ ವಿವಾದ ಉಂಟಾಗಿರಲಿಲ್ಲ, ಪ್ರತಿಯೊಬ್ಬ ವ್ಯಕ್ತಿಗೆ ತನ್ನಿಚ್ಛೆಯಂತೆ ಆರಾಧಿಸುವ, ಪೂಜಿಸುವ ಸಂಪೂರ್ಣ ಸ್ವಾತಂತ್ರ್ಯ ನೀಡಲಾಗಿತ್ತು.'

(Alexander Hamilton, A New Account of the East Indies, vol-1 pp, 159, 162, 163)

ಮುಸ್ಲಿಮ್ ಆಡಳಿತಗಾರರು ಮತಾಂತರಕ್ಕೆ ಬಲಾತ್ಕಾರಿಸಿ ಒತ್ತಡ ಹೇರುತ್ತಿದ್ದರೆ ಶತಮಾನಗಳ ಮುಸ್ಲಿಮ್ ಆಡಳಿತದ ಬಳಿಕವೂ ಈ ದೇಶದಲ್ಲಿ ಮುಸ್ಲಿಮರು ಅಲ್ಪಸಂಖ್ಯಾತರಾಗಿ ಉಳಿಯಲು ಸಾಧ್ಯವಿತ್ತೇ?

ಇಸ್ಲಾಮೀ ಆಡಳಿತದಲ್ಲಿ ಧಾರ್ಮಿಕ ಅಲ್ಪಸಂಖ್ಯಾತರಿಗೆ ಸಂಪೂರ್ಣ ಆರಾಧನಾ ಸ್ವಾತಂತ್ರ್ಯ ನೀಡಲಾಗಿತ್ತು. ನಜ್ರಾನ್‌ನ ಕ್ರೈಸ್ತ ರಾಜರೊಂದಿಗೆ ಪ್ರವಾದಿವರ್ಯರು ಮಾಡಿದ ಒಪ್ಪಂದದಲ್ಲೇ ಹೀಗೆ ಕಾಣಬಹುದು. 'ನಜ್ರಾನಿನ ಕ್ರೈಸ್ತರಿಗೂ ಅವರ ಸಹವಾಸಿಗಳಿಗೂ ದೇವನ ಅಭಯವೂ

ಪ್ರವಾದಿಯಾದ ಮುಹಮ್ಮದ(ಸ)ರಿಗೆ ಅವರ ಸಂರಕ್ಷಣೆಯ ಹೊಣೆಗಾರಿಕೆಯೂ ಇದೆ. ಅವರ ಪ್ರಾಣ, ಧರ್ಮ, ಭೂಮಿ, ಸಂಪತ್ತುಗಳಿಗೂ ಅವರ ಉಪಸ್ಥಿತಿಯಲ್ಲೂ, ಅನುಪಸ್ಥಿತಿಯಲ್ಲೂ, ಅವರ ಒಂಟೆಗಳಿಗೂ, ವ್ಯಾಪಾರಿ ತಂಡಗಳಿಗೂ, ಶಿಲುಬೆ, ಚರ್ಚ್‌ಗಳಂತಹ ಧಾರ್ಮಿಕ ಚಿಹ್ನೆಗಳಿಗೂ ರಕ್ಷಣೆ ನೀಡಲಾಗುವುದು. ಈಗ ಇರುವ ಸ್ಥಿತಿಯಲ್ಲಿ ಸ್ವಲ್ಪವೂ ಬದಲಾವಣೆ ತರುವುದಿಲ್ಲ, ಅವರ ಹಕ್ಕು ಮತ್ತು ಧಾರ್ಮಿಕ ಚಿಹ್ನೆಯ ಮೇಲೆ ಹಸ್ತಕ್ಷೇಪವಿಲ್ಲ, ಅವರ ಪಾದ್ರಿ, ಪುರೋಹಿತ, ಚರ್ಚ್‌ನ ಸೇವಕರನ್ನು ಅವರ ಸ್ಥಾನದಿಂದ ಪದಚ್ಯುತಗೊಳಿಸುವುದಿಲ್ಲ.

ಒಂದನೇ ಖಲೀಫ ಅಬೂಬಕರ್ ಸಿದ್ದೀಕ್(ರ) ಹೀರಾ ನಿವಾಸಿಗಳೊಂದಿಗೆ ಮಾಡಿದ ಕರಾರಿನಲ್ಲಿ ಹೀಗಿದೆ: 'ಅವರ ಆರಾಧನಾಲಯಗಳು, ಶಿಲುಬೆಗಳು ಮುಕ್ತವಾದ ಕೋಟೆಗಳನ್ನು ಕೆಡವಲಾಗುವುದಿಲ್ಲ, ಘಂಟೆ ಬಾರಿಸುವುದು, ಹಬ್ಬದಲ್ಲಿ ಶಿಲುಬೆ ಮೆರವಣಿಗೆಯಿಂದ ತಡೆಯುವುದಿಲ್ಲ.'

ಮಧ್ಯಪ್ರಾಚ್ಯ ದೇಶದ ಕ್ರೈಸ್ತರು ಮುಸ್ಲಿಮ್ ಆಡಳಿತದ ಅಧೀನದಲ್ಲಿ ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯ ದೊರೆತ ಬಗ್ಗೆ ಬಹಳ ಸಂತೃಪ್ತರಾಗಿದ್ದರು. ಐದು ಶತಕಗಳ ಕಾಲ ದೀರ್ಘವಾಗಿ ಮುಂದುವರಿದ ಇಸ್ಲಾಮೀ ಆಡಳಿತದಲ್ಲಿ ಯಾವುದೇ ವ್ಯತ್ಯಾಸ ಕಾಣಿಸಲಿಲ್ಲವೆಂದು 12ನೇ ಶತಮಾನದ ಎರಡನೇ ಹಂತದಲ್ಲಿ ಅಂಟಾಕಿಯಾದ ಯಾಕೋಬನಾಗಿದ್ದ ಪಾತ್ರಿಯಾರ್ಕಿಸ್ ಆಗಿದ್ದ ದೊಡ್ಡ ಮೈಕಲ್‌ನ ಪ್ರಸ್ತಾಪ ಇದನ್ನು ಸ್ಪಷ್ಟಪಡಿಸುತ್ತದೆ. ರೋಮನ್ ಆಡಳಿತಗಾರ ಹಕ್ರ್ಯೂಲನ ಮರ್ದನದ ಕಥೆಗಳನ್ನು ವಿವರಿಸಿ ಅವರು ಬರೆಯುತ್ತಾರೆ: 'ಸರ್ವಶಕ್ತನು ಮಾನವ ಸಾಮ್ರಾಜ್ಯದ ಒಳಿತಿಗಾಗಿ ತನ್ನಿಚ್ಛೆಯಂತೆ ಬದಲಾಯಿಸುವವನೂ, ತಾನಿಚ್ಛಿಸಿದವರಿಗೆ ಸಾಮ್ರಾಜ್ಯವನ್ನು ನೀಡುವವನೂ, ಬಡವರ ಉದ್ಧಾರಕನಾದ ಪ್ರತೀಕಾರದ ದೇವನು ಇಸ್ಮಾಯೀಲ್‌ರ ಸಂತಾನವನ್ನು ರೋಮನರ ಕರಗಳಿಂದ ನಮ್ಮನ್ನು ರಕ್ಷಿಸಲೆಂದು ಕರೆತಂದಿದ್ದಾನೆ. ರೋಮನರು ನಮ್ಮ ಚರ್ಚ್‌ಗಳನ್ನು ಕೊಳ್ಳೆಹೊಡೆಯಬಹುದು ಮತ್ತು ನಮ್ಮನ್ನು ನಿರ್ದಯವಾಗಿ ಮರ್ದಿಸುವುದನ್ನು ದೇವನು ನೋಡುತ್ತಲಿದ್ದ. ಕಾಲ್‌ಸಿಡೋನಿಯನ್ ವಿಭಾಗದವರಿಗೆ ಒಪ್ಪಿಸಲಾದ ಚರ್ಚ್‌ಗಳು ಅವರ ಕೈಯಲ್ಲೇ ಉಳಿದುದರಿಂದ ನಮಗೆ ಅಲ್ಪಪ್ರಮಾಣದ ನಷ್ಟವುಂಟಾಯಿತು. ಅರಬರು ನಮ್ಮ ನಗರಗಳನ್ನು ವಶಪಡಿಸಿದಾಗ ಚರ್ಚ್‌ಗಳನ್ನು ಯಥಾ ಸ್ಥಿತಿಯಲ್ಲಿಯೇ ಉಳಿಸಿದರು. ಏನಿದ್ದರೂ ರೋಮನರ ಕ್ರೌರ್ಯ, ನೀಚತೆ, ರೋಷ ಹಾಗೂ ಧಾರ್ಮಿಕ ಆವೇಶದಿಂದಲೂ ಪಾರಾಗಿ, ಶಾಂತಿ ಸಮಾಧಾನದ ಜೀವನ ಸಾಗಿಸಲು ಸಾಧ್ಯವಾದದ್ದು ಸಣ್ಣ ವಿಷಯವೇನಲ್ಲ.' (Michel the Elder vol-2 pp, 412,413 ಉದ್ಧರಣೆ: ಸರ್ ಥಾಮಸ್ ಅರ್ನಲ್ಡ್ ಇಸ್ಲಾಮಿ ಸಂದೇಶವೂ ಪ್ರಚಾರವೂ, ಪುಟ–67)

'ಭಾರತದ ಮುಸ್ಲಿಮ್ ಆಡಳಿತದ ಕುರಿತು ಶ್ರೀ ಈಶ್ವರಿ ಪ್ರಸಾದ್ ಹೇಳುತ್ತಾರೆ: 'ಮುಸ್ಲಿಮರು ತಮ್ಮ ಅಧೀನದಲ್ಲಿರುವ ಜನತೆಗೆ ಆರಾಧನಾ ಸ್ವಾತಂತ್ರ್ಯವನ್ನು ನೀಡಿದರು ಮತ್ತು ಸಹಿಷ್ಣುತೆಯಿಂದ ವರ್ತಿಸಿದರು.' (History of Muslim Rule page 46)

ಬಾಬರ್ ಚಕ್ರವರ್ತಿಯು ತನ್ನ ಮಗನಾದ ಹುಮಾಯೂನನಿಗೆ ನೀಡಿದ ಅಂತಿಮ ಉಪದೇಶದಲ್ಲಿ ಹಿಂದೂ ಬಾಂಧವರೊಂದಿಗೆ ಉದಾರತೆಯಿಂದ ವರ್ತಿಸಬೇಕೆಂದು ಹೇಳಿದ್ದರು. ಡಾ। ರಾಜೇಂದ್ರ ಪ್ರಸಾದರೂ ಸೇರಿದಂತೆ ಹಲವರು ಉದ್ಧರಿಸಿದ ಈ ಅಂತ್ಯೋಪದೇಶದಲ್ಲಿ ಹೀಗೆ ಕಾಣಬಹುದು: 'ಭಾರತವು ವಿವಿಧ ಧರ್ಮಗಳ ಸಂಗಮ ಭೂಮಿ. ಅದಕ್ಕಾಗಿ ನೀನು ಕೃತಜ್ಞತೆ ಅರ್ಪಿಸಬೇಕು. ಅಲ್ಲಾಹನನು ನಿನಗೆ ಅಧಿಕಾರ ನೀಡಿದರೆ ನೀನು ಕೋಮು ಪಕ್ಷಪಾತಿ ಆಗಬಾರದು. ಹಿಂದೂಗಳ ಹೃದಯ ಭೇದಿಸುವಂತೆ ದನಗಳನ್ನು ಕಡಿಯಬಾರದು. ಹಾಗೆ ಮಾಡಿದರೆ ಜನರು ನಿನ್ನನ್ನು ದ್ವೇಷಿಸುವರು. ದೇವಾಲಯಗಳನ್ನು, ಧಾರ್ಮಿಕ ಕ್ಷೇತ್ರಗಳನ್ನು ಕೆಡವಬಾರದು. ಆಡಳಿತಗಾರನು ಪ್ರಜೆಗಳನ್ನೂ, ಪ್ರಜೆಗಳು ಆಡಳಿತಗಾರನನ್ನೂ ಪ್ರೀತಿಸುವ ವಾತಾವರಣ ನಿರ್ಮಿಸಬೇಕು. ಕರುಣೆ ತುಂಬಿದ ಹೃದಯದಿಂದ ಇಸ್ಲಾಮನ್ನು ಪಾವನಗೊಳಿಸಬೇಕು ಹೊರತು ಆಕ್ರಮಣದಿಂದಲ್ಲ.' (ಉದ್ಧರಣೆ:ಮಿಸಿಸ್ ನಿಲೋಫರ್ ಅಹ್ಮದ್, ಇನ್‌ಸ್ಟಿಟ್ಯೂಟ್ ಆಫ್ ಒಬ್ಜೆಕ್ಟೀವ್ ಸ್ಟಡೀಸ್, ನವದೆಹಲಿ)

ಆಲಂಗೀರ್ ನಾಮದಲ್ಲಿ ಹೀಗಿದೆ: 'ಔರಂಗಜೇಬ್ ಬಂಗಾಳ ಮತ್ತು ಅಸ್ಸಾಂನಲ್ಲಿ ಕೆಲವು ಹಿಂದೂ ದೇವಾಲಯಗಳನ್ನು ನಿರ್ಮಿಸಿದ್ದಾರಲ್ಲದೆ ಬುದ್ಧಗಯಾಕ್ಕೆ ಬೃಹತ್ ಪ್ರಮಾಣದಲ್ಲಿ ಭೂಮಿಯನ್ನು ಸರ್ಕಾರದ ವತಿಯಿಂದ ನೀಡಿದ್ದಾರೆ.' ( ಉದ್ಧರಣೆ Illustrated weekly, 5, 10, 73)

ಪಂಡಿತ್ ಸುಂದರ್‌ಲಾಲ್ ಹೇಳುತ್ತಾರೆ: 'ಅಕ್ಬರ್, ಜಹಾಂಗೀರ್, ಶಾಜಹಾನ್‌ರ ಕಾಲದಲ್ಲೂ, ಔರಂಗಜೇಬ್ ಮತ್ತು ಅವರ ಉತ್ತರಾಧಿಕಾರಿಗಳ ಕಾಲದಲ್ಲೂ ಹಿಂದೂ ಮುಸ್ಲಿಮರೊಂದಿಗೆ ಸಮಾನ ನಿಲುವನ್ನು ಸ್ವೀಕರಿಸಲಾಗಿತ್ತು. ಎರಡು ಧರ್ಮಗಳೂ ಸಮಾನವಾಗಿ ಗೌರವಿಸಲ್ಪಟ್ಟವು. ಧರ್ಮದ ಹೆಸರಿನಲ್ಲಿ ಎಲ್ಲೂ ವಂಚನೆ ನಡೆಯಲಿಲ್ಲ, ಎಲ್ಲಾ ಚಕ್ರವರ್ತಿಗಳು ಹಲವಾರು ಕ್ಷೇತ್ರಗಳಿಗೆ ಬೃಹತ್ ಪ್ರಮಾಣದಲ್ಲಿ ಭೂದಾನ ಮಾಡಿದರು. ಇಂದು ಕೂಡ ಭಾರತದ ವಿವಿಧ ಕ್ಷೇತ್ರಗಳ ಅರ್ಚಕರಲ್ಲಿ ಔರಂಗಜೇಬರ ಸಹಿಯಿರುವ ರಾಜಾಜ್ಞೆಯ ಪ್ರತಿಗಳಿವೆ. ಅದು ಪಾರಿತೋಷಕಗಳು ಹಾಗೂ ಸೊತ್ತುಗಳನ್ನು ನೀಡಿದ ಸ್ಮರಣಿಕೆಗಳಾಗಿವೆ. ಇಂತಹ ಎರಡು ಆದೇಶಗಳು ಈಗಲೂ ಅಲಹಾಬಾದನಲ್ಲಿದೆ. ಅದರಲ್ಲೊಂದು ಸೋಮನಾಥ ಕ್ಷೇತ್ರದ ಅರ್ಚಕರ ಕೈಯಲ್ಲಿದೆ.'

ಇತರ ಧರ್ಮಿಯರ ಆರಾಧಾನಾಲಯಗಳ ಸಂರಕ್ಷಣೆಗೆ ಇಸ್ಲಾಮೀ ರಾಷ್ಟ್ರವು ಬಹಳ ಕಾಳಜಿ ವಹಿಸುತ್ತ ಬಂದಿದೆ. ಒಂದನೇ ಖಲೀಫ ಅಬೂಬಕರ್ ಸಿದ್ದೀಕ್‌ರನ್ನು ದೇಶದ ಕ್ರೈಸ್ತ ಬಾಂಧವರು ಹೊಸದಾಗಿ ನಿರ್ಮಿಸಿದ ಚರ್ಚನ್ನು ಉದ್ಘಾಟಿಸಲು ಆಮಂತ್ರಿಸಿದರು. ಅದನ್ನು ನಮಾಝ್ ನಿರ್ವಹಿಸಿ ಉದ್ಘಾಟಿಸಿದರೆ ಸಾಕು ಎಂದು ಹೇಳಿದರು. ಆಗ ಖಲೀಫ ಹೇಳಿದರು: 'ಈ ಚರ್ಚನ್ನು ನಾನು ಉದ್ಘಾಟಿಸಿದರೆ ನನ್ನ ಕಾಲಾನಂತರ ಮುಂದಿನ ಪೀಳಿಗೆಯು ಇದು ನಮ್ಮ ಖಲೀಫ ನಮಾಝ್ ಮಾಡಿದ ಸ್ಥಳ, ಅದು ನಮಗೆ ಸಲ್ಲಬೇಕೆಂಬ ವಾದದೊಂದಿಗೆ ಬಂದರೆ

ಖಂಡಿತವಾಗಿಯೂ ಅಶಾಂತಿಗೆ ಕಾರಣವಾದೀತು.' ಖಲೀಫರ ದೂರದೃಷ್ಟಿ ಸರಿಯೆಂದು ಕ್ರೈಸ್ತ ಸಹೋದರರಿಗೂ ಅರ್ಥವಾಗಿ ಅವರು ಹಿಂದೆ ಸರಿದರು.

ಎರಡನೇ ಖಲೀಫ ಉಮರುಲ್ ಫಾರೂಕ್ ಫೆಲೆಸ್ತೀನ್‌ಗೆ ಭೇಟಿ ನೀಡಿದಾಗ ನಮಾಝ್‌ನ ಸಮಯವಾಯಿತು: ಆಗ ಅಲ್ಲಿನ ಪಾದ್ರಿ ಯಾರ್ಕಿಸ್ ಸ್ಟಫರ್ನಿಯಾಸ್, ತಮ್ಮ ಚರ್ಚ್‌ನಲ್ಲೇ ನಮಾಝ್ ನಿರ್ವಹಿಸಲು ಸೂಚಿಸಿದರು. ಆಗ ಖಲೀಫರು ಅದನ್ನು ನಯವಾಗಿ ತಿರಸ್ಕರಿಸಿದರು. ತಾನು ಈ ನಮಾಝ್ ಇಲ್ಲಿ ನಿರ್ವಹಿಸಿದರೆ ನನ್ನ ನಂತರದ ಅವಿವೇಕಿ ಮುಸ್ಲಿಮರು ಯಾರಾದರೂ ಇದರ ಹೆಸರಿನಲ್ಲಿ ಅವಕಾಶವಾದದೊಂದಿಗೆ ಬರಬಹುದು, ಮಸೀದಿ ಮಾಡಲು ಪ್ರಯತ್ನಿಸಬಹುದು ಎಂಬುದೇ ಕಾರಣವಾಗಿತ್ತು. ಇಂತಹ ಅಶಾಂತಿಗೆ ಕಾರಣವಾಗಬಾರದೆಂಬ ಉದ್ದೇಶದಿಂದ ಚರ್ಚ್‌ನ ಹೊರಭಾಗದ ಖಾಲಿ ಜಾಗದಲ್ಲಿ ಹಾಸನ್ನು ಹಾಸಿ ನಮಾಝ್ ನಿರ್ವಹಿಸಿದರು.

ಮುಸ್ಲಿಮೇತರರಿಗೆ ಅವರ ವ್ಯಕ್ತಿನಿಯಮದಂತೆ ಜೀವಿಸುವ ಸಂಪೂರ್ಣ ಸ್ವಾತಂತ್ರ್ಯ ನೀಡುವ ಇಸ್ಲಾಮ್ ಅವರ ಹಕ್ಕಿಗೆ ಸ್ವಲ್ಪವೂ ಚ್ಯುತಿ ಬರುವುದಕ್ಕೆ ಅನುಮತಿ ನೀಡುವುದಿಲ್ಲ. ಪ್ರವಾದಿ(ಸ)ರು ಹೇಳಿರುವರು: 'ಜಾಗರೂಕರಾಗಿರಿ, ನಿಮ್ಮಲ್ಲಿ ಯಾರಾದರೂ ಮುಸ್ಲಿಮೇತರ ಪ್ರಜೆಗಳನ್ನು ಆಕ್ರಮಿಸುವುದೋ, ಅವರಿಗೆ ಅಸಾಧ್ಯವಾದಷ್ಟು ತೆರಿಗೆಯನ್ನು ಹೇರುವುದೋ, ಅವರೊಂದಿಗೆ ಕ್ರೂರವಾಗಿ ವರ್ತಿಸುವುದೋ ಅವರ ಹಕ್ಕುಗಳನ್ನು ಕಡಿತಗೊಳಿಸುವಂತಹ ಕೆಲಸವನ್ನೋ ಮಾಡಿದರೆ ಅಂತ್ಯ ದಿನದಂದು ನಾನು ಅವರ ವಿರುದ್ಧ ದೂರು ನೀಡುತ್ತೇನೆ.'

(ಅಬೂದಾವೂದ್)

'ಮುಸ್ಲಿಮೇತರ ಪ್ರಜೆಯನ್ನು ಅಪಾಯಕ್ಕೀಡುಗೊಳಿಸುವವನಿಗೆ ಸ್ವರ್ಗದ ಸುವಾಸನೆಯೂ ದೊರೆಯದು.' (ಅಬೂಯೂಸುಫ್ ಕಿತಾಬುಲ್ ಖರಾಜ್,ಪುಟ 71)

ವಿವಾಹ, ವಿವಾಹವಿಚ್ಛೇದನ, ವಾರೀಸು ಹಕ್ಕು ಮೊದಲಾದ ವ್ಯಕ್ತಿ ನಿಯಮಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಕಕ್ಷಿಯ ಧರ್ಮದ ರೀತಿಯಂತೆ ಇಸ್ಲಾಮೀ ನ್ಯಾಯಾಲಯ ತೀರ್ಪು ನೀಡುತ್ತದೆ. ಶರೀಅತ್ ನಿಯಮಗಳನ್ನು ಅವರಿಗೆ ಜಾರಿಗೊಳಿಸುವುದಿಲ್ಲ, ಪ್ರವಾದಿಯವರ ಕಾಲದಲ್ಲಿ ಯಹೂದಿಯರ ಪ್ರಕರಣಗಳು ವಿಚಾರಣೆಗೆ ಬಂದರೆ ಮದೀನಾದ 'ಬೈತುಲ್ ಮಿದ್‌ರಾಸ್' ಎಂಬ ಯಹೂದಿ ಸಂಸ್ಥೆಯೊಂದಿಗೆ ಸಂಪರ್ಕಿಸಿ, ಅಲ್ಲಿನ ಪುರೋಹಿತರೊಂದಿಗೆ ಪ್ರಶ್ನೆಗಳ ಕುರಿತು ಚರ್ಚಿಸಿ ನಂತರವೇ ತೀರ್ಪು ನೀಡಲಾಗುತ್ತಿತ್ತು. (ಇಬ್ನು ಹಿಶಾಮ್, ಸೀರತುನ್ನಬಿ, ಭಾಗ-2, ಪುಟ 201)

ಸರ್ ಥಾಮಸ್ ಆರ್ನಲ್ಡ್ ಬರೆಯುತ್ತಾರೆ: 'ಮುಸ್ಲಿಮೇತರ ಸಮೂಹಗಳು ಸಂಪೂರ್ಣ ತನ್ನ ಹಕ್ಕುಗಳನ್ನು ಅನುಭವಿಸಿತು. ಹೇಗೆಂದರೆ ಅವರ ಆಂತರಿಕ ವ್ಯವಹಾರಗಳನ್ನು ನಡೆಸುವ ಸಂಪೂರ್ಣ ಸ್ವಾತಂತ್ರ್ಯವನ್ನು ಸರಕಾರವು ಅವರಿಗೆ ವಹಿಸಿತ್ತು. ಧಾರ್ಮಿಕ ವಿಷಯಗಳನ್ನು

ತೀರ್ಮಾನಿಸುವ ಅಧಿಕಾರ ಅವರ ಪುರೋಹಿತರಿಗೆ ಲಭಿಸಿತು. ಅವರ ಮತಗಳಿಗೆ ಯಾವುದೇ ಧಕ್ಕೆ ಉಂಟಾಗದಂತೆ ನೋಡಿಕೊಳ್ಳಲಾಯಿತು.'

(ಇಸ್ಲಾಮ್ ಸಂದೇಶವೂ ಪ್ರಚಾರವೂ, ಪುಟ 78)

ಆದರೆ ಇಸ್ಲಾಮೀ ರಾಷ್ಟ್ರದಲ್ಲಿ ಅನ್ಯಾಯ, ಅವಿವೇಕಗಳಿಗೆ ಅವಕಾಶವಿಲ್ಲ. ಜಾತಿ–ಮತ–ಭೇದವಿಲ್ಲದೆ ನಿಷ್ಪಕ್ಷಪಾತವಾದ ನ್ಯಾಯವನ್ನು ಜಾರಿಗೊಳಿಸಲಾಗುವುದು. ಪವಿತ್ರ ಕುರ್‌ಆನ್ ಆದೇಶಿಸುತ್ತದೆ. **'ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರೂ ನ್ಯಾಯದ ಸಾಕ್ಷ್ಯವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ.' (5: 8)**

ಇಸ್ಲಾಮೀ ರಾಷ್ಟ್ರದಲ್ಲಿ ಮುಸ್ಲಿಮೇತರ ಪ್ರಜೆಗಳ ವಿರುದ್ಧ ದಂಗೆಯೆದ್ದರೆ ಕಠಿಣ ಶಿಕ್ಷೆಯನ್ನು ನೀಡಲಾಗುವುದು. ಕೊಂದರೆ ಪ್ರತಿ ಶಿಕ್ಷೆ ನೀಡಲಾಗುವುದು. ಆರಾಧನಾಲಯಗಳನ್ನು ಧ್ವಂಸಗೊಳಿಸಿದರೆ ಅವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಾಗುವುದು ಹಾಗೂ ಅದನ್ನು ಪುನರ್ನಿರ್ಮಾಣ ಮಾಡಲಾಗುವುದು. ಆರಾಧನಾಲಯಗಳಂತೆಯೇ ಧಾರ್ಮಿಕ ಅಲ್ಪಸಂಖ್ಯಾತರ ಜೀವ, ಸೊತ್ತು, ಶಿಕ್ಷಣ ಸಂಸ್ಥೆಗಳು, ವ್ಯಕ್ತಿ ನಿಯಮಗಳಿಗೆ ಸಂಪೂರ್ಣ ರಕ್ಷಣೆ ನೀಡಲಾಗುವುದು. ಅವುಗಳಿಗೆದುರಾಗಿ ಹಸ್ತಕ್ಷೇಪಕ್ಕೆ ಅನುಮತಿ ನೀಡುವುದಿಲ್ಲ. ಆದ್ದರಿಂದ ಇಸ್ಲಾಮೀ ಆಡಳಿತದಲ್ಲಿ ಧಾರ್ಮಿಕ ಅಲ್ಪಸಂಖ್ಯಾತರಿಗೆ ಸ್ವಾತಂತ್ರ್ಯ ಹಾಗೂ ರಕ್ಷಣೆ ದೊರೆಯುತ್ತದೆಂಬುದರಲ್ಲಿ ಸಂಶಯವಿಲ್ಲ. ಅವರು ಖಂಡಿತವಾಗಿಯೂ ಅನ್ಯಾಯ, ಆಕ್ರಮಣ, ಅವಮಾನಗಳಿಗೆ ಒಳಗಾಗಲಾರರು. ದೇಶದ ಆದಿವಾಸಿಗಳೂ, ಹಿಂದುಳಿದ ವರ್ಗದವರೆಲ್ಲರೂ ತಾವು ಹಿಂದುಗಳಲ್ಲವೆಂದು ಪ್ರಬಲವಾಗಿ ವಾದಿಸುತ್ತಿರುವಾಗ, ಪ್ರಶ್ನೆಯಲ್ಲಿ ಕೇಳಿರುವ ಭಾರತದ ಬಹುಸಂಖ್ಯಾತ ಹಿಂದೂಗಳೆಂಬ ಪ್ರಸ್ತಾಪ ವಸ್ತುನಿಷ್ಠವೋ, ಅಲ್ಲವೋ ಎಂದು ಹೇಳಬೇಕಾದ ಅಗತ್ಯವಿದೆ.

## 30 ಜಿಝಿಯಾ ಧಾರ್ಮಿಕ ತೆರಿಗೆಯೇ?

### ಮುಸ್ಲಿಮ್ ರಾಷ್ಟ್ರದಲ್ಲಿ ದೇವಾಲಯಗಳಿಗೆ ಅನುಮತಿಯಿದೆಯೇ?

ಧಾರ್ಮಿಕ ಅಲ್ಪಸಂಖ್ಯಾತರಿಗೆ ಇಸ್ಲಾಮೀ ರಾಷ್ಟ್ರಗಳಲ್ಲಿ ಜಾತ್ಯತೀತ ರಾಷ್ಟ್ರಗಳಂತೆ ಅಥವಾ ಅದಕ್ಕಿಂತಲೂ ಹೆಚ್ಚಾದ ಧಾರ್ಮಿಕ ಸ್ವಾತಂತ್ರ್ಯವಿದೆಯೆಂದು ನೀವು ಹೇಳಿದ್ದೀರಿ? ಆದರೆ ವಿಶ್ವದ ಯಾವುದಾದರೂ ಮುಸ್ಲಿಮ್ ರಾಷ್ಟ್ರಗಳಲ್ಲಿ ಹಿಂದುಗಳ ದೇವಾಲಯ ನಿರ್ಮಾಣಕ್ಕೆ ಅನುಮತಿಯಿದೆಯೇ? ಪಾಕಿಸ್ತಾನ ಹಾಗೂ ಬಾಂಗ್ಲಾದೇಶಗಳಲ್ಲಿ ದೇವಾಲಯಗಳನ್ನು ನಾಶಗೊಳಿಸಲಾಗುತ್ತಿದೆಯಲ್ಲವೇ?

ಪಾಕಿಸ್ತಾನ, ಬಾಂಗ್ಲಾದೇಶವೂ ಸೇರಿದಂತೆ ವಿಶ್ವದಲ್ಲಿ ಹಿಂದೂ ಪ್ರಜೆಗಳಿರುವ ಮುಸ್ಲಿಮ್ ರಾಷ್ಟ್ರಗಳಲ್ಲೆಲ್ಲಾ ದೇವಾಲಯ ನಿರ್ಮಾಣಕ್ಕೆ ಹಾಗೂ ಪ್ರಾರ್ಥನೆ, ಹಬ್ಬಗಳನ್ನು ನಡೆಸಲು ಅನುಮತಿಯಿದೆ. ಸರಕಾರ ಹಾಗೂ ಜನರು ಅದಕ್ಕೆ ತಡೆಯೊಡ್ಡುವುದಿಲ್ಲ, ಮಾತ್ರವಲ್ಲ ಅಗತ್ಯವಿರುವ ಸಹಕಾರವನ್ನು ನೀಡುತ್ತಾರೆ. ಕೆಲವು ವರ್ಷಗಳ ಹಿಂದೆ ಪ್ರಕಟವಾದ ಪತ್ರಿಕಾ ವರದಿಯನ್ನು ನೋಡಬಹುದು: 'ಬಾಂಗ್ಲಾದೇಶದ ಹಿಂದೂ ಕ್ಷೇತ್ರಗಳು ಹಾಗೂ ಧಾರ್ಮಿಕ ಸಂಸ್ಥೆಗಳ ಪುನರುತ್ಥಾನಕ್ಕಾಗಿ ಸರಕಾರವು ಸುಮಾರು ಆರು ಲಕ್ಷ ರೂಪಾಯಿಯನ್ನು ಬಿಡುಗಡೆಗೊಳಿಸಿತು. ಈ ತೀರ್ಮಾನ ಕೈಗೊಂಡ ಮಂತ್ರಿ ನೂರುಲ್ ಇಸ್ಲಾಮ್, ಎಲ್ಲ ಧರ್ಮದ ಏಳಿಗೆಗಾಗಿ ನಾವು ಸಿದ್ಧರಿದ್ದೇವೆ ಎಂದರು.' ( ಮಾತೃಭೂಮಿ 4-10-1985)

ಇನ್ನೊಂದು ಮುಸ್ಲಿಮ್ ರಾಷ್ಟ್ರವಾದ ಇಂಡೋನೇಶ್ಯದ ಕುರಿತು ಆರ್.ಎಸ್.ಎಸ್ ವಾರಪತ್ರಿಕೆ 'ಕೇಸರಿ' ಬರೆಯುತ್ತದೆ: 'ಜಾತ್ಯತೀತ ಸಂವಿಧಾನವಿರುವ ಇಂಡೋನೇಶ್ಯದಲ್ಲಿ ಎಲ್ಲಾ ಧರ್ಮೀಯರಿಗೂ ಸಂಪೂರ್ಣ ಆರಾಧನಾ ಸ್ವಾತಂತ್ರ್ಯವನ್ನು ನೀಡಲಾಗಿದೆ. ಇಸ್ಲಾಮ್, ಕ್ರೈಸ್ತ, ಬೌದ್ಧ, ಹಿಂದೂ ಧರ್ಮ ಮೊದಲಾದ ನಾಲ್ಕು ಧರ್ಮಗಳಿಗೆ ಸಮಾನವಾದ ಪ್ರೋತ್ಸಾಹ ನೀಡುಲಾಗುತ್ತಿದೆ. ಅದಕ್ಕಾಗಿ ಸರಕಾರದ ನಿಯಂತ್ರಣದಲ್ಲಿ ಒಂದು ಪ್ರತ್ಯೇಕ ಇಲಾಖೆ ಇದೆ. ವಿವಿಧ ಧರ್ಮಾನುಯಾಯಿಗಳು ಇಲ್ಲಿ ಪರಸ್ಪರ ಪ್ರೀತಿ, ಸೌಹಾರ್ದದಿಂದ ಬಾಳುತ್ತಿದ್ದಾರೆ.' (7-6-1987)

ಪಾಕಿಸ್ತಾನದಲ್ಲಿ ಜನ್ಮಾಷ್ಟಮಿ, ದೀಪಾವಳಿಯಂತಹ ಹಬ್ಬದ ದಿನಗಳಲ್ಲಿ ಹಿಂದೂ ಬಾಂಧವರಿಗೆ ಅಕ್ಕಿ, ಸಕ್ಕರೆಯನ್ನು ವಿಶೇಷವಾಗಿ ನೀಡಲಾಗುತ್ತದೆ. ಅಲ್ಲದೆ ಲಾಹೋರ್ ಜಿಲ್ಲೆಯ ಅಧಿಕೃತ ಶಾಲಾ ಕಾಲೇಜುಗಳ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನೂ

ನೀಡಲಾಗುತ್ತಿದೆ. ಲಾಹೋರ್‌ನ ಕ್ರೈಸ್ತ ಧರ್ಮೀಯರಿಗೆ ಶ್ಮಶಾನ ನಿರ್ಮಿಸಲು ಆರು ಲಕ್ಷ ರೂಪಾಯಿ ಸಹಾಯಧನ ನೀಡಲಾಗಿತ್ತು.

1992ರಲ್ಲಿ ಬಾಬರಿ ಮಸೀದಿಯನ್ನು ಧ್ವಂಸಗೊಳಿಸಿದಾಗ ಪಾಕಿಸ್ತಾನ ಹಾಗೂ ಬಾಂಗ್ಲಾದೇಶದ ಕೆಲವು ತಿಳಿಗೇಡಿಗಳು ದೇವಾಲಯಗಳನ್ನು ಆಕ್ರಮಿಸಿ ಹಾನಿಯುಂಟು ಮಾಡಿದರು. ಆಗ ಹಿಂದೂ ಆರಾಧನಾಲಯಗಳನ್ನು ರಕ್ಷಿಸಲಿಕ್ಕಾಗಿ ಅಲ್ಲಿನ ಇಸ್ಲಾಮೀ ಕಾರ್ಯಕರ್ತರು ಅವರನ್ನು ತಡೆದರು. ಅಂದು ದೇವಾಲಯಗಳ ಮೇಲಾದ ಆಕ್ರಮಣದ ಕುರಿತು ಸುಗತ ಕುಮಾರಿ ಇಂಡಿಯಾ ಟುಡೆಯಲ್ಲಿ ಬರೆದರು: 'ಬಾಬರಿ ಮಸೀದಿಯನ್ನು ಧ್ವಂಸಗೊಳಿಸುವ ಮೂಲಕ ಹಿಂದುಗಳಿಗೆ ಏನು ಲಭಿಸಿತು. ನೆರೆಯ ದೇಶಗಳಲ್ಲಿ ಹಲವಾರು ದೇವಾಲಯಗಳು ಹಾನಿಗೊಂಡವು. ಧ್ವಂಸಗೊಂಡ ಮಸೀದಿಯನ್ನು ಪುನರ್ನಿರ್ಮಿಸಿ ಕೊಡದಿರಲು ನಮ್ಮ ಸಂಸ್ಕೃತಿ ಒಪ್ಪುವುದಿಲ್ಲ, ಆದರೆ ಆಕ್ರಮಿಸಲ್ಪಟ್ಟ ದೇವಾಲಯಗಳ ಜೀರ್ಣೋದ್ಧಾರ ಸಾಧ್ಯವಿದೆಯೇ.?'

ಆದರೆ, ನಡೆದದ್ದೇ ಬೇರೆ. ಒಂಬತ್ತು ತಿಂಗಳ ಒಳಗೆ ಆಕ್ರಮಿಸಲ್ಪಟ್ಟ ಎಲ್ಲ ದೇವಾಲಯಗಳನ್ನು ಪಾಕಿಸ್ತಾನ ಹಾಗೂ ಬಾಂಗ್ಲಾ ಸರಕಾರ ಪುನಃ ನಿರ್ಮಿಸಿತು. ಇದನ್ನು ಭಾರತೀಯ ಪತ್ರಿಕೆಗಳೇ ಪ್ರಕಟಿಸಿದುವು. ಆ ವಾರ್ತೆಯ ಕಟ್ಟಿಂಗ್‌ಗಳು ಇಂಡಿಯಾ ಟುಡೆಯ ಲೇಖನದ ಕಾಪಿಯನ್ನು ಕಳುಹಿಸಿ ಕೊಟ್ಟು ಪ್ರತಿಕ್ರಿಯೆ ಬಯಸಿದರೂ ಸುಗತ ಕುಮಾರಿ ಉತ್ತರಿಸುವ ಸೌಜನ್ಯ ತೋರಿಸಲಿಲ್ಲ, ಕಾರಣವೇನೆಂದರೆ ವಾಸ್ತವ ಅವರ ಊಹೆಗಿಂತ ಮತ್ತು ದೇಶದಲ್ಲಿ ನಡೆಸಲಾಗಿರುವ ಪ್ರಚಾರಗಳಿಗಿಂತ ಸಂಪೂರ್ಣ ಭಿನ್ನವಾಗಿತ್ತು.

ಅನ್ಯಧರ್ಮೀಯರ ಆರಾಧ್ಯ ವಸ್ತುಗಳನ್ನು ಅವಹೇಳನ ಗೊಳಿಸಲು, ಅವರ ಆರಾಧನಾ ಸ್ಥಳಗಳನ್ನು ಹಾಳುಗೆಡವಲು ಇಸ್ಲಾಮ್ ಯಾರಿಗೂ ಅನುಮತಿ ನೀಡಿಲ್ಲ, ಆದ್ದರಿಂದ ಮುಸ್ಲಿಮ್ ರಾಷ್ಟ್ರಗಳಲ್ಲಿ ಆರಾಧನಾಲಯಗಳು ಆಕ್ರಮಿಸಲ್ಪಡುವುದೋ, ಧ್ವಂಸಕ್ಕೀಡಾಗುವುದೋ ಸಾಧ್ಯವಿಲ್ಲ, ಅಥವಾ ಯಾವುದಾದರೂ ಅವಿವೇಕಿಗಳು ಅಂತಹ ಕೃತ್ಯ ನಡೆಸಿದರೆ ಅದನ್ನು ಪುನರ್ನಿರ್ಮಿಸಲು ಇಸ್ಲಾಮೀ ಸಮಾಜ ಹಾಗೂ ಸರಕಾರ ಬದ್ಧವಾಗಿದೆ.

## ಗಲ್ಫ್ ದೇಶಗಳಲ್ಲಿ ಕ್ಷೇತ್ರಗಳಿಗೆ ವಿರೋಧ

**ಗಲ್ಫ್ ರಾಷ್ಟ್ರಗಳಲ್ಲಿ ಹಿಂದೂ ಕ್ಷೇತ್ರಗಳನ್ನು ನಿರ್ಮಿಸುವ ಅನುಮತಿಯಿಲ್ಲವೆಂದು ಕೇಳಿದ್ದೇನೆ. ಅದಕ್ಕೆ ಕಾರಣವೇನು?**

ಗಲ್ಫ್ ದೇಶಗಳಲ್ಲಿ ಹಿಂದೂ ಪ್ರಜೆಗಳು ಇಲ್ಲ, ಅಲ್ಲಿ ವಾಸ್ತವ್ಯವಿರುವ ಹಿಂದುಗಳು ಉದ್ಯೋಗಕ್ಕಾಗಿ ಹೋದ ವಿದೇಶಿಯರು. ಮುಸ್ಲಿಮರೂ ಸೇರಿದಂತೆ ವಿದೇಶಿಗಳಿಗೆ ಅಲ್ಲಿ ಸ್ಥಳ ಖರೀದಿಸುವ, ಆರಾಧನಾಲಯಗಳನ್ನು ನಿರ್ಮಿಸುವ ಅನುಮತಿ ಇಲ್ಲ, ವಿದೇಶಿ ಮುಸ್ಲಿಮರಿಗೂ ಮಸೀದಿಯನ್ನು ನಿರ್ಮಿಸುವ ಅನುಮತಿ ಇಲ್ಲ, ವಿದೇಶಿಗಳಿಗೆ ಭಾರತದಲ್ಲೂ ಇತರ ಜಾತ್ಯತೀತ ರಾಷ್ಟ್ರಗಳಲ್ಲೂ ಸ್ವಂತ ಆರಾಧನಾಲಯ ಕಟ್ಟುವ ಅನುಮತಿ ಇಲ್ಲ ಎಂಬುದು ಗಮನಾರ್ಹ.

ಹಾಗಿದ್ದರೂ ದೀರ್ಘಕಾಲದಿಂದ ಗಲ್ಫ್ ದೇಶಗಳಲ್ಲಿ ಬದುಕುತ್ತಿರುವ ಸಿಂಧಿ ಹಿಂದುಗಳಿಗೆ ದೇವಾಲಯ ನಿರ್ಮಿಸುವ ವಿಶೇಷ ಪರವಾನಗಿಯನ್ನು ಸರಕಾರವು ನೀಡಿತ್ತು. ಮಲಯಾಳಂನ ಆರ್.ಎಸ್.ಎಸ್. ವಾರಪತ್ರಿಕೆ ಕೇಸರಿ ಬರೆಯುತ್ತದೆ. 'ಮಸ್ಕತ್, ಬಹ್ರೈನ್,ದುಬೈ ಮುಂತಾದ ಗಲ್ಫ್ ದೇಶಗಳಲ್ಲಿ ಭಾರತೀಯರು, ಹಿಂದೂಗಳಾದ ಸಿಂಧಿಗಳು ವಾಸಿಸುತ್ತಿದ್ದಾರೆ. ಆ ದೇಶಗಳ ಅಭಿವೃದ್ಧಿಯಲ್ಲಿ ಗಣನೀಯ ಪಾತ್ರವನ್ನು ವಹಿಸುತ್ತಿದ್ದಾರೆ. ಇದನ್ನು ಅರ್ಥಮಾಡಿಕೊಂಡಿರುವ ಅಲ್ಲಿನ ಆಡಳಿತಗಾರರು ಅವರಿಗೆ ವಿಶೇಷ ಪರಿಗಣನೆಯನ್ನು ನೀಡುತ್ತಿದ್ದಾರೆ.' (6-4-1986)

'ದುಬೈಯ ಶೇಖ್ ಅವರಿಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸಲು ವಿಶೇಷವಾಗಿ ಪ್ರಯತ್ನಿಸುತ್ತಿದ್ದಾರೆ. ಸಿಂಧಿಗಳ ಬೇಡಿಕೆಯಂತೆ ಒಂದು ಹಿಂದೂ ಕ್ಷೇತ್ರ, ಇಷ್ಟದೇವತೆಗಳನ್ನಿರಿಸಿ ಪೂಜಿಸುವ ಮತ್ತು ಉತ್ಸವಗಳನ್ನು ನಡೆಸುವ ಅನುಮತಿಯನ್ನು ನೀಡಲಾಗಿದೆ. ಹಿಂದೂಗಳಿಗೆ ಅಂತ್ಯ ಸಂಸ್ಕಾರಕ್ಕಾಗಿ ಒಂದು ಪ್ರತ್ಯೇಕ ಶ್ಮಶಾನಕ್ಕಾಗಿ ಸ್ಥಳವನ್ನು ನೀಡಲಾಗಿದೆ.' (ಕೇಸರಿ 5-1-1986)

## ಜಿಝಿಯಾ

**ಇಸ್ಲಾಮೀ ರಾಷ್ಟ್ರವು ಮುಸ್ಲಿಮೇತರರಿಂದ ಜಿಝಿಯಾ ಎಂಬ ತೆರಿಗೆಯನ್ನು ಪಡೆಯುತ್ತಿದೆಯಲ್ಲವೇ? ಇದು ದೊಡ್ಡ ಅನ್ಯಾಯವಲ್ಲವೇ?**

ಜೀಝಿಯಾ ಧಾರ್ಮೀಕ ತೆರಿಗೆಯಲ್ಲ, ಅದು ಸ್ಪಷ್ಟ ತಪ್ಪು ಧಾರಣೆಯಾಗಿದೆ. ಇದು ಅತ್ಯಂತ ಹೆಚ್ಚು ತಪ್ಪುಕಲ್ಪನೆಗೊಳಗಾದ ವಿಷಯವಾದುದರಿಂದ ಸ್ವಲ್ಪ ವಿವರಿಸಿದರೆ ಉತ್ತಮವೆಂದು ಭಾವಿಸಿದ್ದೇನೆ. ಮುಸ್ಲಿಮರು ತಮ್ಮ ಕೃಷಿ ಉತ್ಪನ್ನದ ವರಮಾನದ ಹತ್ತು ಶೇಕಡಾ ಮತ್ತು ಇತರ ಆರ್ಥಿಕ ವರಮಾನಗಳ ಎರಡೂವರೆ ಶೇಕಡಾವನ್ನು ಸರಕಾರಿ ಬೊಕ್ಕಸಕ್ಕೆ ಒಪ್ಪಿಸಲೇಬೇಕು. ಇದು ಧಾರ್ಮಿಕ ಆರಾಧನಾ ಕರ್ಮವೂ ಆಗಿರುವುದರಿಂದ ಇತರ ಧರ್ಮೀಯರ ಮೇಲೆ ಹೇರುವುದು ಸಮಂಜಸವಲ್ಲ, ಏಕೆಂದರೆ ಅದು ಅವರ ಧಾರ್ಮಿಕ ಸ್ವಾತಂತ್ರ್ಯವನ್ನು ನಿಷೇಧಿಸಿದಂತಾಗುತ್ತದೆ. ಆದ್ದರಿಂದ ಸಮಾಜದಲ್ಲಿ ಆರ್ಥಿಕ ಸಮಾನತೆ ಕಾಪಾಡಲು ಮುಸ್ಲಿಮೇತರ ಪ್ರಜೆಗಳಿಗೆ ಇಸ್ಲಾಮಿನ ಆರಾಧನೆಗಳೊಂದಿಗೆ ಸಂಬಂಧವಿಲ್ಲದ ಇನ್ನೊಂದು ತೆರಿಗೆಯನ್ನು ನಿರ್ಧರಿಸಲಾಯಿತು. ಅದುವೇ ಜಿಝಿಯಾ. ಮುಸ್ಲಿಮರಿಂದ ಕಡ್ಡಾಯವಾಗಿ ವಸೂಲಿ ಮಾಡುತ್ತಿರುವ ಝಕಾತಿಗೆ ಬದಲಿಯಾದ ತೆರಿಗೆಯಿದು.

ಆರ್ಥಿಕವಾಗಿ ಸಬಲವಾಗಿರುವ ಮುಸ್ಲಿಮರೆಲ್ಲಾ ಝಕಾತ್ ನೀಡುವುದು ಕಡ್ಡಾಯವಾಗಿದೆ. ಸ್ತ್ರೀಯರು, ಮಕ್ಕಳು, ವೃದ್ಧರು, ರೋಗಿಗಳು... ಹೀಗೆ ಯಾರೂ ಕೂಡಾ ಇದರಿಂದ ಮುಕ್ತರಲ್ಲ, ಆದರೆ ಜಿಝಿಯಾದಲ್ಲಿ ಹಲವಾರು ಅನುಕೂಲತೆಗಳು, ರಿಯಾಯಿತಿಯೂ ಇದೆ. ಸ್ತ್ರೀಯರು, ಮಕ್ಕಳು, ಅಂಧರು, ವೃದ್ಧರು, ಮಾನಸಿಕ ಅಸ್ವಸ್ಥರು, ನಿತ್ಯರೋಗಿಗಳು, ಮಠದಲ್ಲಿರುವ ಸನ್ಯಾಸಿಗಳು, ಪುರೋಹಿತರಂತಹವರಿಗೆ ಜಿಝಿಯಾ ವಿಧಿಸಲಾಗುವುದಿಲ್ಲ, ಆದ್ದರಿಂದ ಜಿಝಿಯಾ ಮುಸ್ಲಿಮೇತರ ಪ್ರಜೆಗಳೊಂದಿಗೆ ಮಾಡಿದ ಅನ್ಯಾಯವಲ್ಲ, ಅವರಿಗೆ ಆರ್ಥಿಕವಾಗಿ ರಿಯಾಯಿತಿ ನೀಡುವ ಉಪಾಧಿಯಾಗಿದೆ.

ಯಾರಾದರೂ ಮುಸ್ಲಿಮರಂತೆ ಝಕಾತ್ ನೀಡಲು ಸ್ವಯಂಪ್ರೇರಿತರಾಗಿ ಮುಂದೆ ಬಂದರೆ ಇಸ್ಲಾಮೀ ರಾಷ್ಟ್ರವು ಅವರಿಂದ ಜಿಝಿಯಾ ವಸೂಲು ಮಾಡುವುದಿಲ್ಲ. ಇತಿಹಾಸದಲ್ಲಿ ಇದಕ್ಕೆ ಬಹಳಷ್ಟು ಉದಾಹರಣೆಗಳನ್ನು ಕಾಣಬಹುದು. ಒಂದು ಹೀಗಿದೆ: ಸರ್ ಥಾಮಸ್ ಆರ್ನಲ್ಡ್ ಬರೆಯುತ್ತಾರೆ: 'ಅವರೊಂದಿಗೆ (ತಗ್‌ಲೀಬ್ ಗೋತ್ರ) ಮುಸ್ಲಿಮೇತರ ಗೋತ್ರಗಳಿಗೆ ನೀಡುವ ರಕ್ಷಣೆಗೆ ಬದಲಾಗಿ ನೀಡಬೇಕಾದ ತೆರಿಗೆ 'ಜಿಝಿಯಾ' ಪಾವತಿಸುವಂತೆ ಖಲೀಫ್ ಉಮರುಲ್ ಫಾರೂಕ್ ಹೇಳಿದರು. ಆದರೆ ಜಿಝಿಯಾ ಪಾವತಿಸುವುದು ಅವಮಾನವೆಂದು ಭಾವಿಸಿದ ತಗ್‌ಲೀಬ್ ಗೋತ್ರವು ತಮಗೆ ಮುಸ್ಲಿಮರಂತೆ ತೆರಿಗೆ (ಝಕಾತ್) ಪಾವತಿಸಲು ಅನುಮತಿಸಬೇಕೆಂದು ಕೇಳಿಕೊಂಡಿತು. ಖಲೀಫರು ಒಪ್ಪಿಗೆ ನೀಡಿದ ಬಳಿಕ ಅವರು ಮುಸ್ಲಿಮರಂತೆ ಜಿಝಿಯಾಕ್ಕಿಂತ ಎರಡು ಪಟ್ಟು ಹೆಚ್ಚು ಮೊತ್ತವನ್ನು ಖಜಾನೆಗೆ ನೀಡುತ್ತಿದ್ದರು.' (ಇಸ್ಲಾಮ್: ಸಂದೇಶವೂ ಪ್ರಚಾರವೂ ಪುಟ 62)

ಇಸ್ಲಾಮೀ ರಾಷ್ಟ್ರದ ಸರ್ವ ಪ್ರಜೆಗಳ ರಕ್ಷಣೆಯು ಹೊಸ ಸರಕಾರದ ಮೇಲಿದೆ. ಮುಸ್ಲಿಮ್-ಮುಸ್ಲಿಮೇತರ ಎಂಬ ಭೇದವಿಲ್ಲದೆ ಎಲ್ಲರೂ ಸೊತ್ತು ಸ್ವಾಭಿಮಾನವನ್ನು ರಕ್ಷಿಸಲು ಕಡ್ಡಾಯ ಸೈನಿಕ ಸೇವೆಯನ್ನು ಮುಸ್ಲಿಮರಿಗೆ ಜಾರಿಗೊಳಿಸಲಾಗಿತ್ತು. ಈ ರೀತಿ ಅವರ ಸಂರಕ್ಷಣೆಯನ್ನು ಸಂಪೂರ್ಣವಾಗಿ ವಹಿಸಿಕೊಂಡು ಸೈನಿಕ ಸೇವೆಯಿಂದ ಅವರನ್ನು ಮುಕ್ತಗೊಳಿಸಿದ್ದಕ್ಕೆ ಬದಲಾಗಿಯೂ ಜಿಝಿಯಾ ವಸೂಲಿ ಮಾಡಲಾಗುತ್ತಿತ್ತು. ಸೈನಿಕ ಸೇವೆಗೆ ಅಂದು ಸಂಬಳವಿರಲಿಲ್ಲವೆಂಬುದು ಗಮನಾರ್ಹ. ಯಾವುದೋ ಪರಿಸ್ಥಿತಿಯಲ್ಲಿ ದೇಶವಾಸಿಗಳಿಗೆ ಸಂರಕ್ಷಣೆ ನೀಡಲು ಸರಕಾರಕ್ಕೆ ಸಾಧ್ಯವಾಗದಿದ್ದರೆ ಜಿಝಿಯಾವನ್ನು ಮರಳಿ ನೀಡುವುದು ವಾಡಿಕೆಯಾಗಿತ್ತು. ಅದೇ ರೀತಿ ಸೈನಿಕ ಸೇವೆಗೆ ಸ್ವಯಂ ಸನ್ನದ್ಧರಾಗಿ ಮುಂದೆ ಬಂದವರನ್ನು ಜಿಝಿಯಾದಿಂದ ಮುಕ್ತಗೊಳಿಸಲಾಗುತ್ತಿತ್ತು. ಸರ್ ಥಾಮಸ್ ಆರ್ನಲ್ಡ್ ಬರೆಯುತ್ತಾರೆ: 'ಕೆಲವರು ಹೇಳುವ ಪ್ರಕಾರ ಇಸ್ಲಾಮ್ ಧರ್ಮವನ್ನು ಸ್ವೀಕರಿಸಲು ನಿರಾಕರಿಸಿದವರಿಗೆ ಶಿಕ್ಷೆಯ ರೂಪದಲ್ಲಿ ಕ್ರೈಸ್ತರಿಂದ ಜಿಝಿಯಾವನ್ನು ವಸೂಲು ಮಾಡುತ್ತಿದ್ದುದಲ್ಲ, ಎಲ್ಲಾ ಮುಸ್ಲಿಮೇತರ ಪ್ರಜೆಗಳಿಂದಲೂ ಇದನ್ನು ಸಂಗ್ರಹಿಸಲಾಗುತ್ತಿತ್ತು. ಧಾರ್ಮಿಕ ಕಾರಣಗಳಿಂದ ಅವರನ್ನು ಕಡ್ಡಾಯ ಸೈನಿಕ ಸೇವೆಯಿಂದ ದೂರವಿರಿಸಲಾಗಿತ್ತು. ಮುಸ್ಲಿಮರು ನೀಡುತ್ತಿದ್ದ ರಕ್ಷಣೆಗೆ ಬದಲಿಯಾಗಿ ಅವರು ಜಿಝಿಯಾ ಕೊಡಬೇಕಾಗಿತ್ತು.'

'ತುರ್ಕಿ ಆಡಳಿತ ಕಾಲದಲ್ಲಿ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಕ್ರೈಸ್ತರಿಗೆ ಜಿಝಿಯಾದಿಂದ ವಿನಾಯಿತಿ ನೀಡಲಾಗಿತ್ತು. ತೀರಪ್ರದೇಶಗಳಾದ ಸಿತ್ತಿರೋಸ್, ಗರಾನಿಯವನ್ನು ಕಾಯಲು ಶಸ್ತ್ರಧಾರಿಗಳ ಒಂದು ತಂಡವನ್ನು ನೀಡುತ್ತೇವೆಂಬ ಶರತ್ತಿನೊಂದಿಗೆ ಅಲ್ಬೇನಿಯಾದ ಕ್ರೈಸ್ತವರ್ಗವಾದ ಮೆಗಾರಿಗಳನ್ನು ತುರ್ಕಿಯಲ್ಲಿ ಜಿಝಿಯಾದಿಂದ ಮುಕ್ತಗೊಳಿಸಲಾಗಿತ್ತು. ತುರ್ಕಿ ಸೈನ್ಯಕ್ಕೆ ಮುಂಚೆಯೇ ಮೊದಲು ತೆರಳಿ ಸೇತುವೆ, ಹಾದಿಗಳನ್ನು ಸರಿಪಡಿಸುತ್ತಿದ್ದ ಕ್ರೈಸ್ತರಿಂದ ಜಿಝಿಯಾ ಪಡೆಯುತ್ತಿರಲಿಲ್ಲ, ಮಾತ್ರವಲ್ಲ ಕಂದಾಯ ವಸೂಲಿ ಮಾಡದೆ ಭೂಮಿಯನ್ನು ನೀಡಲಾಗಿತ್ತು.

ಹೈಸ್ರದ ಕ್ರೈಸ್ತರು ಸುಲ್ತಾನ್‌ರಿಗೆ ಜಿಝಿಯಾ ನೀಡುತ್ತಿರಲಿಲ್ಲ, ಅದಕ್ಕೆ ಬದಲಾಗಿ 250 ದೃಢಕಾಯದ ನಾವಿಕರನ್ನು ತುರ್ಕಿ ಸೇನೆಗೆ ನೀಡಿದರು.

ಆರ್ಮತ್ತೋಳಿ ಎಂದು ಕರೆಯಲಾಗುತ್ತಿದ್ದ ದಕ್ಷಿಣ ರುಮೇನಿಯಾದವರು ಹದಿನಾರು, ಹದಿನೇಳನೇ ಶತಮಾನದಲ್ಲಿ ತುರ್ಕಿ ಸೈನ್ಯದ ಮುಖ್ಯ ಅಂಗವಾಗಿದ್ದರು. ಸ್ಕುಟಾರ್‌ಗೆ ಪಶ್ಚಿಮದಲ್ಲಿರುವ ಪರ್ವತಗಳಲ್ಲಿ ವಾಸಿಸಿದ್ದ ಮಿರ್ದಿಗಳು ಎಂಬ ಅರೇಬಿಯನ್ ಕ್ಯಾಥೋಲಿಕರನ್ನು ತೆರಿಗೆಯಿಂದ ಮುಕ್ತಗೊಳಸಲಾಗಿತ್ತು. ಯುದ್ಧದ ಸಂದರ್ಭದಲ್ಲಿ ಆಯುಧಧಾರಿಗಳನ್ನುನೀಡುತ್ತೇವೆಂಬ ಒಪ್ಪಂದವಿತ್ತು. ಅದರಂತೆ ಗ್ರೀಕ್‌ನ ಕ್ರೈಸ್ತರಿಗೂ ಜಿಝಿಯಾ ವಿಧಿಸಲಿಲ್ಲ, ಕಾನ್‌ಸ್ಟಾಂಟಿನೋಪಲ್‌ಗೆ ಶುದ್ಧ ಜಲವನ್ನು ತರುತ್ತಿದ್ದ ಕಲ್ಲುಗುಂಡಿಗಳನ್ನು ಅವರೇ ಸಂರಕ್ಷಿಸಿದ್ದರು. ನಗರದ ಮದ್ದುಗುಂಡಿನ ಕಾರ್ಖಾನೆಗೆ ಕಾವಲುಗಾರರಾದವರಿಗೂ ಜಿಝಿಯಾ ಇರಲಿಲ್ಲ, ಆದರೆ ಈಜಿಪ್ಟಿನ ಗ್ರಾಮೀಣ ಕೃಷಿಕರನ್ನು ಸೈನಿಕ ಸೇವೆಯಿಂದ ದೂರವಿರಿಸಿದಾಗ ಅವರಿಗೂ ಕೂಡ ಕ್ರೈಸ್ತರಂತೆ ತೆರಿಗೆಯನ್ನು ವಿಧಿಸಲಾಯಿತು.' (ಸರ್ ಥಾಮಸ್–ಆರ್ನಲ್ಡ್ ಇಸ್ಲಾಮ್: ಸಂದೇಶವೂ ಪ್ರಚಾರವೂ, ಪುಟ 73–76)

ಪ್ರವಾದಿವರ್ಯರ ಕಾಲದಲ್ಲಿ ಮದೀನಾದ ಮುಸ್ಲಿಮೇತರ ವಿಭಾಗಗಳು ರಾಷ್ಟ್ರದ ರಕ್ಷಣಾ ಕಾರ್ಯಗಳಲ್ಲಿ ಸೇವೆಸಲ್ಲಿಸುತ್ತಿದ್ದುದರಿಂದ ಜಿಝಿಯಾವನ್ನು ಪಡೆಯುತ್ತಿರಲಿಲ್ಲ.

ಸಂಕ್ಷಿಪ್ತವಾಗಿ, ಪಾಶ್ಚಾತ್ಯರ ಅಪಪ್ರಚಾರದಂತೆ, ವಿಶೇಷವಾಗಿ ವರ್ಣಿಸುವಂತೆ ಜಿಝಿಯಾ ಧಾರ್ಮಿಕ ತೆರಿಗೆ ಖಂಡಿತ ಅಲ್ಲ, ವಾಸ್ತವದಲ್ಲಿ ಯುದ್ಧದ ತೆರಿಗೆಯಾಗಿದೆ. ಶಕ್ತಿ, ಸಾಮರ್ಥ್ಯವಿದ್ದರೂ ಕೂಡ ಸೈನ್ಯದಲ್ಲಿಸೇವೆಗೆ ಸಿದ್ಧರಾಗದವರಿಂದ ಅದನ್ನುಸಂಗ್ರಹಿಸಲಾಗುತ್ತದೆ. ಅಂದು ಕಡ್ಡಾಯ ಸೈನಿಕ ಸೇವೆಯಿದ್ದ ಸಂದರ್ಭದಲ್ಲೂ ವಿನಾಯಿತಿ ನೀಡಲ್ಪಟ್ಟು ದೈಹಿಕ ಹಾಗೂ ಆರ್ಥಿಕ ಸುರಕ್ಷತೆ ಅನುಭವಿಸಿದುದರ ಪ್ರತಿಫಲವಾಗಿತ್ತು. ಆದರೆ ಇಸ್ಲಾಮೀ ರಾಷ್ಟ್ರದ ಮುಸ್ಲಿಮ್ ಪ್ರಜೆಗಳು ಕಡ್ಡಾಯ ಸೈನಿಕ ಸೇವೆಯನ್ನು ನೀಡಿದರೂ ಸರ್ಕಾರಕ್ಕೆ ಝಕಾತ್ ನೀಡಬೇಕಾಗಿತ್ತು. ಎಲ್ಲಾ ಕಾಲದಲ್ಲೂ ಝಕಾತ್‌ನ ಮೌಲ್ಯವು ಜಿಝಿಯಾಕ್ಕಿಂತ ಬಹಳಷ್ಟು ಹೆಚ್ಚಾಗಿತ್ತು ಎಂಬುದು ಗಮನಾರ್ಹ. ಮುಸ್ಲಿಮೇತರ ಪ್ರಜೆಗಳು ಝಕಾತ್ ನೀಡಲು ಅಥವಾ ಸೈನಿಕ ಸೇವೆ ನೀಡಲು ಸ್ವಯಂ ಸಿದ್ಧರಾದರೆ ಜಿಝಿಯಾದಿಂದ ಮುಕ್ತಗೊಳಿಸಲಾಗುತ್ತಿತ್ತು. ಸೇನಾವೃತ್ತಿಯು ವರಮಾನವಿರುವ ಉದ್ಯೋಗವಾಗಿ ಬದಲಾದ ಇಂದಿನ ಕಾಲದಲ್ಲೂ ಮುಸ್ಲಿಮೇತರ ಪ್ರಜೆಗಳಿಗೆ ಜಿಝಿಯಾ ಹೇರಬಾರದು. ಆದ್ದರಿಂದ ಇಸ್ಲಾಮೀ ರಾಷ್ಟ್ರದಲ್ಲಿ ಧಾರ್ಮಿಕ ಅಲ್ಪಸಂಖ್ಯಾತರು ಸಂಕಷ್ಟ ಅನುಭವಿಸುತ್ತಿಲ್ಲ, ಮಾತ್ರವಲ್ಲದೆ ಝಕಾತ್‌ನಿಂದ ಮುಕ್ತರಾಗಿರುವುದರಿಂದ ಮುಸ್ಲಿಮರಿಗಿಂತಲೂ ಉತ್ತಮ ಆರ್ಥಿಕತೆಯನ್ನು ಜೀವನ ಸೌಕರ್ಯವನ್ನು ಅನುಭವಿಸುತ್ತಿದ್ದಾರೆ.

## 31 ಇಸ್ಲಾಮಿನಲ್ಲಿ ಮಹಿಳೆಯ ಸ್ಥಾನಮಾನ

**ಇಸ್ಲಾಮಿನಲ್ಲಿ ಸ್ತ್ರೀ-ಪುರುಷ ಸಮಾನತೆಯಿದೆಯೇ? ಸ್ತ್ರೀಯರ ಸ್ಥಾನ ಪುರುಷರಿಗಿಂತ ಬಹಳ ಕೆಳಗಿದೆಯಲ್ಲವೇ?**

ಮನುಷ್ಯರು ಹಲವು ರೀತಿಯಲ್ಲಿದ್ದಾರೆ. ಮಾನವನ ಗತಿಗನುಗುಣವಾಗಿ ಅವರ ಸ್ಥಾನಮಾನಗಳಲ್ಲೂ, ಹಕ್ಕುಬಾಧ್ಯತೆಯಲ್ಲೂ ವ್ಯತ್ಯಾಸವಿರಿಸುವುದು ಸ್ವಾಭಾವಿಕ ಮಾತ್ರವಲ್ಲ ಅನಿವಾರ್ಯವೂ ಹೌದು. ಅದೇ ರೀತಿ ಸ್ತ್ರೀ-ಪುರುಷರ ನಡುವೆ ಶಾರೀರಿಕವಾಗಿಯೂ ಮಾನಸಿಕವಾಗಿಯೂ ಬಹಳ ಅಂತರವಿದೆ. ಪುರುಷರು ಎಷ್ಟೇ ಶ್ರಮಿಸಿದರೂ ಗರ್ಭಧರಿಸಲು, ಹೆರಲು, ಎದೆ ಹಾಲುಣಿಸಲು ಸಾಧ್ಯವಿಲ್ಲವಲ್ಲಾ? ಮಹಿಳೆ ಪುರುಷರಿಗಿಂತ ಭಿನ್ನವಾಗಿ ತಿಂಗಳ ನಿಶ್ಚಿತ ದಿನಗಳಲ್ಲಿ ಆರ್ತವ ಹಾಗೂ ಅದರ ದೈಹಿಕ ಮಾನಸಿಕ ಸಮಸ್ಯೆಗಳನ್ನು ಅನುಭವಿಸುತ್ತಾಳೆ. ಪುರುಷನು ಸ್ತ್ರೀಗಿಂತ ಬಲಶಾಲಿಯೂ, ಶಕ್ತಿಸಾಮರ್ಥ್ಯವುಳ್ಳವನೂ ಆಗಿದ್ದು ಕಷ್ಟಕರ ಕೆಲಸಗಳನ್ನು ಮಾಡಲು ಸಮರ್ಥನಾಗಿದ್ದಾನೆ.

ಪುರುಷನ ಎಲ್ಲ ಶಾರೀರಿಕ ಅವಯವಗಳು ಸ್ತ್ರೀಗಿಂತ ಸಂಪೂರ್ಣ ಭಿನ್ನವಾಗಿದೆ. ಪ್ರಸಿದ್ಧ ಶರೀರ ಶಾಸ್ತ್ರಜ್ಞರಾದ ಹಾವಿಲೋಕ್ ಎಲ್ಲಿಸ್ ಹೇಳುತ್ತಾರೆ: 'ಪುರುಷನು ಅವನ ಕೈಬೆರಳ ತುದಿಯವರೆಗೆ ಪುರುಷನಾಗಿದ್ದಾನೆ. ಮಹಿಳೆ ಆಕೆಯ ಕಾಲುಬೆರಳಿನ ತುದಿಯವರೆಗೆ ಸ್ತ್ರೀಯೇ ಆಗಿದ್ದಾಳೆ.'

ಶಾರೀರಿಕ ಘಟಕಗಳ ಅಂತರವು ಮಾನಸಿಕ ಹಾಗೂ ವೈಚಾರಿಕತೆಯಲ್ಲೂ ಗೋಚರಿಸುತ್ತದೆ. ಆದ್ದರಿಂದ ಸ್ತ್ರೀ-ಪುರುಷರ ನಡುವೆ ದೈಹಿಕ,ಮಾನಸಿಕವೂ ಆದ ಸಮಾನತೆ ಖಂಡಿತ ಇಲ್ಲ. ಆದ್ದರಿಂದ ಸ್ತ್ರೀ-ಪರುಷ ಸಮಾನತೆ ಎಂಬುದು ಅಪ್ರಾಯೋಗಿಕ ಮತ್ತು ಪ್ರಕೃತಿ ವಿರುದ್ಧವಾಗಿದೆ.

ಇಸ್ಲಾಮ್ ಎಂಬುದು ಮಾನವ ಸಮೂಹದ ಸೃಷ್ಟಿಕರ್ತನೂ, ಸಂರಕ್ಷಕನೂ ಆದ ದೇವನು ನೀಡಿದ ಜೀವನ ವ್ಯವಸ್ಥೆಯಾಗಿದೆ. ಆದ್ದರಿಂದ ಅದು ಮಾನವ ಪ್ರಕೃತಿಗೆ ಯೋಗ್ಯವೂ, ಹೊಂದಿಕೊಳ್ಳುವಂತಹದ್ದೂ ಆಗಿದೆ. ಇಸ್ಲಾಮ್ ಧರ್ಮ ಸ್ತ್ರೀ-ಪುರುಷರನ್ನು ಹಕ್ಕು ಬಾಧ್ಯತೆಗಳಿಗಾಗಿ ಹೋರಾಡುವ ಶತ್ರುಗಳಂತೆ ನೋಡುವುದಿಲ್ಲ, ಒಂದೇ ವರ್ಗದ ಅನ್ಯೋನ್ಯವಾಗಿ ಪರಸ್ಪರ ಸಹಕರಿಸುತ್ತಾ ಜೀವನ ಸಾಗಿಸಬೇಕಾದ ಎರಡು ಸದಸ್ಯರೆಂದು ತಿಳಿಸಿದೆ. ಅಲ್ಲಾಹನು ಹೇಳುತ್ತಾನೆ: 'ನೀವೆಲ್ಲರೂ ಒಂದೇ ವರ್ಗಕ್ಕೆ ಸೇರಿದವರಾಗಿದ್ದೀರಿ.'

(ಪವಿತ್ರ ಕುರ್‌ಆನ್ 4: 25) ಪ್ರವಾದಿಯವರು ಹೇಳಿದರು: 'ಸ್ತ್ರೀಯರು ಪುರುಷರ ಭಾಗವಾಗಿದ್ದಾರೆ.'(ಅಬೂದಾವೂದ್)

ಆದ್ದರಿಂದ ಸ್ತ್ರೀ-ಪುರುಷರ ಸ್ಥಾನಮಾನಗಳನ್ನು ಗಣಿತಶಾಸ್ತ್ರದ ರೀತಿಯಲ್ಲಿ ಅರ್ಥೈಸಲು ಸಾಧ್ಯವಿಲ್ಲ, ಕೆಲವು ವಿಷಯಗಳಲ್ಲಿ ಪುರುಷರಿಗೆ ಪ್ರಾಧಾನ್ಯತೆಯಿದ್ದರೆ, ಇನ್ನು ಕೆಲವು ವಿಷಯಗಳಲ್ಲಿ ಮಹಿಳೆ ಮೇಲುಗೈ ಪಡೆಯುತ್ತಾಳೆ. ಇದಕ್ಕೆ ಸಂಬಂಧಿಸಿದ ಇಸ್ಲಾಮಿನ ಕೆಲವು ದೃಷ್ಟಿಕೋನಗಳು ಹೀಗಿವೆ:

1. ಅಲ್ಲಾಹನ ಬಳಿ ಸ್ತ್ರೀ-ಪುರುಷರ ನಡುವೆ ಯಾವುದೇ ಅಂತರವೋ, ತಾರತಮ್ಯವೋ ಇಲ್ಲ, ಅವರಿಗೆ ಸಂಪೂರ್ಣ ಸಮಾನತೆಯನ್ನು ನೀಡಲಾಗಿದೆ.

**'ಪುರುಷನಾಗಿರಲಿ ಸ್ತ್ರೀ ಆಗಿರಲಿ ಯಾರು ಸತ್ಕರ್ಮವೆಸಗುವನೋ ಅವನು ಸತ್ಯವಿಶ್ವಾಸಿಯಾಗಿದ್ದರೆ ಅವನಿಗೆ ನಾವು ಇಹಲೋಕದಲ್ಲಿ ಪರಿಶುದ್ಧ ಜೀವನವನ್ನು ದಯಪಾಲಿಸುವೆವು. ಮತ್ತು ಇಂತಹವರಿಗೆ ಪರಲೋಕದಲ್ಲಿ ಅವರ ಕರ್ಮಗಳಿಗನುಸಾರ ಪ್ರತಿಫಲ ನೀಡುತ್ತೇವೆ.' (ಪವಿತ್ರ ಕುರ್‌ಆನ್ 16: 97)**

**'ಪುರುಷನಿರಲಿ, ಸ್ತ್ರೀ ಇರಲಿ ಸತ್ಕರ್ಮವೆಸಗಿದವನು ಸತ್ಯವಿಶ್ವಾಸಿಯಾಗಿದ್ದರೆ ಇಂತಹವರೆಲ್ಲರೂ ಸ್ವರ್ಗ ಪ್ರವೇಶಿಸುವರು.' (ಪವಿತ್ರ ಕುರ್‌ಆನ್ 40: 40)**

**'ಅವರ ಪ್ರಭು ಹೇಳಿದನು: ಪುರುಷರಾಗಲಿ ಸ್ತ್ರೀಯರಾಗಲಿ, ನಿಮ್ಮಲ್ಲಿ ಯಾರೊಬ್ಬನ ಕರ್ಮವನ್ನೂ ಅವನು ನಿಷ್ಫಲಗೊಳಿಸುವವನಲ್ಲ. ನೀವೆಲ್ಲ ಒಂದೇ ವರ್ಗದವರು.' (ಪವಿತ್ರ ಕುರ್‌ಆನ್ 3:195)**

2. ಭೂಮಿಯಲ್ಲಿ ಅತ್ಯಧಿಕ ಗೌರವಿಸಲ್ಪಡಲು ಅರ್ಹಳಾದವಳು ಸ್ತ್ರೀಯಾಗಿದ್ದಾಳೆ. ಮಾತೃತ್ವದಂತೆ ಮಹತ್ವವಿರುವ ಸ್ಥಾನ ಭೂಮಿಯಲ್ಲಿ ಇಲ್ಲ, ಆಕೆ ತಲೆಮಾರುಗಳಿಗೆ ಜನ್ಮ ನೀಡುತ್ತಾಳೆ. ಆಕೆಯೇ ಮೊದಲ ಗುರುವೂ ಆಗಿದ್ದಾಳೆ. ಮನುಷ್ಯರ ಜನನದಲ್ಲೂ ಅವರನ್ನು ಬೆಳೆಸುವಲ್ಲೂ ಹೆಚ್ಚು ಪ್ರಯಾಸವನ್ನು ಅನುಭವಿಸುವವಳು ತಾಯಿಯೇ ಆಗಿದ್ದಾಳೆ. ಆದ್ದರಿಂದ ಮಾನವರು ಹೆಚ್ಚು ಗೌರವಿಸಬೇಕಾದುದು ಆಕೆಯನ್ನೇ ಆಗಿದೆ.

ಓರ್ವರು ಪ್ರವಾದಿ(ಸ)ಯವರೊಡನೆ ಕೇಳಿದರು: 'ಪ್ರವಾದಿಗಳೇ, ನನ್ನ ಅತ್ಯಧಿಕ ಸದ್ವರ್ತನೆಗೆ ಅರ್ಹರು ಯಾರು? ಪ್ರವಾದಿ(ಸ) ಹೇಳಿದರು: ನಿನ್ನ ತಾಯಿ, ಆ ವ್ಯಕ್ತಿ ಪುನಃ ಕೇಳಿದರು- ನಂತರ ಯಾರು? ಪ್ರವಾದಿಯವರು ಹೇಳಿದರು: ನಿನ್ನ ತಾಯಿ. ಆತ ಪುನಃ ಪ್ರಶ್ನಿಸಿದರು: 'ಆ ಬಳಿಕ ಯಾರು? ಪ್ರವಾದಿಯವರು ಹೇಳಿದರು: ನಿನ್ನ ತಾಯಿಯೇ. ಆತ 'ನಂತರ ಯಾರು?' ಎಂದು ಕೇಳಿದಾಗ ಪ್ರವಾದಿಯವರು ಹೇಳಿದರು: ನಿನ್ನ ತಂದೆ'

( ಬುಖಾರಿ, ಮುಸ್ಲಿಮ್)

ಪವಿತ್ರ ಕುರ್‌ಆನ್ ಹೆತ್ತವರ ಕುರಿತು ಪರಾಮರ್ಶಿಸಿದ ಒಂದಕ್ಕಿಂತ ಹೆಚ್ಚು ಕಡೆಗಳಲ್ಲಿ ತಾಯಿಗೆ ಹೆಚ್ಚು ಒತ್ತು ನೀಡಿದೆ 'ಮಾನವನಿಗೆ ತನ್ನ ಮಾತಾಪಿತರ ಹಕ್ಕನ್ನು ತಿಳಿದುಕೊಳ್ಳಲು

ನಾವೇ ತಾಕೀತು ಮಾಡಿರುತ್ತೇವೆ, ಅವನ ತಾಯಿಯು ನಿತ್ರಾಣದ ಮೇಲೆ ನಿತ್ರಾಣವನ್ನು ಸಹಿಸಿ ಅವನನ್ನು ತನ್ನ ಗರ್ಭದಲ್ಲಿರಿಸಿದಳು ಮತ್ತು ಅವನ ಸ್ತನಪಾನ ಬಿಡುವುದರಲ್ಲಿ ಎರಡು ವರ್ಷಗಳು ತಗಲಿದವು.' (31:14) 'ತನ್ನ ಮಾತಾಪಿತರೊಂದಿಗೆ ಸೌಜನ್ಯದಿಂದ ವರ್ತಿಸಬೇಕೆಂದು ನಾವು ಮಾನವನಿಗೆ ಆದೇಶಿಸಿದೆವು. ತಾಯಿಯು ಬಹಳ ಕಷ್ಟಪಟ್ಟು ಗರ್ಭದಲ್ಲಿರಿಸಿದಳು ಮತ್ತು ಕಷ್ಟಪಟ್ಟೇ ಹೆತ್ತಳು, ಅವನ ಗರ್ಭಾವಧಿಯಲ್ಲಿ ಮತ್ತು ಮೊಲೆಹಾಲು ಬಿಡಿಸುವುದರಲ್ಲಿ ಮೂವತ್ತು ತಿಂಗಳುಗಳು ತಗಲಿದವು.' (46:19) ಇದರಿಂದ ಇಸ್ಲಾಮೀ ದೃಷ್ಟಿಕೋನದಲ್ಲಿ ಪ್ರಥಮ ಸ್ಥಾನವೂ ಪರಿಗಣನೆಯೂ ಮಾತೆಯೆಂಬ ಸ್ತ್ರೀಗೆ ಲಭಿಸುತ್ತದೆ.

3. ಪುರುಷರಿಗಿಂತಲೂ ವಿವೇಕಯುತ ಹಾಗೂ ಯುಕ್ತಿಪೂರ್ಣವಾದ ತೀರ್ಮಾನವನ್ನು ತೆಗೆದುಕೊಳ್ಳಲು ಸಾಮರ್ಥ್ಯವಿರುವ ಮಹಿಳೆಯರಿರುತ್ತಾರೆಂದು ಕುರ್‌ಆನ್ ಉಲ್ಲೇಖಿಸಿದ ಸಬಾದ ರಾಣಿಯ ಚರಿತ್ರೆಯಿಂದ ನಿಸ್ಸಂಶಯವಾಗಿ ತಿಳಿದುಕೊಳ್ಳಬಹುದು. ಪ್ರವಾದಿ ಸುಲೈಮಾನ್(ರ)ರ ಸಂದೇಶ ದೊರೆತಾಗ ಸಬಾದ ರಾಣಿ ಆಸ್ಥಾನದವರೊಂದಿಗೆ ಸಮಾಲೋಚಿಸಿದರು. ಆದರೆ ಸ್ಪಷ್ಟ ಹಾಗೂ ಸೂಕ್ತವಾದ ತೀರ್ಮಾನವನ್ನು ಕೈಗೊಳ್ಳಲು ಅವರಿಗೆ ಸಾಧ್ಯವಾಗಲಿಲ್ಲ, ಆದರೆ ಪಕ್ವವಾದ ತೀರ್ಮಾನ ಸಬಾದ ರಾಣಿಯಿಂದ ಸಾಧ್ಯವಾಯಿತೆಂದು ಕುರ್‌ಆನ್ ಸ್ಪಷ್ಟಪಡಿಸಿದೆ. (27: 29, 44)

4. ಮೊದಲ ಪಾಪಕರ್ಮಕ್ಕೆ ಮಹಿಳೆ ಕಾರಣ ಎಂದು ಯಹೂದಿ-ಕ್ರೈಸ್ತರ ವಾದವನ್ನು ಇಸ್ಲಾಮ್ ಸ್ಪಷ್ಟವಾಗಿ ನಿರಾಕರಿಸುತ್ತದೆ. ದೇವಾದೇಶವನ್ನು ಉಲ್ಲಂಘಿಸಿ ನಿಷೇಧಿತ ಹಣ್ಣನ್ನು ತಿಂದ ಆರೋಪವನ್ನು ಕುರ್‌ಆನ್ ಮುಖ್ಯವಾಗಿ ಆದಮ್(ಅ) ರ ಮೇಲೆ ಹೊರಿಸಿದೆ. ಹವ್ವಾರ ಮೇಲಲ್ಲ. 'ಹೀಗೆ ಆದಮ್ ಮತ್ತು ಪತ್ನಿಯೂ ಆ ವೃಕ್ಷದ ಫಲವನ್ನು ತಿಂದುಬಿಟ್ಟರು. ಪರಿಣಾಮವಾಗಿ ತಕ್ಷಣವೇ ಅವರ ಗುಪ್ತಾಂಗಗಳು ಪರಸ್ಪರರಿಗೆ ಗೋಚರವಾದವು. ಇಬ್ಬರೂ ತಮ್ಮನ್ನು ಸ್ವರ್ಗದ ಎಲೆಗಳಿಂದ ಮರೆಸತೊಡಗಿದರು. ಆದಮ್ ತಮ್ಮ ಪ್ರಭುವಿನ ಆಜ್ಞೋಲಂಘನೆ ಮಾಡಿದರು ಮತ್ತು ಸನ್ಮಾರ್ಗ ಭ್ರಷ್ಟರಾದರು. ಅನಂತರ ಅವರ ಪ್ರಭು ಅವರನ್ನು ಪುನೀತಗೊಳಿಸಿದನು. ಅವರ ಪಶ್ಚಾತಾಪವನ್ನು ಸ್ವೀಕರಿಸಿದನು. ಅವರಿಗೆ ಸನ್ಮಾರ್ಗ ದರ್ಶನ ಮಾಡಿದನು.' (20:121-122)

'ನಾವು ಇದಕ್ಕೆ ಮುಂಚೆ ಆದಮರಿಗೊಂದು ಅಪ್ಪಣೆ ಕೊಟ್ಟಿದ್ದೆವು. ಆದರೆ ಅವರು ಮರೆತು ಬಿಟ್ಟರು. ಮತ್ತು ನಾವು ಅವರಲ್ಲಿ ಸ್ಥಿರಚಿತ್ತತೆಯನ್ನು ಕಾಣಲಿಲ್ಲ.' (20:115) ಆದಿ ಪಾಪಕ್ಕೆ ಮಹಿಳೆಯೇ ಕಾರಣವೆಂಬ ಪರಂಪರಾಗತ ಆರೋಪವನ್ನು ಕುರ್‌ಆನ್ ತಿದ್ದುತ್ತದೆ.

5. ಮಹಿಳೆಯನ್ನು ಭೋಗದ ವಸ್ತುವಾಗಿ ಪರಿಗಣಿಸುವ ಸಮಾಜವು ಆಕೆಯನ್ನು ತೀವ್ರವಾಗಿ ಶೋಷಣೆಗೊಳಪಡಿಸುತ್ತದೆ. ಮಾತ್ರವಲ್ಲ ಹೆಣ್ಣುಶಿಶುಗಳನ್ನು ಕ್ರೂರವಾಗಿ ಕೊಲ್ಲುವುದೂ ಇದೆ. ಆಧುನಿಕ ಸಮಾಜದ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗಿಲ್ಲ, ಈ ವಿಷಯದಲ್ಲಿ ತಮಿಳ್ನಾಡು ದೇಶದಲ್ಲಿ ಪ್ರಥಮ ಸ್ಥಾನ ಪಡೆದಿದೆ. ಅಲ್ಲಿನ ಸೇಲಂ ಜಿಲ್ಲೆಯ

ಉಶಿಲಾಂಪೆಟ್ಟಿ ಶಿಶು ಹತ್ಯೆಗೆ ಪ್ರಸಿದ್ಧವಾಗಿದೆ. ಜನಿಸಿದ ಮಗು ಹೆಣ್ಣೆಂದು ಅರಿತರೆ ಗಂಡನು ನೋಡಲು ಬರುವುದಿಲ್ಲ, ಕೊಂದ ಬಳಿಕವೇ ಬಾ ಎಂಬ ಉತ್ತರ ಬರುತ್ತದೆ. ಆದ್ದರಿಂದ ಆಕೆಯ ಮನೆಯವರು ಮಗುವಿನ ಕಥೆ ಮುಗಿಸಿದ ಬಳಿಕವೇ ಆಕೆಯನ್ನು ಪತಿಗೃಹಕ್ಕೆ ಕರೆದೊಯ್ಯುತ್ತಾರೆ.

ಹೆಣ್ಣುಮಗುವನ್ನು ಭ್ರೂಣದಲ್ಲೇ ಚಿವುಟಿ ಹಾಕುವ ಕೃತ್ಯ ಇತರ ದೇಶಗಳಂತೆ ಭಾರತದಲ್ಲೂ ವ್ಯಾಪಕವಾಗಿದೆ. ಭಾರತದಲ್ಲಿ ಒಂದು ವರ್ಷದಲ್ಲಿ 50 ಲಕ್ಷ ಹೆಣ್ಣು ಭ್ರೂಣಗಳನ್ನು ಕೊಲ್ಲಲಾಗುತ್ತಿದೆಯೆಂದು ಭಾರತೀಯ ಮೆಡಿಕಲ್ ಅಸೋಸಿಯೇಶನ್‌ನ ಪದಾಧಿಕಾರಿಗಳು ಸ್ಪಷ್ಟಪಡಿಸುತ್ತಾರೆ. 20 ಲಕ್ಷವೆಂದು ಅಧಿಕೃತ ದಾಖಲೆಗಳು ಸೂಚಿಸುತ್ತವೆ.

ಈ ಕ್ರೂರ ಹತ್ಯೆಯು ಪ್ರವಾದಿ ಮುಹಮ್ಮದ್(ಸ)ರ ಆಗಮನದ ಕಾಲದಲ್ಲಿ ಅರೇಬಿಯಾದ ಹಲವು ಗೋತ್ರಗಳಲ್ಲಿ ವ್ಯಾಪಕವಾಗಿತ್ತು. ಪವಿತ್ರ ಕುರ್‌ಆನ್ ಹೇಳುತ್ತದೆ : **'ಇವರ ಪೈಕಿ ಯಾರಿಗಾದರೂ ಮಗಳು ಹುಟ್ಟಿದ ಸುವಾರ್ತೆ ಕೊಟ್ಟಾಗ ಅವನ ಮುಖ ಕಳೆಗುಂದಿ ಹೋಗುತ್ತದೆ ಮತ್ತು ಅವನು ಸಿಡಿಮಿಡಿಗೊಳ್ಳುತ್ತಾನೆ. ಈ ಅಶುಭ ವಾರ್ತೆಯ ಬಳಿಕ ಯಾರಿಗೂ ಮುಖ ತೋರಿಸಲಾಗದೆ ಜನರಿಂದ ತಲೆಮರೆಸಿಕೊಳ್ಳುತ್ತಾನೆ. ಈ ಅಪಮಾನದೊಂದಿಗೆ ಮಗುವನ್ನಿರಿಸಿಕೊಳ್ಳಲೇ ಅಥವಾ ಮಣ್ಣಿನಲ್ಲಿ ಹುಗಿದು ಬಿಡಲೇ ಎಂದು ಯೋಚಿಸುತ್ತಾನೆ.' (ಪವಿತ್ರ ಕುರ್‌ಆನ್ 16:58-59)**

ಇಸ್ಲಾಮ್ ಇದನ್ನು ನಿಷೇಧಿಸಿ ಮಹಾ ಪಾಪವೆಂದು ಸಾರಿತು. **'ಜೀವಂತ ಹೂಳಲ್ಪಟ್ಟ ಹೆಣ್ಣುಮಗುವಿನೊಡನೆ ಕೇಳಲಾಗುವಾಗ, ಯಾವ ತಪ್ಪಿಗಾಗಿ ಅವಳನ್ನು ಕೊಲ್ಲಲಾಯಯಿತೆಂದು' ವಿಚಾರಣೆಗೊಳಗಾಗುವ ದಿನದ ಎಚ್ಚರಿಕೆ ನೀಡಿತು. (ಪವಿತ್ರ ಕುರ್‌ಆನ್ 81: 8-9)**

ಹೀಗೆ ಇಸ್ಲಾಮ್ ಮಹಿಳೆಯ ಬದುಕುವ ಹಕ್ಕನ್ನು ಉಳಿಸಿಕೊಟ್ಟಿತು. ಹೆಣ್ಣು ಮಗುವನ್ನು ಕೊಲ್ಲುವ ಹೀನಕೃತ್ಯವನ್ನು ನಿಷೇಧಿಸಿತು.

6. ಎಲ್ಲಾ ಕಾಲಗಳಲ್ಲಿಯೂ ಮಹಿಳೆಯು ಶೋಷಣೆಗೊಳಗಾಗುವ ವಿಭಾಗವಾದುದರಿಂದ ಇಸ್ಲಾಮ್ ಆಕೆಗೆ ವಿಶೇಷ ಪರಿಗಣನೆಯನ್ನು ನೀಡಿತು. ಪೈಗಂಬರರು ಹೇಳಿದರು: 'ಒಬ್ಬರಿಗೆ ಇಬ್ಬರು ಹೆಣ್ಣು ಮಕ್ಕಳಿದ್ದು, ಅವರನ್ನು ಉತ್ತಮ ರೀತಿಯಲ್ಲಿ ಬೆಳೆಸಿದ ಕಾರಣಕ್ಕಾಗಿ ಆತ ಸ್ವರ್ಗದ ಹಕ್ಕುದಾರನಾಗುತ್ತಾನೆ.' (ಬುಖಾರಿ)

'ಮೂವರು ಹೆಣ್ಣುಮಕ್ಕಳು ಅಥವಾ ಸಹೋದರಿಯರ ಕಾರಣದಿಂದ ಕಷ್ಟವನ್ನು ಅನುಭವಿಸುವವನಿಗೆ ಸ್ವರ್ಗಲಭಿಸದಿರದು' ( ತ್ವಹಾವಿ)

'ನೀವು ನಿಮ್ಮ ಮಕ್ಕಳ ಮಧ್ಯೆ ದಾನದಲ್ಲಿ ಸಮಾನತೆಯನ್ನು ಪಾಲಿಸಿ, ನಾನು ಯಾರಿಗಾದರೂ ವಿಶೇಷತೆ ನೀಡುವವನಾಗಿದ್ದರೆ ಮಹಿಳಗೆ ಮೊದಲು ಪ್ರಾಶಸ್ತ್ಯ ನೀಡುತ್ತಿದ್ದೆ.' (ತಬ್ರಾನಿ)

ಹೀಗೆ ಪ್ರಕೃತಿ ಸಹಜವಾದ ಪ್ರತ್ಯೇಕತೆಗಳನ್ನು ಪರಿಗಣಿಸಿ, ಇಸ್ಲಾಮ್ ಸ್ತ್ರೀಯರಿಗೆ ಸ್ಥಾನಮಾನ, ಹಾಗೂ ಹಕ್ಕು-ಬಾಧ್ಯತೆಗಳನ್ನು ನೀಡಿದೆ. ಆದ್ದರಿಂದಲೇ ತಾಯಗೆ ಹೆಚ್ಚಿನ

ಮಹತ್ವವನ್ನು ನೀಡಿ, ಆಕೆಯನ್ನು ಬಹಳವಾಗಿ ಗೌರವಿಸಿತು. ಮಾತೃತ್ವವೇ ಸ್ತ್ರೀಯ ಬಹುದೊಡ್ಡ ವಿಶೇಷತೆಯಾಗಿದೆ. ಅಮೇರಿಕಾದ ಮನಶ್ಶಾಸ್ತ್ರಜ್ಞರಾದ ತಿಯೋಡರ್ ರೈಕ್ 'ಸ್ತ್ರೀ-ಪುರುಷರಲ್ಲಿರುವ ವೈವಿಧ್ಯತೆಗಳು' ಎಂಬ ಗ್ರಂಥದಲ್ಲಿ ಮಾತೃತ್ವದ ಕುರಿತ ಹೆಮ್ಮೆ ಪಡುವ ಸ್ತ್ರೀಯ ಮಾತುಗಳನ್ನು ಹೀಗೆ ಉಲ್ಲೇಖಿಸಿದ್ದಾರೆ: 'ಜೀವನದ ಎಲ್ಲಾ ರಂಗಗಳಲ್ಲೂ ಪುರುಷರ ವಿಶೇಷತೆಯನ್ನು ನಾವು ಸಂಕೋಚವಿಲ್ಲದೆ ಒಪ್ಪಿಕೊಳ್ಳುತ್ತೇವೆ. ಆದರೆ, ಸ್ತ್ರೀಯರಾದ ನಾವು ಅದಕ್ಕಿಂತಲೂ ಎಷ್ಟೋ ಮಹತ್ವವಿರುವ ಒಂದರಿಂದ ಅನುಗ್ರಹೀತರಾಗಿದ್ದೇವೆ. ನಾವಿಲ್ಲದಿದ್ದರೆ ಮಾನವರಾಶಿಯ ಬೇರು ಕಿತ್ತೆಸೆಯಲ್ಪಡುವುದು. ಮಕ್ಕಳಿಗೆ ಜನ್ಮ ನೀಡುವವರು ನಾವು. ಈ ಮೂಲಕಕ ಭಾವಿ ತಲೆಮಾರುಗಳ ಉದಯಕ್ಕೆ ಕಾರಣಕರ್ತರಾಗಿದ್ದೇವೆ.'

ಆದರೆ ಇಂದಿನ ಸ್ತ್ರೀಯರು ಮಾತೃತ್ವದ ಮಹತ್ವದ ಬಗ್ಗೆ ಅಜ್ಞರಾಗಿದ್ದಾರೆ. ತಾನು ಇಷ್ಟು ಮಕ್ಕಳಿಗೆ ಗರ್ಭಧರಿಸಿ, ಹೆತ್ತು ಸಾಕಿ ಸಲಹಿದೆಯೆಂದು ಅಭಿಮಾನದಿಂದ ಹೇಳುವವರ ಸಂಖ್ಯೆ ವಿರಳವಾಗಿದೆ. ಏಕೆಂದರೆ ಇಂದು ಮಾನವನ ಬೆಲೆ ಕುಗ್ಗಿದೆ. ಮನುಷ್ಯನ ಬೆಲೆ ಕುಸಿದಿರುವಾಗ, ಆತನಿಗೆ ಜನ್ಮ ನೀಡುವುದು ಹೋಟೆಲ್‌ನ ಸ್ವಾಗತಕಾರಿಣಿಯ ಕೆಲಸಕ್ಕಿಂತಲೂ ಕಡಿಮೆಯೆಂದು ಭಾಸವಾಯಿತು. ಆದ್ದರಿಂದ ಇಂದು ಗರ್ಭಧರಿಸಲು, ಜನ್ಮ ನೀಡಲು ಮಹಿಳೆಯರು ಉದಾಸೀನತೆ ತೋರುತ್ತಿದ್ದಾರೆ. ಅಥವಾ ಒಂದೋ ಎರಡೋ ಮಕ್ಕಳನ್ನು ಹೆತ್ತರೂ ಅದರ ಪಾಲನೆ-ಪೋಷಣೆ ಭಾರವನ್ನು ವಹಿಸಿಕೊಳ್ಳಲು ಸಿದ್ಧರಿಲ್ಲ. ಆ ಪುಟ್ಟ ಮಕ್ಕಳನ್ನು ಆಯಾಗಳ ಕೈಗೊಪ್ಪಿಸಲಾಗುತ್ತದೆ. ಆಯಾಗಳು ತಮಗೆ ತಿಂಗಳಿಗೆ ಬರುವ ಸಂಬಳದ ನಿರೀಕ್ಷೆಯಲ್ಲಿ ಮಕ್ಕಳ ಲಾಲನೆ-ಪಾಲನೆ ಮಾಡುತ್ತಾರೆ. ಅಲೀಜಾ ಅಲೀ ಇಝ್ಝತ್ ಬೆಗೋವಿಚ್ ಹೇಳಿದಂತೆ 'ಹೆತ್ತವರಿಗೆ ಮಕ್ಕಳು ವ್ಯಕ್ತಿತ್ವವಿರುವ ಒಂದು ಅಸ್ತಿತ್ವವಾಗಿದ್ದಾರೆ. ಆದರೆ ಆಯಾಗಳಿಗೆ ವಸ್ತುಗಳಲ್ಲಿ ಒಂದು ವಸ್ತು ಮಾತ್ರ. ಆದ್ದರಿಂದ ಆಯಾಗಳು ಅವರನ್ನು ಯಂತ್ರಗಳ ಚಕ್ರಗಳನ್ನು ತಿರುಗಿಸುವ ರೀತಿಯಲ್ಲಿ ಆಟವಾಡಿಸುತ್ತಾರೆ. ಮತ್ತು ಯಂತ್ರಗಳನ್ನು ಒರೆಸಿ ಸ್ವಚ್ಛಗೊಳಿಸುವಂತೆ ಅತ್ಯಂತ ನಿರ್ವಿಕಾರ ಭಾವದಿಂದಲೇ ಸ್ನಾನ ಮಾಡಿಸುತ್ತಾರೆ.'

ಮಾತೃತ್ವಕ್ಕೆ ತೋರಿದ ನಿರ್ಲಕ್ಷ್ಯದ ಅನಿವಾರ್ಯ ದುರಂತಫಲವನ್ನು ಲೋಕವಿಂದು ಅನುಭವಿಸುತ್ತಿದೆ. ಸೋವಿಯತ್ ರಷ್ಯಾದ ಆಡಳಿತಾಧಿಕಾರಿಯಾಗಿದ್ದ ಮಿಖಾಯಿಲ್ ಗೋರ್ಬಚೇವ್ ತನ್ನ ವಿಶ್ವಪ್ರಸಿದ್ಧ ಪೆರಿಸ್ಟ್ರೋಯಿಕದಲ್ಲಿ ಬರೆಯುತ್ತಾರೆ: 'ನಮ್ಮ ದುಃಖದಾಯಕವೂ, ವೀರೋಚಿತವೂ ಆದ ಚರಿತ್ರೆಯ ವರ್ಷಗಳಲ್ಲಿ ನಾವು ಮಹಿಳೆಯರಿಗೆ ತಾಯಿ, ಗೃಹ ನಾಯಕಿ, ಸ್ವಂತ ಮಕ್ಕಳಿಗೆ ಶಿಕ್ಷಣವನ್ನು ನೀಡುವ ಜವಾಬ್ದಾರಿ ಹಾಗೂ ಮಹಿಳೆಯರಿಗಿರುವ ವಿಶೇಷ ಹಕ್ಕುಗಳಿಗೂ ಗಮನ ನೀಡದೆ ಪರಾಜಯಗೊಂಡೆವು. ವೈಜ್ಞಾನಿಕ ಸಂಶೋಧನೆ, ನಿರ್ಮಾಣ ಸ್ಥಳ, ಉತ್ಪಾದನಾ ರಂಗ ಹಾಗೂ ಸಾರ್ವಜನಿಕ ಸೇವಾರಂಗಗಳಲ್ಲಿ ದುಡಿಯಬೇಕಾಗಿ ಬಂದದ್ದರಿಂದ, ಮಹಿಳೆಯರಿಗೆ ಮನೆಯಲ್ಲಿ ತಮ್ಮ ದೈನಂದಿನ ಕರ್ತವ್ಯಗಳನ್ನು ನಿರ್ವಹಿಸಲು ಸಾಧ್ಯವಾಗಲಿಲ್ಲ. ಮನೆಗೆಲಸ, ಮಕ್ಕಳ ಪಾಲನೆ ಪೋಷಣೆ, ಉತ್ತಮ ಕೌಟುಂಬಿಕ ವಾತಾವರಣ

ಸೃಷ್ಟಿಸಲು ಸಮಯ ಸಾಲದಾಯಿತು. ದೇಶದಲ್ಲಿರುವ ಹಲವು ಸಮಸ್ಯೆಗಳಿಗೆ, ಮಕ್ಕಳ ಹಾಗೂ ಯುವಜನಾಂಗದ ನೈತಿಕ ಮೌಲ್ಯಗಳ, ಸಂಸ್ಕಾರಗಳ ಅಧಃಪತನಕ್ಕೆ ಮುಖ್ಯವಾಗಿ ದುರ್ಬಲವಾಗುತ್ತಿರುವ ಕುಟುಂಬ ಸಂಬಂಧಗಳು, ಕೌಟುಂಬಿಕ ಹೊಣೆಗಾರಿಕೆಯ ಕುರಿತು ನಿರ್ಲಕ್ಷ್ಯವೇ ಕಾರಣವೆಂದು ತಿಳಿದುಬಂದಿದೆ. ಎಲ್ಲಾ ರಂಗಗಳಲ್ಲೂ ಸ್ತ್ರೀಯನ್ನು ಪುರುಷ ರೊಂದಿಗೆ ಸಮಾನವಾಗಿಸಬೇಕೆಂಬ ನಮ್ಮ ಮಾನಸಿಕ ಹಾಗೂ ರಾಜಕೀಯ ಸಮರ್ಥನೆಯ ಆಗ್ರಹದ ಫಲವಾಗಿ ಈ ವಿರೋಧಾಭಾಸ ಗೋಚರಿಸಿದೆ. ಈಗ ಪರಿಸ್ತ್ರೋಯಿಕಾದ ಪ್ರಕ್ರಿಯಯಲ್ಲಿ ಈ ದೌರ್ಬಲ್ಯವನ್ನು ಇಲ್ಲವಾಗಿಸಲು ಆರಂಭಸಿದ್ದೇವೆ. ಆದ್ದರಿಂದ ಮಹಿಳೆಯರಿಗೆ ಸ್ತ್ರೀಯೆಂಬ ನೆಲೆಯಲ್ಲಿ ತನ್ನ ಮಹತ್ವದ ಹೊಣೆಗಾರಿಕೆಯೆಡೆಗೆ ಮರಳಲು ಹೇಗೆ ಸಾಧ್ಯವಾಗಬಹುದೆಂಬ ಕುರಿತು, ಮಾಧ್ಯಮಗಳಲ್ಲೂ, ಉದ್ಯೋಗ ಸ್ಥಳಗಳಲ್ಲೂ, ಸಾರ್ವಜನಿಕ ವೇದಿಕೆಗಳಲ್ಲೂ ಮನೆಗಳಲ್ಲೂ ಬಿಸಿ ಬಿಸಿ ಚರ್ಚೆ ನಡೆಯುತ್ತಿದೆ.

ಸ್ತ್ರೀ ಸಹಜ ವೈಶಿಷ್ಟ್ಯತೆಗಳನ್ನು ಪರಿಗಣಿಸದ, ಮಾತೃತ್ವದ ಮಹತ್ವವನ್ನು ಅರ್ಥಮಾಡಿ ಕೊಳ್ಳದ, ಪ್ರಕೃತಿ ವಿರುದ್ಧವಾದ ಯಾವುದೇ ವ್ಯವಸ್ಥೆಯಲ್ಲೂ ಮಾನವನ ಬೆಲೆ ಕುಸಿದು, ಮಾನಸಿಕ ಸ್ವಾಸ್ಥ್ಯವೂ ನಷ್ಟವಾಗಿ, ಕುಟುಂಬ ವ್ಯವಸ್ಥೆ ಶಿಥಿಲವಾಗಿ, ಸಮಾಜದಿಂದ ಶಾಂತಿ ಸಮಾಧಾನ ಮಾಯವಾಗಿ, ವ್ಯಕ್ತಿಗಳು ಜನಸಮೂಹದಿಂದ ಒಂಟಿಯಾಗಿ, ಏಕಾಂತತೆಯ ವ್ಯಥೆಗೆ ವಿಧೇಯರಾಗಬೇಕಾದುದು ಅನಿವಾರ್ಯವಾಗಿದೆ. ಪ್ರಕೃತಿ ಸಹಜವಾದ ವಿಶೇಷತೆಗಳನ್ನು ಸಂಪೂರ್ಣವಾಗಿ ಪರಿಗಣಿಸುವ ಇಸ್ಲಾಮೀ ವ್ಯವಸ್ಥೆಯು ಇಂತಹ ಎಲ್ಲಾ ದೌರ್ಬಲ್ಯಗಳಿಂದ ಮುಕ್ತವಾಗಿದ್ದು ಯಾವುದೇ ಗೊಂದಲಗಳಿಗೆ ಆಸ್ಪದ ಕೊಡುವುದಿಲ್ಲ.

## 32 ಇಸ್ಲಾಮ್ ಪುರುಷ ಪ್ರಧಾನ ಧರ್ಮವೇ?

**ಇಸ್ಲಾಮ್ ಪುರುಷ ಪ್ರಧಾನ ಧರ್ಮವಲ್ಲವೇ? ಕುರ್‌ಆನ್‌ನ 4ನೇ ಅಧ್ಯಾಯದ 34ನೇ ಸೂಕ್ತವು ಇದಕ್ಕೆ ಆಧಾರವಲ್ಲವೇ?**

ಪವಿತ್ರ ಕುರ್‌ಆನ್‌ನ ನಾಲ್ಕನೇ ಅಧ್ಯಾಯದ 34ನೇ ವಾಕ್ಯವು ಕುಟುಂಬ ವ್ಯವಸ್ಥೆಗೆ ಸಂಬಂಧಿಸಿದ ದೇವಾದೇಶವಾಗಿದೆ. ಅದು ಹೀಗಿದೆ: **'ಪುರುಷರು ಸ್ತ್ರೀಯರ ಮೇಲೆ 'ಮೇಲ್ವಿಚಾರಕ' ಆಗಿರುತ್ತಾರೆ. ಇದು ಅಲ್ಲಾಹನು ಕೆಲವರಿಗೆ ಕೆಲವರ ಮೇಲೆ ಶ್ರೇಷ್ಠತೆ ಪ್ರದಾನ ಮಾಡಿದುದರಿಂದ ಮತ್ತು ಪುರುಷರು ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ ಆಗಿದೆ.'**

ಇಲ್ಲಿ ಪುರುಷರಿಗೆ ಕುರ್‌ಆನ್ 'ಕವ್ವಾಮ್' ಎಂಬ ಪದವನ್ನು ಪ್ರಯೋಗಿಸಿದೆ. 'ಒಂದು ಸಂಸ್ಥೆ ಅಥವಾ ವ್ಯವಸ್ಥೆಯ ವ್ಯವಹಾರಗಳನ್ನು ಉತ್ತಮ ರೀತಿಯಲ್ಲಿ ನಡೆಸಿ ಅದರ ಮೇಲ್ನೋಟ ವಹಿಸಿ, ಅದರ ಬೇಡಿಕೆಗಳನ್ನು ಪೂರೈಸುವ ಹೊಣೆಗಾರ ವ್ಯಕ್ತಿಗೆ ಅರಬಿ ಭಾಷೆಯಲ್ಲಿ ಕವ್ವಾಮ್ ಅಥವಾ ಕಯ್ಯಿಮ್ ಎನ್ನಲಾಗುತ್ತದೆ.' (ತಫ್ಹೀಮುಲ್ ಕುರ್‌ಆನ್, ಭಾಗ 1,ಪುಟ 310, 56 ನೇ ಟಿಪ್ಪಣಿ)

ಮೇಲ್ವಿಚಾರಕ ಹಾಗೂ ಸಂರಕ್ಷಕನಿಲ್ಲದೆ ಯಾವುದೇ ಸಂಸ್ಥೆಯು ಯಶಸ್ವಿಯಾಗಲು ಸಾಧ್ಯವಿಲ್ಲ. ಸಮಾಜದ ಮೂಲಘಟಕವಾದ ಕುಟುಂಬವು ಸುಭದ್ರವೂ, ಸುರಕ್ಷಿತವೂ ಆಗಿರಬೇಕಾದುದು ಅನಿವಾರ್ಯ. ಸೂಕ್ತ ಸಾರಥಿಯಿಲ್ಲದಿದ್ದರೆ ಅದು ಅಸಾಧ್ಯ. ಆ ಮೇಲ್ವಿಚಾರಕ ಯಾರೆಂಬ ಬಗ್ಗೆ ಸ್ತ್ರೀ-ಪುರುಷರ ನಡುವೆ ಪ್ರತಿಯೊಂದು ಕುಟುಂಬದಲ್ಲೂ ವಿವಾದಗಳು ಉಂಟಾದರೆ ಕುಟುಂಬದ ಭದ್ರತೆ ಮಾಯವಾಗಿ ಬಿಕ್ಕಟ್ಟು ತಲೆದೋರುತ್ತದೆ. ಆದ್ದರಿಂದ ಶಾರೀರಿಕ, ಮಾನಸಿಕ, ವೈಚಾರಿಕ ವಿಶೇಷತೆಗಳನ್ನು ಪರಿಗಣಿಸಿ, ಇಸ್ಲಾಮ್ ಹೊಣೆಗಾರಿಕೆಯನ್ನು ಪುರುಷರಿಗೆ ನೀಡಿತು. ಕುಟುಂಬದ ಸಂರಕ್ಷಕನೆಂದರೆ ಅದೊಂದು ಹಕ್ಕು ಅಥವಾ ಅಧಿಕಾರ ಅಲ್ಲ, ಅದು ಅತ್ಯಂತ ಜವಾಬ್ದಾರಿಯುತ ಹೊಣೆಗಾರಿಕೆಯಾಗಿದೆ. ಬದುಕಿನ ಜಂಜಾಟದ ನಡುವೆ ಹೋರಾಡಲು ಪುರುಷನಿಗೆ ಶಕ್ತಿ ಸಾಮರ್ಥ್ಯವಿರುವುದರಿಂದ ಅದನ್ನು ನೀಡಲಾಯಿತು. ಆದ್ದರಿಂದ ಇಸ್ಲಾಮೀ ದೃಷ್ಟಿಕೋನದಲ್ಲಿ ಕುಟುಂಬವೆಂಬ ಪುಟ್ಟರಾಷ್ಟ್ರದಲ್ಲಿ ಪುರುಷನು ಪ್ರಧಾನಮಂತ್ರಿಯೂ ಮಹಿಳೆಯೂ ಗೃಹಮಂತ್ರಿಯೂ ಆಗಿದ್ದಾಳೆ. ಮನೆಯ ಎಲ್ಲಾ ಕಾರ್ಯಗಳನ್ನು ತೀರ್ಮಾನಿಸುವವಳು, ನಿರ್ವಹಿಸುವವಳು ಮಹಿಳೆಯಾಗಿದ್ದಾಳೆ.

ಸ್ತ್ರೀ-ಪುರುಷರ ನಡುವಿನ ಸಂಬಂಧವು ಆಡಳಿತಗಾರ ಮತ್ತು ಪ್ರಜೆಯ ಮಧ್ಯೆ ಇರುವಂತಹದ್ದಲ್ಲ, ಆದ್ದರಿಂದಲೇ ಇಸ್ಲಾಮ್ ದಂಪತಿಗಳನ್ನು ಗಂಡ-ಹೆಂಡಿರೆಂದು ಕರೆಯುವುದಿಲ್ಲ, ಅದು 'ಜೋಡಿಗಳು' ಎಂಬ ವಿಶೇಷಣವನ್ನು ನೀಡಿದೆ 'ಸ್ತ್ರೀಯರು ಪುರುಷರ ಹಾಗೂ ಪುರುಷರು ಸ್ತ್ರೀಯರ ಉಡುಪಾಗಿರುವರು.' (ಪವಿತ್ರ ಕುರ್‌ಆನ್ 2:187) ಎಂದು ಪವಿತ್ರ ಕುರ್ ಹೇಳಿದ ಕಾರಣವೂ ಅದುವೇ ಆಗಿದೆ.

ದೇಶದ ಆಡಳಿತಾಧಿಕಾರಿ ಪ್ರಜೆಗಳೊಂದಿಗೆ ಹಾಗೂ ಸಮೂಹದ ನಾಯಕನು ಅನುಯಾಯಿಗಳೊಂದಿಗೆ ಸಮಾಲೋಚಿಸಿ ತೀರ್ಮಾನ ತೆಗೆದುಕೊಳ್ಳುವಂತೆ ಕುಟುಂಬ ನಾಯಕನೂ ಸಮಾಲೋಚಿಸಿಯೇ ನಿರ್ಧಾರ ಕೈಗೊಳ್ಳಬೇಕು. 'ತಮ್ಮ ವ್ಯವಹಾರಗಳನ್ನು ಪರಸ್ಪರ ಸಮಾಲೋಚನೆಯಿಂದ ನಡೆಸುತ್ತಾರೆ.' (ಪವಿತ್ರ ಕುರ್‌ಆನ್ 42: 38)

ಆದ್ದರಿಂದ ಪುರುಷನು ಮನೆಯಲ್ಲಿ ಸ್ವೇಚ್ಛಾಧಿಪತಿಯೋ, ಸರ್ವಾಧಿಕಾರಿಯೋ ಅಲ್ಲ ಎಲ್ಲಾ ದೇವನಿಯಮಗಳನ್ನು ಪಾಲಿಸುವವನಾಗಿದ್ದಾನೆ. ಕುಟುಂಬದ ಸಂರಕ್ಷಣೆಯನ್ನು ಮಾನ-ಮರ್ಯಾದೆಯೊಂದಿಗೆ ನಿರ್ವಹಿಸುವ ಹೊಣೆಗಾರಿಯುಳ್ಳವನಾಗಿದ್ದಾನೆ. ಮಹಿಳೆಯರ ಎಲ್ಲಾ ಹಕ್ಕುಗಳನ್ನು ಸಂಪೂರ್ಣವಾಗಿ ನೀಡಿಯೇ ತನ್ನ ಹೊಣೆಯನ್ನು ಪೂರ್ತಿಗೊಳಿಸಬೇಕು. ಅಲ್ಲಾಹನು ಹೇಳುತ್ತಾನೆ: 'ಪುರುಷರಿಗೆ ಸ್ತ್ರೀಯರ ಮೇಲೆ ಹಕ್ಕಿರುವ ಹಾಗೆಯೇ, ಸ್ತ್ರೀಯರಿಗೂ ಪುರಷರ ಮೇಲೆ ನ್ಯಾಯೋಚಿತ ಹಕ್ಕು ಇದೆ.' (ಪವಿತ್ರ ಕುರ್‌ಆನ್ 2:228)

ಪ್ರವಾದಿ(ಸ)ರು ಹೇಳಿರುವರು: 'ಗೌರವಾರ್ಹ ವ್ಯಕ್ತಿಗಳಲ್ಲದವರು ಸ್ತ್ರೀಯನ್ನು ಗೌರವಿಸುವುದಿಲ್ಲ, ನೀಚರ ಹೊರತು ಯಾರೂ ನಿಂದಿಸುವುದಿಲ್ಲ.'

'ಕುಟುಂಬದೊಂದಿಗೆ ಕರುಣೆ ತೋರದವನೂ, ಅಹಂಕಾರಿಯೂ ಸ್ವರ್ಗ ಪ್ರವೇಶಿಸಲಾರನು.' (ಅಬೂದಾವೂದ್)

'ವಿಶ್ವಾಸಿಗಳಲ್ಲಿ ಉತ್ತಮ ಸ್ವಭಾವದವರು ವಿಶ್ವಾಸದಲ್ಲಿ ಸಂಪೂರ್ಣತೆಯನ್ನುಗಳಿಸುತ್ತಾರೆ. ತನ್ನ ಪತ್ನಿಯೊಂದಿಗೆ ಅತ್ಯುತ್ತಮವಾಗಿ ವರ್ತಿಸುವವನೇ ನಿಮ್ಮಲ್ಲಿ ಅತ್ಯುತ್ತಮನು.'

(ಪ್ರವಾದಿ ವಚನ)

ಒಂದು ಕುಟುಂಬದ ಉಳಿವಿಗಾಗಿ, ರಕ್ಷಣೆಗಾಗಿ, ಮೂಲಭೂತ ಅಗತ್ಯಗಳಿಗಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟ ವ್ಯಕ್ತಿ ಪುರುಷನಾದ್ದರಿಂದ ಸಮಾಲೋಚನೆಯ ಬಳಿಕ ಕೊನೆಯ ಮಾತು ಅವನದಾಗಿರುತ್ತದೆ. ಆದರೆ ಅದು ಹಕ್ಕುಗಳ ಉಲ್ಲಂಘನೆಯೋ, ಅವಿವೇಕಪೂರ್ಣವೋ ಆಗಿರಬಾರದು. ಪತಿಯಿಂದ ತಪ್ಪು ಸಂಭವಿಸಿದರೆ ತಿದ್ದಲು ಹಾಗೂ ಆತನ ಅನ್ಯಾಯದ ತೀರ್ಮಾನಗಳನ್ನು ಕಡೆಗಣಿಸಲು ಅಥವಾ ಅಗತ್ಯ ಬಂದರೆ ಆತನ ಕುಟುಂಬ ಹಾಗೂ ಅಧಿಕಾರ ಕೇಂದ್ರಗಳನ್ನು ಭೇಟಿಯಾಗಲು ಮಹಿಳೆಗೆ ಅವಕಾಶವಿದೆ. ಅಂತಹ ಸಂದರ್ಭದಲ್ಲಿ ಪುರುಷನು ದೇವನ ಆದೇಶಗಳನ್ನು ಪಾಲಿಸಲು ಬದ್ಧನಾಗಿರಬೇಕು.

ಹೊರಗಿನ ಕ್ಷೇತ್ರದಲ್ಲಿ ಕೆಲಸ ಮಾಡಲು ಮಹಿಳೆಗಿಂತ ಪುರುಷನೇ ಅರ್ಹವ್ಯಕ್ತಿ. ತನ್ನ ಮೇಲಿನ ಆಕ್ರಮಣವನ್ನು ಎದುರಿಸಲು ಪುರುಷನು ಸಶಕ್ತನಾಗಿದ್ದಾನೆ. ಮಹಿಳೆಗೆ ಎಲ್ಲ

ಸಮಯಗಳಲ್ಲೂ ಒಂದೇ ರೀತಿಯಲ್ಲಿ ಗದ್ದೆ, ಫ್ಯಾಕ್ಟರಿ, ತೋಟ, ಕಛೇರಿಗಳಿಗೆ ಹೋಗಿ ದುಡಿಯಲು ಸಾಧ್ಯವಿಲ್ಲ. ಮಾನವ ಕುಲದ ಉಳಿಯುವಿಕೆಗೆ ಮಹಿಳೆ ಗರ್ಭಧರಿಸುವುದು, ಹೆರುವುದು, ಎದೆ ಹಾಲು ಉಣಿಸುವುದು ಅನಿಯವಾರ್ಯ. ಇಂತಹ ದೈಹಿಕ ವಿಶೇಷತೆಯ ಕಾರಣ ಇಸ್ಲಾಮ್ ಕುಟುಂಬದ ಆರ್ಥಿಕ ಹೊಣೆಗಾರಿಕೆ, ಸಂರಕ್ಷಣೆ ಹಾಗೂ ನಾಯಕತ್ವ ಸ್ಥಾನವನ್ನು ಪುರುಷನಿಗೆ ನೀಡಿದೆ.

## ಮಹಿಳೆಯರು ಪ್ರವಾದಿಯಾಗಿ ನೇಮಕವಾಗದಿರಲು ಕಾರಣವೇನು?

**ದೇವನು ಲಿಂಗ ಪಕ್ಷಪಾತಿಯಲ್ಲದಿದ್ದರೆ ಮಹಿಳಾ ಪ್ರವಾದಿಗಳನ್ನು ಏಕೆ ನಿಯೋಗಿಸಲಿಲ್ಲ?**

ದೇವದತ್ತ ಜೀವನ ವ್ಯವಸ್ಥೆಯನ್ನು ಸಮಾಜಕ್ಕೆ ಅರ್ಪಿಸಿ, ಅದನ್ನು ಕಾರ್ಯಗತಗೊಳಿಸುವುದು ಮತ್ತು ಪ್ರಾಯೋಗಿಕವಾಗಿ ಮಾಡಿ ತೋರಿಸುವುದು ಪ್ರವಾದಿಗಳ ಹೊಣೆಗಾರಿಕೆಯಾಗಿದೆ. ಆದ್ದರಿಂದ ಆರಾಧನಾ ಕರ್ಮಗಳು, ಸಾಮಾಜಿಕ, ಆರ್ಥಿಕ, ರಾಜಕೀಯ ರಂಗಗಳಲ್ಲೂ ಯುದ್ಧ, ಒಪ್ಪಂದಗಳಂತಹ ವಿಷಯಗಳಲ್ಲೂ ಅವರು ಸಮಾಜಕ್ಕೆ ಮಾದರಿಯಾಗಿರಬೇಕು. ತಿಂಗಳ ನಿರ್ದಿಷ್ಟ ದಿನಗಳಲ್ಲಿ ಆರಾಧನಾ ಕರ್ಮಗಳಿಗೆ ನೇತೃತ್ವವಹಿಸಲು, ಗರ್ಭಧಾರಣೆ, ಹೆರಿಗೆಯಂತಹ ಸಂದರ್ಭಗಳಲ್ಲಿ ನಾಯಕತ್ವ ವಹಿಸಲು ಮಹಿಳೆಗೆ ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಸಮೂಹಕ್ಕೆ ಸದಾ ಸಮಯವೂ, ಎಲ್ಲ ರಂಗಗಳಲ್ಲೂ ನಾಯಕತ್ವ ವಹಿಸಬೇಕಾದ ಪ್ರವಾದಿತ್ವದ ಹೊಣೆಗಾರಿಕೆಯಿಂದ ಮಹಿಳೆಯರನ್ನು ಮುಕ್ತಗೊಳಿಸಲಾಯಿತು. ಆದರೂ ಪ್ರವಾದಿ ಮೂಸಾರ ಮಾತೆಗೆ ಅತ್ಯಗತ್ಯವಾದ ಆದೇಶಗಳನ್ನು ದೇವವಾಣಿಯ ಮೂಲಕ ನೀಡಲಾಗಿತ್ತೆಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ. ಅಲ್ಲಾಹನು ಹೇಳುತ್ತಾನೆ: 'ನಾವು ಮೂಸಾರ ತಾಯಿಗೆ, ''ಇದಕ್ಕೆ ಮೊಲೆಹಾಲುಣಿಸು, ಮುಂದೆ ನಿನಗೆ ಇದರ ಪ್ರಾಣದ ಬಗ್ಗೆ ಭಯವುಂಟಾದರೆ ಇದನ್ನು ನದಿಯಲ್ಲಿ ಹಾಕಿಬಿಡು. ನೀನು ಕೊಂಚವೂ ಭಯಪಡಬೇಡ. ವ್ಯಥೆ ಪಡಬೇಡ. ನಾವು ಇದನ್ನು ನಿನ್ನ ಬಳಿಗೇ ಮರಳಿ ತರುವೆವು ಮತ್ತು ಇದನ್ನು ಸಂದೇಶವಾಹಕರಲ್ಲಿ ಸೇರಿಸುವೆವು'' ಎಂದು ಸೂಚನೆ ನೀಡಿದೆವು.' (28: 7)

ಏಸುವಿನ ತಾಯಿಗೂ ಪ್ರವಾದಿಗಳಿಗೆ ಲಭಿಸುವ ರೀತಿಯಲ್ಲಿ ದೇವಚರರಿಂದ ದೇವಸಂದೇಶ ಲಭಿಸಿತ್ತೆಂದು ಪವಿತ್ರ ಕುರ್‌ಆನ್ ಹೇಳುತ್ತದೆ: 'ಮರ್ಯಮರಿಗೆ ಆ ಮಗುವಿನ ಗರ್ಭ ಉಂಟಾಯಿತು ಮತ್ತು ಅವರು ಆ ಗರ್ಭಸಹಿತ ದೂರದ ಒಂದು ಸ್ಥಳಕ್ಕೆ ಹೋದರು. ತರುವಾಯ ಪ್ರಸವ ವೇದನೆಯು ಅವರನ್ನು ಒಂದು ಖರ್ಜೂರದ ಮರದೆಡೆಗೆ ತಲುಪಿಸಿತು. ಅವರು ''ಅಕಟ! ನಾನು ಇದಕ್ಕಿಂತ ಮುಂಚೆಯೇ ಸತ್ತು ಹೋಗಿದ್ದರೆ! ಮತ್ತು ಹೇಳ ಹೆಸರಿಲ್ಲದಂತೆ ಅಳಿದು ಹೋಗಿದ್ದರೆ(ಚೆನ್ನಾಗಿತ್ತು)'' ಎನ್ನತೊಡಗಿದರು. ದೇವಚರನು ಕಾಲಬಳಿಯಿಂದ ಅವರನ್ನು ಕೂಗಿ ಇಂತೆಂದನು. ಮರುಗಬೇಡಿರಿ. ನಿಮ್ಮ ಪ್ರಭು ನಿಮ್ಮ ತಳಭಾಗದಲ್ಲೊಂದು ಚಿಲುಮೆಯನ್ನು ಹರಿಸಿಬಿಟ್ಟಿದ್ದಾನೆ. ಮತ್ತು ನೀವು ಆ ಮರದ ಕಾಂಡವನ್ನು ಹಿಡಿದು ಅಲುಗಾಡಿಸಿರಿ. ನಿಮ್ಮ ಮೇಲೆ

ಹಸನಾದ ಖರ್ಜೂರದ ಹಣ್ಣುಗಳು ಉದುರಿ ಬೀಳುವುದು. ಈ ರೀತಿಯಲ್ಲಿ ನೀವು ತಿಂದು ಕುಡಿದು ಕಣ್ಮನಗಳನ್ನು ತಣಿಸಿರಿ, ನೀವು ಮಾನವರಾರನ್ನಾದರೂ ಕಂಡರೆ – 'ನಾನು ಕರುಣಾನಿಧಿ (ಅಲ್ಲಾಹ್) ಗಾಗಿ ಉಪವಾಸ ವ್ರತದ ಹರಕೆ ಹೊತ್ತಿರುವುದರಿಂದ ಇಂದು ಯಾರೊಡನೆಯೂ ಮಾತನಾಡಲಾರೆನೆಂದು–ಹೇಳಿಬಿಡಿರಿ.' (19: 22–26)

ನಿಸರ್ಗದತ್ತವಾದ ಕಾರಣಗಳಿಂದ ಮಹಿಳೆಯರನ್ನು ಪ್ರವಾದಿಯಾಗಿ ನೇಮಿಸದಿದ್ದರೂ ಪ್ರವಾದಿಗಳಂತೆ ಅವರಿಗೂ ದಿವ್ಯಸಂದೇಶ ಲಭಿಸಿತ್ತೆಂದು ಈ ಸೂಕ್ತಗಳು ಸ್ಪಷ್ಟಪಡಿಸುತ್ತದೆ.

# 33 ಪರ್ದಾದಿಂದ ಸಾಕ್ಷಿಯವರೆಗೆ

ಪರ್ದಾವನ್ನು ಕಡ್ಡಾಯಗೊಳಿಸುವ ಮೂಲಕ ಇಸ್ಲಾಮ್ ಮಹಿಳೆಯರನ್ನು ಶೋಷಣೆಗೊಳಪಡಿಸಿದೆಯಲ್ಲವೇ? ಮುಸ್ಲಿಮ್ ಮಹಿಳೆಯರ ಹಿಂದುಳಿಯುವಿಕೆಗೆ ಪರ್ದಾವೂ ಕಾರಣವಲ್ಲವೇ?

ಮಹಿಳೆಯು ಮುಖ ಮತ್ತು ಮುಂಗೈಯ ಹೊರತುಪಡಿಸಿ ದೇಹದ ಉಳಿದ ಭಾಗಗಳನ್ನು ಮರೆಸಬೇಕೆಂದು ಇಸ್ಲಾಮ್ ಹೇಳುತ್ತದೆ. ಇದು ಮಹಿಳೆಯರ ಏಳಿಗೆಗೆ ಅಡ್ಡಿಯಲ್ಲ, ಸಹಾಯಕವಾಗಿದೆ. ಮಹಿಳೆಗೆ ಪರ್ದಾ ಹಿಂಸೆಯಲ್ಲ, ಆಕೆಯ ರಕ್ಷಾ ಕವಚವಾಗಿದೆ.

ಇಂದು ವಿಶ್ವದ ಹಲವು ಭಾಗಗಳಲ್ಲಿ ಪರ್ದಾಧಾರಿಣಿ ಮಹಿಳೆಯರು ವೈಜ್ಞಾನಿಕ, ವೈಮಾನಿಕ, ಸಾಹಿತ್ಯ, ಮಾಧ್ಯಮ ರಂಗಗಳು ಹಾಗೂ ಪಾರ್ಲಿಮೆಂಟ್‌ಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇರಾನಿನ ಐದು ಉಪಾಧ್ಯಕ್ಷರುಗಳಲ್ಲಿ ಓರ್ವರಾದ ಮಅ್‌ಸೂಮಾ ಇಬ್ತಿಕಾರ್ ಪರ್ದಾಧಾರಣೆಯಾಗಿದ್ದಾರೆ. ಅಮೇರಿಕಾದಲ್ಲಿ ಉನ್ನತ ವ್ಯಾಸಂಗ ನಡೆಸಿ, ಮಅ್‌ಸೂಮಾ ತೆಹ್ರಾನ್ ಯೂನಿವರ್ಸಿಟಿಯ ಅಸೋಸಿಯೇಟ್ ಪ್ರೋಫೆಸರ್ ಹಾಗೂ ಪ್ರಸಿದ್ಧ ಪತ್ರಕರ್ತೆ ಆಗಿದ್ದಾರೆ. ಸಾಮಾಜಿಕ ಕಾರ್ಯಕರ್ತೆಯಾಗಿರುವ ಇವರು ಹಲವು ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ.

ಇರಾನ್‌ನ ಪ್ರಸಿದ್ಧ ಮಹಿಳಾ ಪತ್ರಿಕೆಯಾದ 'ಮಹ್‌ಜೂಬಾ'ದ ಸಂಪಾದಕಿಯೂ ಟೆಹ್ರಾನ್ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಟುರಾನ್ ಜಂಶೀದ್‌ಯಾನ್, ನ್ಯಾಶನಲ್ ಒಲಿಂಪಿಕ್ಸ್ ಉಪಾಧ್ಯಕ್ಷೆಯೂ, ಪಾರ್ಲಿಮೆಂಟಿನ ಉಪಾಧ್ಯಕ್ಷೆಯೂ ಆಗಿದ್ದ ಫಸೀಹ್ ಹಾಶ್ಮಿ, ಮಹಿಳಾ ಕಲ್ಯಾಣ ಇಲಾಖೆಯ ಸಲಹೆಗಾರ್ತಿಯಾಗಿದ್ದ ಶಹ್‌ಲಾ ಹಬೀಬಿ, ಮಲೇಶಿಯಾ ರಾಜಕೀಯದಲ್ಲಿ ಬೆಳೆದು ನಿಂತಿರುವ ವಾನ್ ಅಝೀಝಾರಂತಹ ಪ್ರಖ್ಯಾತ ಮಹಿಳೆಯರೆಲ್ಲಾ ಪರ್ದಾಧಾರಿಣಿಗಳಾಗಿದ್ದಾರೆ. ಆಧುನಿಕ ಲೋಕದಲ್ಲಿ ರಣಾಂಗಣದಲ್ಲಿ ಧೈರ್ಯದಿಂದ ಹೋರಾಡಿದ ವನಿತೆಯರು ಇರಾನ್ ಹಾಗೂ ಅಫಘಾನಿಸ್ತಾನದ ಮಹಿಳೆಯರು ಎಂಬ ವಾಸ್ತವ ಮರೆಯುವಂತಿಲ್ಲ, ವಾಲಿಬಾಲ್, ಬಾಸ್ಕೆಟ್‌ಬಾಲ್, ಶೂಟಿಂಗ್, ಸೈಕ್ಲಿಂಗ್, ಟೆನಿಸ್, ಜಿಮ್ನಾಸ್ಟಿಕ್, ಕುದುರೆ ಸ್ಪರ್ಧೆ, ಜೂಡೋ, ಕರಾಟೆ, ಚೆಸ್ ಮೊದಲಾದ ಕ್ರೀಡೆಗಳಿಂದ, ಕ್ರೀಡಾರಂಗದಲ್ಲಿ ಮೇಲುಗೈ ಸಾಧಿಸುತ್ತಿರುವ ಇರಾನ್‌ನಲ್ಲಿ ಮಹಿಳೆಯರ ಉನ್ನತಿಯಲ್ಲಿ ಪರ್ದಾ ಯಾವುದೇ ರೀತಿಯಲ್ಲಿ ಅಡ್ಡಿಯಾಗಿಲ್ಲ, ಪರ್ದಾಕ್ಕೆ ಸಮಾನವಾದ ವಸ್ತ್ರಧಾರಣೆಯು ಮದರ್

ಥೆರೆಸಾರ ಸಮಾಜ ಸೇವಾ ಚಟುವಟಿಕೆಗಳಿಗೆ ಅಡ್ಡಿಯೆನಿಸಲಿಲ್ಲ. ವಿವಿಧ ರಂಗಗಳಲ್ಲಿ ಸೇವಾ ನಿರತರಾಗಿರುವ ಕನ್ಯಾಸ್ತ್ರೀಯರ ವಸ್ತ್ರಧಾರಣೆಯು ಪರ್ದಾಕ್ಕೆ ಸಮಾನವಾಗಿದೆಯಲ್ಲವೇ?

ಶರೀರ ಭಾಗಗಳನ್ನು ಮರೆಸುವುದು ಅಂತರಿಕ್ಷ ಯಾನಗಳಿಗೋ, ಸಂಶೋಧನೆಗಳಿಗೋ ತೊಂದರೆ ಉಂಟು ಮಾಡುವುದಿಲ್ಲವೆಂದು ಬಾಹ್ಯಾಕಾಶಯಾತ್ರಿಕರ ಅನುಭವದಿಂದ ಸ್ಪಷ್ಟವಾಗುತ್ತದೆ. ಪ್ಯಾಂಟ್, ಶರ್ಟ್, ಟೈ, ಓವರ್‌ಕೋಟ್, ಸಾಕ್ಸ್, ಶೂ, ಕ್ಯಾಪ್, ಧರಿಸುವ ಪಾಶ್ಚಾತ್ಯರಾದ ಪುರುಷರು ಇಸ್ಲಾಮ್ ಮಹಿಳೆಯರಿಗೆ ಸೂಚಿಸಿದ ಎಲ್ಲಾ ಶರೀರ ಭಾಗವನ್ನು ಮರೆಸುತ್ತಾರೆ. ಆದರೆ ಸ್ತ್ರೀಯರು ಇದಕ್ಕೆ ವಿರುದ್ಧವಾಗಿದ್ದಾರೆ.

ಸ್ತ್ರೀಯೆಂದರೆ ಆವಳ ಸೌಂದರ್ಯ, ದೇಹ, ರೂಪಲಾವಣ್ಯವಾಗಿದೆ. ಅವಳ ವ್ಯಕ್ತಿತ್ವವು ಅದರ ಮಾದಕತೆಗೆ ಅನುಸಾರವಾಗಿದೆ ಎಂಬ ಭಾವನೆಯನ್ನು ಮೂಡಿಸುವಲ್ಲಿ ಬಂಡವಾಳಶಾಹಿ ಶಕ್ತಿಗಳು ಹಾಗೂ ಅದರ ಕೂಸಾಗಿರುವ ಗ್ರಾಹಕ ಸಂಸ್ಕೃತಿಯು ಯಶಸ್ವಿಯಾಗಿದೆ. ಪರ್ದಾ ಪ್ರಗತಿಗೆ, ನಾಗರಿಕತೆಗೆ ಅಡ್ಡಿಪಡಿಸುತ್ತದೆಂಬ ಭಾವನೆ ಪ್ರಬಲ ವಾಗಲು ಇದುವೇ ಕಾರಣ. ತಮ್ಮ ದೇಹಸೌಂದರ್ಯವನ್ನು ಪ್ರದರ್ಶಿಸುತ್ತಾ ಪೇಟೆ, ಸಾರ್ವಜನಿಕ ಸ್ಥಳಗಳಲ್ಲಿ ಸುತ್ತಾಡುವುದೇ ಪ್ರಗತಿಯೆಂದು ಪ್ರಚಾರ ನಡೆಸುತ್ತಿರುವ ಮಹಿಳೆಯರು, ಪುರುಷರು ತಮ್ಮ ದೇಹ ಸೌಂದರ್ಯವನ್ನು ಆಸ್ವಾದಿಸುವ ಮನೋವಿಕೃತಿಯವರೆಂದು ಭಾವಿಸುತ್ತಾರೆ.

ಸಮಾಜದ ಮಹಿಳೆಯರೆಲ್ಲರ ಸೌಂದರ್ಯವನ್ನು ಆಸ್ವದಿಸಲು, ಕಾಮಾಂಧ ಕಣ್ಣುಗಳೊಂದಿಗೆ ಕಾಯುತ್ತಿರುವವರ ಮುಂದೆ ತಮ್ಮ ದೇಹವನ್ನು ರಕ್ಷಿಸಿಕೊಳ್ಳುವುದು ಘನತೆ ಯಾಗಿದೆ. ಇದು ಮಹಿಳೆಯರ ರಕ್ಷಣೆಗೂ ಸಹಾಯಕ. ಪರ್ದಾದ ಮೂಲಕ ಇಸ್ಲಾಮ್ ಮಹಿಳೆಯಿಂದ ಇದನ್ನೇ ಬಯಸುತ್ತದೆ. ಅದರೊಂದಿಗೆ ಪರ್ದಾ ಪ್ರಗತಿಗೆ ಅಡ್ಡಿಯಲ್ಲ. ಇರಾನ್ ಸಂದರ್ಶನದ ಬಳಿಕ ಎಂ.ಪಿ. ವೀರೇಂದ್ರಕುಮಾರ್ ಬರೆದ ಮಾತುಗಳು ಗಮನಾರ್ಹವಾಗಿದೆ: ಇರಾನ್‌ನಲ್ಲಿ ಮಹಿಳೆಯರು ಪರ್ದಾ ಧರಿಸುತ್ತಾರೆ. ಮುಖ ಮರೆಸುವುದಿಲ್ಲ, ತಲೆಯನ್ನು ಮರೆಸುತ್ತಾರೆ. ಯಾವುದೇ ಪಿಕ್‌ನಿಕ್ ಸ್ಥಳಕ್ಕೆ ಹೋದಾಗ ಅಲ್ಲಿ ನೂರಾರು ಪರ್ದಾಧಾರಿ ಮಹಿಳೆಯರು ಕಾಣಿಸುತ್ತಾರೆ. ಇರಾನ್‌ನ ವಾರ್ತಾ ಏಜೆನ್ಸಿಯಾದ 'ಇರ್ನಾ'ದ ಕೇಂದ್ರ ಕಮಿಟಿ ಆಫೀಸ್‌ಗೆ ತಲುಪಿದಾಗ, ಅಲ್ಲಿನ ಉದ್ಯೋಗಿಗಳಲ್ಲಿ ಬಹುಸಂಖ್ಯಾತರು ಮಹಿಳೆಯರೇ ಆಗಿದ್ದಾರೆ. ಮಹಿಳೆಯರು ಅಲ್ಲಿ ವಾಹನ ಚಲಾಯಿಸುತ್ತಾರೆ. ಯಾವುದೇ ಅಡ್ಡಿ ಆಂತಕವಿಲ್ಲ, ಆದರೆ ನ್ಯೂಯಾರ್ಕ್‌ನಲ್ಲಿ ಕಂಡುಬರುವಂತೆ ಮಹಿಳೆಯರನ್ನು ಸೆಕ್ಸ್ ಸಿಂಬಲ್‌ಗಳಾಗಿ ಬದಲಾಯಿಸಲು ಇರಾನಿಯರು ಒಪ್ಪಿಗೆ ನೀಡುವುದಿಲ್ಲ.' (ಬೋಧನಂ ವಾರಪತ್ರಿಕೆ 1993 ನವೆಂಬರ 6)

ಶ್ರೀಮತಿ ಕಲ್ಪನಾ ಶರ್ಮರ ಪ್ರಶ್ನೆಯು ಪ್ರಸಕ್ತವಾದುದು 'ಉನ್ನತ ಶಿಕ್ಷಣ ಪಡೆದು ಸಾರ್ವಜನಿಕ ರಂಗಕ್ಕಿಳಿದು ಉದ್ಯೋಗ ನಿರ್ವಹಿಸಲು ದಾಂಪತ್ಯ ಸಂಬಂಧ ಹದೆಗೆಟ್ಟಾಗ ವಿಚ್ಛೇದನ ಹೊಂದಲು ನ್ಯಾಯಾಲಯಕ್ಕೆ ಹೋಗುವ ಅನುಮತಿ ಇರುವ ಇರಾನ್‌ನ ಮಹಿಳೆಯರಿಗಿಂತ ನಮಗೆ ಯಾವ ಮೇಲ್ಮೆ ಇದೆ. ಅವರಿಗೆ ವಿರುದ್ಧವಾಗಿ ತೀರ್ಪು ನೀಡಲು

ನಮಗೆ ಸಾಧ್ಯವಿದೆಯೇ?' (Kalpana Sharma Behind The Veil- The Hindu 20-7-97)

ಮಹಿಳೆಯರಿಗೆ ಪರ್ದಾವನ್ನು ಕಡ್ಡಾಯಗೊಳಿಸಿ, ಪುರುಷರಿಗೆ ಅದರಿಂದ ವಿನಾಯತಿ ನೀಡಿರುವುದು ದೊಡ್ಡ ಅನ್ಯಾಯವಲ್ಲವೇ? ಅಸಮಾನತೆಯಲ್ಲವೇ?

ಈ ಅಸಮಾನತೆಯು ಪ್ರಕೃತಿದತ್ತವಾಗಿದೆ. ಸ್ತ್ರೀ-ಪುರುಷರ ದೇಹರಚನೆ ಒಂದೇ ರೀತಿ ಇಲ್ಲವಲ್ಲ? ಯಾವುದೇ ಶಕ್ತಿವಂತನಾದ ಪುರುಷನಿಗೆ ಮಹಿಳೆಯ ಅನುಮತಿಯಿಲ್ಲದೆ ಅತ್ಯಾಚಾರವೆಸಗಲು ಸಾಧ್ಯವಿದೆ. ಆದರೆ ಮಹಿಳೆ ಎಷ್ಟೇ ಶಕ್ತಿವಂತಳಾಗಿದ್ದರೂ, ಪುರುಷನ ಅನುಮತಿಯಿಲ್ಲದೆ ಅದು ಸಾಧ್ಯವಿಲ್ಲ, ಈ ಅಂತರದ ಅನಿವಾರ್ಯ ಫಲವೇ ಈ ವಸ್ತ್ರಧಾರಣೆಯಲ್ಲಿರುವ ವ್ಯತ್ಯಾಸ. ಭಾರತವೂ ಸೇರಿದಂತೆ ವಿಶ್ವದಲ್ಲೆಡೆ ಮಹಿಳಾ ಸಂರಕ್ಷಣೆಗಾಗಿ ವಿಶೇಷ ಕಾನೂನು ರಚಿಸಲಾಗಿದೆ. ಅನಿವಾರ್ಯತೆಯೂ ಇದರಿಂದಾಗಿಯೇ ಬಂದಿದೆ. ಸ್ತ್ರೀಹಿಂಸೆಯ ವಿರುದ್ಧ ಕಠಿಣ ಶಿಕ್ಷೆಗಳನ್ನು ನಿಶ್ಚಯಿಸಿದ ದೇಶಗಳಲ್ಲೂ ಪುರುಷ ಪೀಡನೆಯ ವಿರುದ್ಧ ಈ ರೀತಿಯ ಕಾನೂನುಗಳಿಲ್ಲವಲ್ಲಾ, ಶಾರೀರಿಕ ಭಿನ್ನತೆಯು ಪುರುಷನಿಗಿಂತ ಮಹಿಳೆಯರಿಗೆ ಹೆಚ್ಚಿನ ಸುರಕ್ಷತೆಯನ್ನು ಬಯಸುತ್ತದೆಂದು ಇದು ಸ್ಪಷ್ಟಪಡಿಸುತ್ತದೆ. ಮಹಿಳೆ ತನ್ನ ದೇಹ ಸೌಂದರ್ಯವನ್ನು ಅನ್ಯಪುರುಷರ ಮುಂದೆ ಪ್ರಕಟಿಸಬಾರದೆಂದು ಇಸ್ಲಾಮ್ ಇದೇ ಕಾರಣಕ್ಕಾಗಿ ಹೇಳಿದೆ. ಆದ್ದರಿಂದ ಪರ್ದಾ ಮಹಿಳೆಯರಿಗೆ ಸಂರಕ್ಷಣೆಯೂ, ಸೌಕರ್ಯವೂ ಆಗಿದೆ. ಅದು ಹಿಂಸೆಯೋ ಶಾಪವೋ ಅಲ್ಲ,

## ಸ್ತ್ರೀಯರಿಗೆ ಪುರುಷರಿಗಿಂತ ಅರ್ಧಪಾಲು

**ಮಹಿಳೆಯರಿಗೆ ವಾರೀಸು ಹಕ್ಕಿನಲ್ಲಿ ಪುರುಷರಿಗಿಂತ ಅರ್ಧಪಾಲು ದೊರೆಯುತ್ತದೆ. ಇದು ಅನ್ಯಾಯವೂ ಅಸಮಾನತೆಯೂ ಅಲ್ಲವೇ?**

ಇಸ್ಲಾಮೀ ಕಾನೂನಿನಂತೆ ಮಹಿಳೆಗೆ ಯಾವುದೇ ಸಂದರ್ಭದಲ್ಲಿ ಆರ್ಥಿಕ ಹೊಣೆಗಾರಿಕೆಯಿಲ್ಲ, ಹಕ್ಕುಗಳು ಮಾತ್ರ ಇದೆ. ಎಲ್ಲಾ ಹೊಣೆಗಾರಿಕೆಗಳು ಯಾವುದೇ ಪರಿಸ್ಥಿತಿಯಲ್ಲೂ ಪುರುಷರಿಗೆ ಮಾತ್ರ ಇದೆ. ವಿವಾಹದ ವೇಳೆಯಲ್ಲಿ ವರ ಮತ್ತು ವಧುವಿನ ವಸ್ತ್ರಗಳೂ ಸೇರಿದಂತೆ ಎಲ್ಲವುಗಳ ಖರ್ಚನ್ನು ಪುರುಷನೇ ಭರಿಸಬೇಕು. ಅದರೊಂದಿಗೆ ವಧುವಿಗೆ ಕಡ್ಡಾಯವಾಗಿ ವಧು ದಕ್ಷಿಣೆ(ಮಹ್ರ್) ನೀಡಬೇಕು. ಬಳಿಕ ಪತ್ನಿ ಮತ್ತು ಮಕ್ಕಳನ್ನು ಪೋಷಿಸುವ ಜವಾಬ್ದಾರಿ ಸಂಪೂರ್ಣವಾಗಿ ಪುರುಷನಿಗಿದೆ. ಪತಿ-ಪತ್ನಿಯರೀರ್ವರೂ ಒಂದೇ ವರಮಾನವಿರುವ ವೈದ್ಯರೋ, ಶಿಕ್ಷಕರೋ ಆಗಿದ್ದರೂ ಪರವಾಗಿಲ್ಲ, ಮಹಿಳೆ ತನ್ನನ್ನೂ ಸೇರಿದಂತೆ ಯಾರ ಆರ್ಥಿಕ ಹೊಣೆಯನ್ನೂ ವಹಿಸಬೇಕಾಗಿಲ್ಲ, ಉದ್ಯೋಗಸ್ಥೆಯಾದ ಪತ್ನಿಯ ಆಹಾರ, ವಸ್ತ್ರ ಚಿಕಿತ್ಸೆಯೂ ಸೇರಿದಂತೆ ಎಲ್ಲವನ್ನೂ ಪುರುಷನೇ ನೋಡಿಕೊಳ್ಳಬೇಕಾಗುತ್ತದೆ. ಅಥವಾ ಪತಿ ಮರಣಹೊಂದಿದರೆ ಆತನಿಗೆ ಆಸ್ತಿ ಇಲ್ಲದಿದ್ದರೆ ಆತನ ಅನಾಥ ಮಕ್ಕಳ ಸಂರಕ್ಷಣೆಯನ್ನು

ತಂದೆ, ಸಹೋದರರರು, ಸಹೋದರರ ಮಕ್ಕಳು, ಪಿತೃಸಹೋದರರು ವಹಿಸಬೇಕು. ಮರಣ ಹೊಂದಿದ ವ್ಯಕ್ತಿಗೆ ಮಕ್ಕಳಿಲ್ಲದಿದ್ದರೆ ಆತನ ಆಸ್ತಿಯಲ್ಲಿ ಪತ್ನಿಗೂ ಪಾಲು ಇದೆ. ಮಹಿಳೆ ವಿವಾಹಿತೆಯಾದರೆ ಪತಿ, ಅವಿವಾಹಿತೆಯಾಗಿದ್ದರೆ ತಂದೆ, ತಂದೆಯಿಲ್ಲದಿದ್ದರೆ ಸಹೋದರರು ಆಕೆಯ ಪೋಷಣೆ ಮಾಡಬೇಕು. ತಾಯಿಯನ್ನು ನೋಡಿಕೊಳ್ಳಬೇಕಾದುದು ಮಕ್ಕಳ ಕರ್ತವ್ಯವಾಗಿದೆ. ಆದ್ದರಿಂದ ಯಾವುದೇ ಪರಿಸ್ಥಿತಿಯ ಆರ್ಥಿಕ ಜವಾಬ್ದಾರಿಯನ್ನು ಇಸ್ಲಾಮೀ ಕಾನೂನು ಮಹಿಳೆಯರಿಗೆ ನೀಡಿಲ್ಲ. ಪರಸ್ಪರ ಸಂಬಂಧ, ಪ್ರೀತಿ, ಸ್ನೇಹದ ಕಾರಣದಿಂದ ಆಕೆ ತನ್ನ ಹಣವನ್ನು ವ್ಯಯಿಸುವುದಾದರೆ ಅದು ಬೇರೆ ವಿಷಯ. ಹೀಗಿದ್ದರೂ ಇಸ್ಲಾಮ್ ಮಹಿಳೆಗೆ ವಾರೀಸು ಹಕ್ಕು, ವಧುಧಕ್ಷಿಣೆಯನ್ನು ಆಕೆಯ ಸ್ಥಾನಮಾನ ಹಾಗೂ ಸುರಕ್ಷತೆಯನ್ನು ಖಾತ್ರಿಪಡಿಸಲು ಕಡ್ಡಾಯಗೊಳಿಸಿದೆ. ತನ್ನ ಆಸ್ತಿಯನ್ನು ಕಾಪಾಡಲು, ನೋಡಿಕೊಳ್ಳಲು, ಹೆಚ್ಚಿಸಲು ಮಹಿಳೆಗೆ ಸ್ವಾತಂತ್ರ್ಯವಿದೆ. ತಾಯಿ, ಮಗಳು, ಪತ್ನಿ, ಸಹೋದರಿ... ಹೀಗೆ ಎಲ್ಲಾ ಹಂತದಲ್ಲೂ ಸಂಪೂರ್ಣ ಸುರಕ್ಷಿತತೆಯನ್ನು ಖಾತ್ರಿಪಡಿಸಿದ ಬಳಿಕವೂ, ಲೌಕಿಕ ಬೇಡಿಕೆಯಂತೆ ಆಸ್ತಿಯ ಅಗತ್ಯವಿಲ್ಲದಿದ್ದರೂ ಇಸ್ಲಾಮ್ ಮಹಿಳೆಯರಿಗೆ ಅದನ್ನು ನೀಡಿದ್ದು ಮಹಿಳೆಯ ಸ್ಥಾನಮಾನ, ಹಾಗೂ ಗೌರವಕ್ಕೆ ಯಾವುದೇ ರೀತಿಯ ಚ್ಯುತಿ ಬರಬಾರದೆಂಬ ಕಾರಣದಿಂದ ಮಾತ್ರ.

## ಹೆಣ್ಣಿನ ಅನುಮತಿಯಿಲ್ಲದ ವಿವಾಹ.

**ಹೆಣ್ಣಿನ ಅನುಮತಿ ಅಥವಾ ಸಮ್ಮತಿಯಿಲ್ಲದೆ ಅವಳನ್ನು ವಿವಾಹಮಾಡಿಕೊಡಲು ಪೋಷಕರಿಗೆ ಇಸ್ಲಾಮ್ ಅನುಮತಿ ನೀಡುತ್ತದೆ ಎಂಬ ವಿಷಯ ನಿಜವೇ?**

ನಿಜವಲ್ಲ, ಸ್ತ್ರೀಯ ಒಪ್ಪಿಗೆಯಿಲ್ಲದೆ ವಿವಾಹ ಮಾಡಿಕೊಡಲು ಇಸ್ಲಾಮ್ ಅನುಮತಿ ನೀಡುವುದಿಲ್ಲ; ಅಥವಾ ಅಂತಹ ವಿವಾಹ ನಡೆದರೆ ಅದನ್ನು ಒಪ್ಪಿಕೊಳ್ಳದೇ ನಿರಾಕರಿಸುವ ಹಕ್ಕು ಆಕೆಗೆ ಇದೆ.

ಪ್ರವಾದಿವರ್ಯರು ಹೇಳುತ್ತಾರೆ: 'ಕನ್ಯೆಯಲ್ಲದ ಸ್ತ್ರೀಗೆ ತನ್ನ ವಿಷಯದಲ್ಲಿ ತೀರ್ಮಾನ ತೆಗೆದುಕೊಳ್ಳಲು, ಪೋಷಕರಿಗಿಂತ ಹೆಚ್ಚಿನ ಹಕ್ಕು ಇದೆ. ಕನ್ಯೆಯನ್ನು ವಿವಾಹ ಮಾಡಿ ಕೊಡಲು ಅವಳ ಅನುಮತಿಯನ್ನು ಕೇಳಬೇಕು. ಅವಳು ಮೌನಿಯಾಗದಿದ್ದರೆ ಅದನ್ನು ಒಪ್ಪಿಗೆಯೆಂದು ಪರಿಗಣಿಸಬೇಕು.' (ಮುಸ್ಲಿಮ್, ತಿರ್ಮಿದಿ, ಅಬೂದಾವೂದ್, ನಸಾಈ)

ಒಮ್ಮೆ ಓರ್ವ ಹುಡುಗಿ ಪ್ರವಾದಿಯವರ ಬಳಿಗೆ ಬಂದು, ನನ್ನ ತಂದೆ ನನ್ನ ಒಪ್ಪಿಗೆಯಿಲ್ಲದೆ ಓರ್ವನೊಂದಿಗೆ ವಿವಾಹ ಮಾಡಲು ಒತ್ತಾಯಿಸುತ್ತಿದ್ದಾರೆಂದು ದೂರಿದಳು. ಆಗ ಆಕೆಯ ಇಷ್ಟದಂತೆ ಮಾಡಲು ಪ್ರವಾದಿಯವರು ಅನುಮತಿ ನೀಡಿದರು.

ಓರ್ವ ಯುವತಿ ಪ್ರವಾದಿ(ಸ)ರ ಬಳಿಗೆ ಬಂದು ಹೇಳಿದಳು: ''ನನ್ನ ತಂದೆಯು ತಮ್ಮ ಸಹೋದರ ಪುತ್ರನೊಂದಿಗೆ, ನನ್ನ ಮೂಲಕ ಆತನ ಕುಂದುಕೊರತೆಗಳ ಪರಿಹಾರಕ್ಕಾಗಿ ನನ್ನ

ವಿವಾಹವನ್ನು ಮಾಡಿದ್ದಾರೆ. ಆಗ ಪ್ರವಾದಿವರ್ಯರು ವಿಷಯವನ್ನು ತೀರ್ಮಾನಿಸುವ ಅಧಿಕಾರವನ್ನು ಆಕೆಗೆ ನೀಡಿದರು. ಆಗ ಆ ಯುವತಿ ಹೇಳಿದಳು: ತಂದೆಯ ಕೃತ್ಯವನ್ನು ನಾನು ಒಪ್ಪಿಕೊಂಡಿದ್ದೇನೆ. ಆದರೆ ಈ ವಿಷಯದಲ್ಲಿ ತಂದೆಯಂದಿರಿಗೆ ಯಾವುದೇ ಅಧಿಕಾರವಿಲ್ಲವೆಂದು ಇತರ ಮಹಿಳೆಯರಿಗೆ ತಿಳಿಯಪಡಿಸುವುದೇ ನನ್ನ ಉದ್ದೇಶವಾಗಿತ್ತು.'' ವಿವಾಹದ ವಿಷಯದಲ್ಲಿ ತೀರ್ಮಾನ ಕೈಗೊಳ್ಳುವ ಹಕ್ಕು ಮತ್ತು ಸ್ವಾತಂತ್ರ್ಯ ಮಹಿಳೆಯರದೆಂದು ಇದರಿಂದ ಸ್ಪಷ್ಟವಾಗುತ್ತದೆ.

## ಮಹಿಳೆಯ ಸಾಕ್ಷ್ಯ

**ಸಾಕ್ಷಿಗೆ ಒಬ್ಬ ಪುರುಷನ ಬದಲು ಇಬ್ಬರು ಸ್ತ್ರೀಯರಿರಬೇಕೆಂಬುದು ಇಸ್ಲಾಮಿನ ನಿಯಮ. ಇದು ಸ್ತ್ರೀಯೊಂದಿಗಿನ ಅನ್ಯಾಯ ಹಾಗೂ ಪುರುಷ ಪ್ರಧಾನವಾದ ದೃಷ್ಟಿಕೋನವಲ್ಲವೇ?**

ಓರ್ವ ಪುರುಷನ ಬದಲಿಗೆ ಇಬ್ಬರು ಸ್ತ್ರೀಯರು ಸಾಕ್ಷಿಗಳಾಗಬೇಕೆಂಬುದು ಇಸ್ಲಾಮಿನ ಸಾಮಾನ್ಯ ನಿಯಮವಲ್ಲ, ಇದು ಆರ್ಥಿಕ ವ್ಯವಹಾರಗಳಿಗೆ ಮಾತ್ರ ಅನ್ವಯವಾಗುತ್ತದೆ. ಮಹಿಳೆಯರು ಸಾಮಾನ್ಯವಾಗಿ ಆರ್ಥಿಕ ವ್ಯವಹಾರ ಹಾಗೂ ಕೊಡುಕೊಳ್ಳುವಿಕೆಯಂತಹ ಕೆಲಸಗಳಲ್ಲಿ ಹೆಚ್ಚಾಗಿ ಪಾಲ್ಗೊಳ್ಳದಿರುವುದರಿಂದ, ಸಾಕ್ಷ್ಯದಲ್ಲಿ ಏನಾದರೂ ಗೊಂದಲ ಉಂಟಾಗದಿರಲು ಹಾಗೂ ಸೂಕ್ಷ್ಮತೆಯನ್ನು ಪಾಲಿಸಲು ನಿಶ್ಚಯಿಸಲಾದ ನಿಬಂಧನೆಯಾಗಿದೆ. ಸ್ತ್ರೀಯ ಮೇಲೆ ಸದಾಚಾರ ಉಲ್ಲಂಘನೆಯ ಆರೋಪ ಹೊರಿಸಲ್ಪಟ್ಟರೆ ಆಗ ಮಾಡಬೇಕಾದ ವಿಧಿನಿಯಮಗಳಂತೆ ಸಾಕ್ಷ್ಯ ಹೇಳಲು ಮತ್ತು ಆಣೆಹಾಕಲು ಸ್ತ್ರೀ-ಪುರುಷರ ನಡುವೆ ವ್ಯತ್ಯಾಸವಿಲ್ಲವೆಂದು ಕುರ್‌ಆನ್ ಸಂಶಯಾತೀತವಾಗಿ ಸ್ಪಷ್ಟಪಡಿಸಿದೆ. (24:6-9)

ಇತರ ಸಾಕ್ಷ್ಯಗಳ ಸ್ಥಿತಿಯೂ ಇದೇ ರೀತಿ ಇವೆ. ವಿವಾಹ ವಿಚ್ಛೇದನದ ಕುರಿತು ಕುರ್‌ಆನ್ ಹೇಳುತ್ತದೆ: 'ಅವರು ತಮ್ಮ(ಇದ್ದತ್‌ನ) ಕಾಲಾವಧಿಯ ಕೊನೆಯನ್ನು ತಲುಪಿದಾಗ ಅವರನ್ನು ಉತ್ತಮ ರೀತಿಯಿಂದ ನಿಮ್ಮ ವಿವಾಹದಲ್ಲಿ ಉಳಿಸಿಕೊಳ್ಳಿರಿ. ಇಲ್ಲವೇ ಉತ್ತಮ ರೀತಿಯಿಂದ ಅವರಿಂದ ಬೇರ್ಪಡಿರಿ. ನಿಮ್ಮ ಪೈಕಿ ನ್ಯಾಯಶೀಲರಾದ ಇಬ್ಬರನ್ನು ಸಾಕ್ಷಿಗಳಾಗಿ ಮಾಡಿಕೊಳ್ಳಿರಿ. ಸಾಕ್ಷ್ಯವನ್ನು ಸರಿಯಾದ ರೀತಿಯಲ್ಲಿ ಅಲ್ಲಾಹನಿಗಾಗಿಯೇ ನೀಡಿರಿ.' (65:2)

ವಸಿಯ್ಯತ್‌ನ ಕುರಿತು ಪವಿತ್ರ ಕುರ್‌ಆನ್ ಹೇಳುತ್ತದೆ. 'ಓ ಸತ್ಯವಿಶ್ವಾಸಿಗಳೇ, ನಿಮಗಾರಿಗಾದರೂ ಮರಣದ ಕಾಲ ಬಂದಾಗ ಮತ್ತು ಅವನು 'ಉಯಿಲು' ಮಾಡುತ್ತಿರುವಾಗ ನಿಮ್ಮ ಕೂಟದಿಂದ ಇಬ್ಬರು ನ್ಯಾಯಶೀಲರನ್ನು ಸಾಕ್ಷಿಗಳನ್ನಾಗಿರಿಸಿಕೊಳ್ಳಬೇಕು. ಅಥವಾ ನೀವು ಪ್ರಯಾಣದಲ್ಲಿದ್ದಾಗ ಮರಣದ ಯಾತನೆ ಉಂಟಾದರೆ ಪರ(ಧರ್ಮೀಯರ)ರಿಂದಲಾದರೂ ಇಬ್ಬರನ್ನು ಸಾಕ್ಷಿಗಳಾಗಿರಿಸಿಕೊಳ್ಳಿರಿ.' (5:106)

ಆರ್ತವ, ಹೆರಿಗೆ ಮೊದಲಾದವುಗಳಲ್ಲಿ ಪುರುಷರಿಗೆ ಸಾಕ್ಷಿಗಳಾಗಲು ಸಾಧ್ಯವಿಲ್ಲದಿರುವುದರಿಂದ ಸ್ತ್ರೀಯರ ಸಾಕ್ಷ್ಯವೇ ಸ್ವೀಕಾರಾರ್ಹವೆಂಬುದರಲ್ಲಿ ಇಸ್ಲಾಮೀ ವಿದ್ವಾಂಸರಿಗೆ ಒಮ್ಮತಾಭಿಪ್ರಾಯವಿದೆ.

ಇಸ್ಲಾಮಿನ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಆಡಳಿತಾತ್ಮಕವಾದ ಎಲ್ಲಾ ನಿಯಮಗಳ ಮೂಲ ಆಧಾರ ಪ್ರಮಾಣಗಳಲ್ಲಿ ಪ್ರವಾದಿ ಚರ್ಯೆಯೂ ಒಂದು. ಪ್ರವಾದಿ ಚರ್ಯೆಯ ವರದಿಗಳ ಸ್ವೀಕಾರಾರ್ಹತೆಯಲ್ಲಿ ಪುರುಷರಂತೆಯೇ ಸ್ತ್ರೀಯರದ್ದು ಪ್ರಾಮಾಣಿಕವೂ ಪ್ರಬಲವೂ ಆಗಿದೆ. ಇದರಲ್ಲಿ ಲಿಂಗ ತಾರತಮ್ಯವಿಲ್ಲ, ಆದ್ದರಿಂದ ಪ್ರಸಿದ್ಧ ಹದೀಸ್ ಗ್ರಂಥಗಳಲ್ಲಿ ಪುರುಷರಂತೆಯೇ ಮಹಿಳೆಯರು ವರದಿ ಮಾಡಿದ ಹದೀಸ್ ವಚನಗಳನ್ನು ಧಾರಾಳವಾಗಿ ಕಾಣಬಹುದು. ಎಲ್ಲಾ ಸಾಕ್ಷಿಗಳ ಸಾಕ್ಷ್ಯವಾದ ಆಧಾರ ಪ್ರಮಾಣಗಳ ವಿಷಯದಲ್ಲಿ ಸ್ತ್ರೀ ಪುರುಷರಿಗೆ ಸಮಾನ ಸ್ಥಾನಮಾನ ನೀಡಿದ ಇಸ್ಲಾಮ್ ವ್ಯವಹಾರಗಳ ವಿಷಯದಲ್ಲಿ ವಿಭಿನ್ನ ನಿಲುವು ಸ್ವೀಕರಿಸಿರುವುದು ಅಸಮಾನತೆಯೋ ಅನ್ಯಾಯವೋ ಖಂಡಿತ ಅಲ್ಲವೆಂದೂ, ಗೊಂದಲ ಉಂಟಾಗದಿರಲು ಸೂಕ್ಷ್ಮತೆ ಪಾಲಿಸಲು ಮಾತ್ರವೆಂದೂ ಸ್ಪಷ್ಟವಾಗುತ್ತದೆ.

ಇಮಾಮ್ ಅಬೂಹನೀಫ, ತಬರಿಯವರಂತಹ ವಿದ್ವಾಂಸರು ಮಹಿಳೆಯರಿಗೆ ನ್ಯಾಯಾಧೀಶೆಯ ಸ್ಥಾನವನ್ನು ಅಲಂಕರಿಸಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಕಾನೂನು ಅಥವಾ ನ್ಯಾಯ ವ್ಯವಸ್ಥೆಯಲ್ಲಿ ಅಸಮಾನತೆಯಿದ್ದರೆ ನ್ಯಾಯತೀರ್ಮಾನ ಮಾಡುವಂತಹ ಉನ್ನತ ಪದವಿಯಾದ ನ್ಯಾಯಾಧೀಶೆಯ ಸ್ಥಾನವನ್ನು ಮಹಿಳೆಗೆ ನೀಡಬಹುದೆಂದು ಪ್ರಾಮಾಣಿಕ ವಿದ್ವಾಂಸರು ಖಂಡಿತ ಹೇಳುತ್ತಿರಲಿಲ್ಲ.

## 34 ಸಾರ್ವಜನಿಕ ರಂಗದಲ್ಲಿ ಮಹಿಳೆ

**ಇಸ್ಲಾಮ್ ಮಹಿಳೆಯನ್ನು ಸಾರ್ವಜನಿಕ ರಂಗಗಳಿಂದ ದೂರವಿರಿಸಿ, ಅಡುಗೆ ಮನೆಯಲ್ಲಿ ಬಂಧಿಸಿಡುವ ಕೆಲಸ ಮಾಡುತ್ತಿದೆಯಲ್ಲವೇ?**

ಪ್ರಕೃತಿ ದತ್ತವಾದ ವಿಶೇಷತೆಗಳನ್ನು ಗಮನಿಸುವಾಗ ಮಹಿಳೆಯ ಮುಖ್ಯ ಕಾರ್ಯಕ್ಷೇತ್ರ ಮನೆಯಾಗಿದೆ. ಆಕೆಯ ಮಹತ್ವದ ಹೊಣೆಗಾರಿಕೆ ತಾಯ್ತನವಾಗಿದೆ. ಆದರೆ ಮಹಿಳೆ ಸಾರ್ವಜನಿಕ ವ್ಯವಹಾರಗಳಲ್ಲಿ ಪಾಲ್ಗೊಳ್ಳುವುದನ್ನು ಇಸ್ಲಾಮ್ ನಿಷೇಧಿಸಿಲ್ಲ, ಮಾತ್ರವಲ್ಲ, ಅದಕ್ಕೆ ಅನುಮತಿ ನೀಡಿದೆಯಲ್ಲದೇ ಅನಿವಾರ್ಯ ಸಂದರ್ಭಗಳಲ್ಲಿ ಪ್ರೋತ್ಸಾಹವನ್ನೂ ನೀಡಿದೆ.

ಶಿಕ್ಷಣ ಪಡೆಯುವುದರಲ್ಲಿ ಹಾಗೂ ನೀಡುವುದರಲ್ಲಿ ಪ್ರವಾದಿಯವರ ಕಾಲದಲ್ಲಿಯೇ ಪುರುಷರಂತೆ ಸ್ತ್ರೀಯರು ಕ್ರಿಯಾಶೀಲರಾಗಿದ್ದರು. ಪ್ರವಾದಿಯವರ ಬಳಿ ಬಂದು ವಿಷಯಗಳನ್ನು ಕಲಿತು. ಅದನ್ನು ಇತರರಿಗೆ ಕಲಿಸಕೊಡುವುದರಲ್ಲೂ ಹಿಂದೆ ಇರಲಿಲ್ಲ, ಪ್ರವಾದಿ ವಚನಗಳ ವರದಿಗಾರರಲ್ಲಿ ಮಹಿಳೆಯರ ಹೆಸರುಗಳು ಇದೇ ಕಾರಣದಿಂದ ಕಾಣಸಿಗುತ್ತದೆ.

ಪ್ರವಾದಿ ಪತ್ನಿ ಆಯಿಶಾ(ರ) ರು ಪಾಂಡಿತ್ಯದಲ್ಲಿ ಮುಂದಿದ್ದರು. ಇಮಾಮ್ ಝುಹ್ರಿ ಹೇಳುತ್ತಾರೆ: 'ಆಯಿಶಾರು ಅಗಾಧ ಜ್ಞಾನ ಭಂಡಾರದ ವ್ಯಕ್ತಿಯಾಗಿದ್ದರು. ಪ್ರವಾದಿಗಳ ಪ್ರಮುಖ ಅನುಯಾಯಿಗಳು ಅವರಿಂದ ಕಲಿಯುತ್ತಿದ್ದರು.' ಝುಬೈರ್‌ರ ಮಗ ಉರ್ವ ಉಲ್ಲೇಖಿಸಿದ್ದಾರೆ: 'ಕುರ್‌ಆನ್, ವಾರೀಸು ನಿಯಮಗಳು, ವೈಜ್ಞಾನಿಕ, ಕವಿತೆ, ಕರ್ಮಶಾಸ್ತ್ರ ಹರಾಮ್, ಹಲಾಲ್, ವೈದ್ಯಕೀಯ ಹಾಗೂ ಅರೇಬಿಯಾದ ಪುರಾತನ ವೃತ್ತಾಂತಗಳ ಕುರಿತು ಆಯಿಶಾರಿಗಿಂತ ಅಧಿಕ ಜ್ಞಾನವಿರುವವರನ್ನು ನಾನು ನೋಡಿಲ್ಲ.'

ಲಬೀದ್‌ರ ಮಗ ಮಹ್ಮೂದ್ ಹೇಳುತ್ತಾರೆ: 'ಪ್ರವಾದಿ ಪತ್ನಿಯರೆಲ್ಲರೂ ಪ್ರವಾದಿ ವಚನಗಳನ್ನು ಕಂಠಪಾಠ ಮಾಡಿದ್ದರು. ಆದರೆ ಅವರು ಆಯಿಶಾ ಹಾಗೂ ಉಮ್ಮುಸಲ್ಮಾರ ಮಟ್ಟಕ್ಕೆ ತಲುಪಿರಲಿಲ್ಲ,

ಪ್ರವಾದಿ ಪತ್ನಿಯರಲ್ಲಿ ಆಯಿಶಾ(ರ)ರೊಬ್ಬರೇ ಎರಡುಸಾವಿರದ ಇನ್ನೂರ ಹತ್ತು ಹದೀಸ್‌ಗಳನ್ನು ವರದಿ ಮಾಡಿದ್ದಾರೆ. ಉಮ್ಮುಸಲ್ಮಾರು ಹಲವಾರು ಹದೀಸ್‌ಗಳನ್ನು ವರದಿ. ಮಾಡಿದ್ದಾರೆ. ಸ್ತ್ರೀಯರು ಮಾತ್ರವಲ್ಲ, ಧಾರಾಳ ಪುರುಷರೂ ಅವರಿಂದ ಶಿಕ್ಷಣ ಪಡೆದಿದ್ದರು. ವೈಜ್ಞಾನಿಕ ರಂಗದಂತೆಯೇ ಇಸ್ಲಾಮೀ ಸಂದೇಶ ಪ್ರಚಾರ ರಂಗದಲ್ಲೂ ಮಹಿಳೆಯರು ಮುಂಚೂಣಿಯಲ್ಲಿದ್ದರು. ಅದರಿಂದಾಗಿ ಪುರುಷರಂತೆಯೇ ಮಹಿಳೆಯರೂ ಕ್ರೂರ

ಮರ್ದನಗಳಿಗೆ ಗುರಿಯಾಗಬೇಕಾಯಿತು. ಇಸ್ಲಾಮಿನ ಪ್ರಥಮ ಹುತಾತ್ಮತೆಯ ಪದವಿಯು ಸುಮಯ್ಯ ಎಂಬ ಮಹಿಳೆಗೆ ದೊರೆಯಿತು. ಜನ್ಮದೇಶದಲ್ಲಿ ಜೀವನ ದುಸ್ತರವಾದಾಗ ಪಲಾಯನ ಅನಿವಾರ್ಯವಾಗಿ ವಲಸೆ ಹೋದವರಲ್ಲಿ ಮಹಿಳೆಯರೂ ಇದ್ದರು. ಪ್ರವಾದಿಗಳ ಹಾಗೂ ಸಜ್ಜನರಾದ ಖಲೀಫರ ಕಾಲಗಳಲ್ಲಿ ಸಾಮಾಜಿಕ ರಂಗಗಳಿಂದ ಮಹಿಳೆಯರನ್ನು ದೂರವಿರಿಸಿರಲಿಲ್ಲ, ಯುದ್ಧ ರಂಗದಲ್ಲೂ ಮಹಿಳೆಯರು ಮಂಚೂಣಿಯಲ್ಲಿದ್ದರು. ಉಹುದ್ ಯುದ್ಧದಲ್ಲಿ ಸೈನಿಕರಿಗೆ ನೀರು ತಲುಪಿಸುವ, ಗಾಯಾಳುಗಳಿಗೆ ಚಿಕಿತ್ಸೆ ನೀಡುವ ಕೆಲಸಕ್ಕೆ ಪ್ರವಾದಿ ಪತ್ನಿ ಆಯಿಶಾ(ರ) ನೇತೃತ್ವ ವಹಿಸಿದ್ದರು. ಉಮ್ಮು ಸುಲೈಮ್, ಉಮ್ಮು ಸಲೀತ್ ಈ ಸಾಹಸ ಕಾರ್ಯದಲ್ಲಿ ಭಾಗವಹಿಸಿದ್ದರು.

ಖೈಬರ್ ಯುದ್ಧದಲ್ಲಿ ಭಾಗವಹಿಸಿದ ಸೈನಿಕರಿಗೆ ಆಹಾರ ಸಿದ್ಧಪಡಿಸಿದ, ಗಾಯಾಳುಗಳಿಗೆ ಶುಶ್ರೂಷೆ ನೀಡಿದ ಮಹಿಳೆಯರಿಗೆ ಪ್ರವಾದಿವರ್ಯರು ಸಮರಾರ್ಜಿತ ಸೊತ್ತಿನ ಪಾಲನ್ನು ನೀಡಿದ್ದರು. ಉಹುದ್ ಯುದ್ಧದ ಗಾಯಾಳುಗಳನ್ನು, ಹುತಾತ್ಮರಾದವರನ್ನು ಮದೀನಾಕ್ಕೆ ತಲುಪಿಸುವ ಜವಾಬ್ದಾರಿಯನ್ನು ಮುಅವ್ವಿದ್‌ರ ಪುತ್ರಿ ರುಬಯ್ಯ ಹಾಗೂ ಅವರ ಸಹಕಾರ್ಯಕರ್ತೆಯರು ನಿರ್ವಹಿಸಿದ್ದರು. ಉಮ್ಮು ಅತಿಯ್ಯ ಏಳು ಯುದ್ಧಗಳಲ್ಲಿ ಭಾಗವಹಿಸಿದರು. ಅನಸ್ ಇಬ್ನು ಮಾಲಿಕ್‌ರ ತಾಯಿ ಉಮ್ಮು ಸುಲೈಮ್ ಪ್ರವಾದಿಯವ ರೊಂದಿಗೆ ಹಲವು ಯುದ್ಧಗಳಲ್ಲಿ ಭಾಗವಹಿಸಿದ್ದರು. ಕಂದಕ್ ಯುದ್ಧದ ಸಂದರ್ಭದಲ್ಲಿ ಮಹಿಳೆ ಯರನ್ನು, ಮಕ್ಕಳನ್ನು ಆಕ್ರಮಿಸಲು ಬಂದ ಶತ್ರು ಸೈನಿಕನನ್ನು ಸಫಿಯ್ಯ(ರ) ಚೂಪಾದ ಸರ್ಚಿಯಿಂದ ಕೊಂದಿದ್ದರು. ಉಹುದ್ ಯುದ್ಧದಲ್ಲಿ ಪ್ರವಾದಿಯವರ ಜೀವನರಕ್ಷಣೆಗಾಗಿ ಹೋರಾಡಿದವರಲ್ಲಿ ಉಮ್ಮು ಅಮ್ಮಾರ ಒಬ್ಬರು. ಅವರ ದೇಹದಲ್ಲಿ ಯುದ್ಧದಿಂದಾದ ಹಲವು ಗಾಯಗಳಿದ್ದವು. ಒಂದನೇ ಖಲೀಫ ಅಬೂಬಕರ್ ಸಿದ್ದೀಕ್‌ರ ಕಾಲದಲ್ಲಿ ನಡೆದ ಯಮಾಮ ಯುದ್ಧದಲ್ಲಿ ಭಾಗವಹಿಸಿದ ಅವರ ದೇಹದಲ್ಲಿ ಹನ್ನೆರಡು ಗಾಯಗಳಿದ್ದವು. ಹೀಗೆ ಇಸ್ಲಾಮೀ ಇತಿಹಾಸದ ಪುಟಗಳನ್ನು ತಿರುವಿದಾಗ ಧೈರ್ಯ, ಸ್ಥೈರ್ಯದಿಂದ ಹೋರಾಡಿದ ಅನೇಕ ಮಹಿಳೆಯರನ್ನು ಕಾಣಬಹುದು.

ಆಧುನಿಕ ಜಗತ್ತಿನಲ್ಲೂ ಮುಸ್ಲಿಮ್ ಮಹಿಳೆಯರು ಯುದ್ಧರಂಗದಲ್ಲಿ ಹೋರಾಡಿದ ಅಸಂಖ್ಯಾತ ಉದಾಹರಣೆಗಳಿವೆ. ರಝಾ ಶಾ ಪಹ್ಲವಿಯ ಸರ್ವಾಧಿಕಾರಿ ಆಡಳಿತದ ವಿರುದ್ಧ ಖುಮೈನಿ ನಡೆಸಿದ ಹೋರಾಟದಲ್ಲೂ, ರಷ್ಯಾ ಆಕ್ರಮಣದ ವಿರುದ್ಧ ಅಫ್ಘಾನ್ ಜನತೆಯ ಹೋರಾಟದಲ್ಲೂ ಮಹಿಳೆಯರು ಧೀರೋದ್ಧಾತ್ತವಾದ ಸೇವೆಯನ್ನು ಅರ್ಪಿಸಿದರು. ಪಾಶ್ಚಾತ್ಯ ಮಾಧ್ಯಮಗಳು ಕೂಡಾ ಎತ್ತಿ ತೋರಿಸಬೇಕಾದ ರೀತಿಯಲ್ಲಿ ಮಹಿಳೆಯರು ಯುದ್ಧರಂಗದಲ್ಲಿ ಹೋರಾಡಿದ್ದಾರೆ.

ಮಹಿಳೆಯು ಮನೆಯಿಂದ ಹೊರಗಿಳಿದು ಉದ್ಯೋಗ ಮಾಡುವುದನ್ನು ಸಮಾಜಸೇವಾ ಚಟುವಟಿಕೆಗಳಲ್ಲಿ ಭಾಗಿಯಾಗುವುದನ್ನು ಇಸ್ಲಾಮ್ ವಿರೋಧಿಸುವುದಿಲ್ಲವೆಂದು ಈ ಎಲ್ಲಾ

ಘಟನೆಗಳಿಂದ ಸ್ಪಷ್ಟವಾಗುತ್ತದೆ. ಎರಡನೇ ಖಲೀಫ ಉಮರುಲ್ ಫಾರುಕ್‌ರ ಆಡಳಿತ ಕಾಲದ
ವ್ಯಾಪಾರ ವಹಿವಾಟುಗಳ ಮೇಲ್ನೋಟದ ಹೊಣೆಗಾರಿಕೆಯನ್ನು ಶಿಫಾ ಬಿಂತ್ ಅಬ್ದುಲ್ಲಾ ಎಂ
ಮಹಿಳೆಗೆ ವಹಿಸಿದ್ದರು.

ಸಮಕಾಲೀನ ಸಮೂಹದಲ್ಲೂ ಮುಸ್ಲಿಮ್ ಮಹಿಳೆಯರು ಇಸ್ಲಾಮಿ
ಆಂದೋಲನದ ಚಟುವಟಿಕೆಗಳಂತೆಯೇ ಸಮಾಜ ಸೇವಾ ರಂಗಗಳಲ್ಲೂ, ಸಾಮಾ
ಕ್ಷೇತ್ರಗಳ ಚಟುವಟಿಕೆಗಳಲ್ಲೂ ತೊಡಗಿಸಿಕೊಂಡಿದ್ದಾರೆ. ಶೈಕ್ಷಣಿಕ-ವಿಜ್ಞಾನ-ತಂತ್ರಜ್ಞ
ರಂಗಗಳಲ್ಲೂ ಇರಾನೀ ಮಹಿಳೆಯರು ಅಭಿನಂದನಾರ್ಹ ಕೆಲಸವನ್ನು ನಿರ್ವಹಿಸುತ್ತಿದ್ದಾ
ಅಲ್ಲಿನ ಯುನಿವರ್ಸಿಟಿಗಳ ಪ್ರೊಫೆಸರ್‌ಗಳು ಹಾಗೂ ಇತರ ಉದ್ಯೋಗಿಗಳಲ್ಲಿ 40
ಮಹಿಳೆಯರಿದ್ದಾರೆ. ನರ್ಸರಿಯಿಂದ ಆರಂಭಿಸಿ, ಹೈಸ್ಕೂಲ್‌ನ ಕೊನೆಯ ವರ್ಷದವರೆ
ಶಿಕ್ಷಣವನ್ನು ಸಂಪೂರ್ಣವಾಗಿ ಮಹಿಳೆಯರೇ ವಹಿಸಿಕೊಂಡಿದ್ದಾರೆ. ಇರಾನ್‌ನ ಬಹುದೊ
ಸಂಖ್ಯೆಯ ಮಹಿಳೆಯರು ಸ್ವಂತತ್ರವಾಗಿ ವ್ಯಾಪಾರ ಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ಖಾ
ಹಾಗೂ ಸರಕಾರಿ ಕಛೇರಿಗಳಲ್ಲಿ ಕೆಲಸ ಮಾಡುವ ಮಹಿಳೆಯರು ಕಡಿಮೆಯಿಲ್ಲ. ಧಾರ
ಮಹಿಳಾ ವಕೀಲೆಯರು, ವೈದ್ಯೆಯರು, ಇಂಜಿನಿಯರ್‌ಗಳು ಕಾರ್ಯನಿರ್ವಹಿಸುತ್ತಿದ್ದಾ
ಶೈಕ್ಷಣಿಕ ಹಾಗೂ ಆರೋಗ್ಯ ರಂಗಗಳಲ್ಲಿ ಹನ್ನೊಂದು ಲಕ್ಷಕ್ಕಿಂತ ಅಧಿಕ ಮಹಿಳೆಯ
ಸೇವೆಸಲ್ಲಿಸುತ್ತಿದ್ದಾರೆ. ಮಾಧ್ಯಮ ರಂಗದಲ್ಲೂ ಅತ್ಯಧಿಕ ಪ್ರಾತಿನಿಧ್ಯವಿದೆ. ದೂರದರ್ಶ
ವಿಭಾಗದಲ್ಲಿ ಮೂವತ್ತೈದು ಶೇಕಡಾ ಸ್ತ್ರೀಯರಿದ್ದಾರೆ.

ಈಜಿಪ್ಟ್, ಸುಡಾನ್ ಮೊದಲಾದ ಮುಸ್ಲಿಮ್ ರಾಷ್ಟ್ರಗಳಲ್ಲೂ ಇಸ್ಲಾಮೀ ನಿಯಮಗಳ
ಪಾಲಿಸಿಕೊಂಡು ಲಕ್ಷಗಟ್ಟಲೆ ಸ್ತ್ರೀಯರು ಸಾಮಾಜಿಕ ರಂಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾ
ಧಾರ್ಮಿಕ ವಿದ್ವಾಂಸರು, ಇಸ್ಲಾಮೀ ಸಂಘಟನೆಗಳು ಇದನ್ನು ವಿರೋಧಿಸದಿರುವು
ಗಮನಿಸಬೇಕಾದ ಅಂಶವಾಗಿದೆ. ಹೀಗೆ ಸಾಮಾಜಿಕ ರಂಗಗಳಲ್ಲಿ ದುಡಿಯಲು ಅನುವ
ನೀಡಿದರೂ, ಮಹಿಳೆಯರು ಮನೆ ಮತ್ತು ಮಕ್ಕಳ ಸಂರಕ್ಷಣೆಗೆ ಪ್ರಥಮ ಪ್ರಾ
ನೀಡಬೇಕೆಂದು ಇಸ್ಲಾಮ್ ಒತ್ತಿ ಹೇಳುತ್ತದೆ. ಅದರ ನಿರ್ಲಕ್ಷ್ಯವು ಅಪಾಯಕಾರಿಯೂ ಹಾ
ಹಲವಾರು ಆಘಾತಗಳಿಗೆ ಕಾರಣವೂ ಆಗುವುದೆಂಬ ಎಚ್ಚರಿಕೆಯನ್ನು ನೀಡುತ್ತದೆ. ಭಾ
ತಲೆಮಾರುಗಳನ್ನು ಉತ್ತಮ ರೀತಿಯಲ್ಲಿ ಬೆಳೆಸುವುದನ್ನು ಇಸ್ಲಾಮ್ ಕ್ಷುಲ್ಲಕ ಕಾರ್ಯವೆಂ
ಭಾವಿಸುವುದಿಲ್ಲ, ಅತ್ಯಂತ ಪ್ರಾಮುಖ್ಯದ ಕಾರ್ಯವೆಂದು ಪರಿಗಣಿಸುತ್ತದೆ. ಈ ಭೂಮಿಯ
ಅದೇ ಕಾರಣದಿಂದ ಮಾತೆಯೆಂಬ ಸ್ಥಾನಕ್ಕೆ ಅತ್ಯುನ್ನತ ಗೌರವವನ್ನು ನೀಡಲಾಗಿದೆ.

## 35 ಅನಾಥ ಮೊಮ್ಮಕ್ಕಳ ವಾರೀಸು ಹಕ್ಕು

ಮೃತ ವ್ಯಕ್ತಿಗೆ ಮಕ್ಕಳಿದ್ದರೆ ಅನಾಥ ಮಕ್ಕಳಿಗೆ ವಾರೀಸು ಸೊತ್ತಿನಲ್ಲಿ ಅವಕಾಶವಿಲ್ಲವೆಂಬ ನಿಯಮವು ಅನ್ಯಾಯವಲ್ಲವೇ? ಅನಾಥರ ಸಂರಕ್ಷಣೆಗೆ ಹೆಚ್ಚು ಮಹತ್ವ ನೀಡಿರುವ ಇಸ್ಲಾಮಿನ ಈ ನಿಲುವು ಸರಿಯೇ ಈ ನಿಯಮಗಳು ಅನಿಸ್ಲಾಮಿಕ ಮತ್ತು ಕುರ್‌ಆನ್ ವಿರುದ್ಧವೆನಿಸುವುದಿಲ್ಲವೇ?

ಇಸ್ಲಾಮ್ ಅನಾಥರ ಸಂರಕ್ಷಣೆಗೆ ಬಹಳ ಒತ್ತು ನೀಡಿದೆ. ಅವರೊಂದಿಗಿನ ನಿರ್ಲಕ್ಷ್ಯ ಧರ್ಮಧಿಕ್ಕಾರವಾಗಿದೆ. ಅಲ್ಲಾಹನು ಹೇಳುತ್ತಾನೆ: 'ನೀವು ಕಂಡಿರಾ? ಪರಲೋಕದ ಕರ್ಮಫಲ ವನ್ನು ನಿರಾಕರಿಸುವವನನ್ನು. ಅವನೇ ತಾನೇ ಅನಾಥನನ್ನು ದೂರದಬ್ಬುವವನು.' (ಪವಿತ್ರ ಕುರ್ ಆನ್ 107:1-2)

ಅನಾಥರೊಂದಿಗೆ ಅತಿರೇಕದ ವರ್ತನೆಯು ಅಪರಾಧವಾಗಿದೆ. ಪ್ರವಾದಿಯವರನ್ನು ಅಭಿಸಂಬೋಧಿಸಿ ಅಲ್ಲಾಹನು ಆಜ್ಞಾಪಿಸುತ್ತಾನೆ: 'ಅನಾಥನ ಮೇಲೆ ಕಾಠಿಣ್ಯ ತೋರಬೇಡಿರಿ. ಮತ್ತು ಯಾಚಕನನ್ನು ಜರೆಯಬೇಡಿರಿ.' (ಪವಿತ್ರ ಕುರ್‌ಆನ್ 93:9-10)

ವಾರೀಸು ಹಕ್ಕಿನ ಕುರಿತು ಹೇಳಿದ ಕಡೆಗಳಲ್ಲೆಲ್ಲಾ ಪವಿತ್ರ ಕುರ್‌ಆನ್ 'ಬಿಟ್ಟು ಹೋಗಿರುವ ಆಸ್ತಿ' (4:7,176) ಎಂಬ ಪದಪ್ರಯೋಗ ಮಾಡಿದೆ. ಇದರಲ್ಲಿ ಮೂರು ಸಾಮಾನ್ಯ ತತ್ವಗಳಿವೆ.

1. ಓರ್ವನು ಮರಣ ಹೊಂದುವಾಗ ತನ್ನ ಸೊತ್ತನ್ನು ಬಿಟ್ಟು ಹೋಗಿದ್ದರೆ ಮಾತ್ರ ಉತ್ತರಾಧಿಕಾರಿಗಳಿಗೆ ಹಕ್ಕು ಪ್ರಾಪ್ತವಾಗುತ್ತದೆ. ಜೀವಂತ ಇರುವಾಗ ಆತನ ಸೊತ್ತಿನಲ್ಲಿ ಯಾರಿಗೂ ಪಾಲು ಇರುವುದಿಲ್ಲ.

2. ಒಬ್ಬನ ಮರಣದ ಸಮಯದಲ್ಲಿ ಜೀವಿಸಿರುವ ಉತ್ತರಾಧಿಕಾರಿಗಳಿಗೆ ಮಾತ್ರ ವಾರೀಸು ಸೊತ್ತಿನ ಪಾಲು ಸಿಗುವುದು.

3. ಮೃತನು ಬದುಕಿರುವಾಗ ಮರಣ ಹೊಂದಿದ ಉತ್ತರಾಧಿಕಾರಿಗೆ ಮೃತನ ಸೊತ್ತಿನಲ್ಲಿ ಪಾಲು ಇರುವುದಿಲ್ಲ. ವಾರೀಸು ಸೊತ್ತು ಉಂಟಾಗುವ ಮೊದಲೇ ಆತ ಮರಣ ಹೊಂದಿರುವುದು ಇದಕ್ಕೆ ಕಾರಣ.

ವಾರೀಸು ಹಕ್ಕಿಗೆ ಮೂಲ ಆಧಾರವಾಗಿ ಅಲ್ಲಾಹನು ಹತ್ತಿರದ ಸಂಬಂಧವನ್ನು ಆರಿಸಿಕೊಂಡಿದ್ದಾನೆ. 'ಮಾತಾಪಿತರೂ, ನಿಕಟ ಸಂಬಂಧಿಕರೂ ಬಿಟ್ಟು ಹೋದ ಸಂಪತ್ತು' ಎಂಬ ಕುರ್‌ಆನಿನ ಪದ ಪ್ರಯೋಗವು ಅದನ್ನೇ ಸೂಚಿಸುತ್ತದೆ

## ಅನಿವಾರ್ಯವಾದ 6 ನಿಯಮಗಳು

1. ಮೃತನ ನಿಕಟ ಬಂಧುಗಳು ಅದೇ ತಲೆಮಾರಿನ ದೂರದ ಸಂಬಂಧಿಕರ ಹಕ್ಕ ತಡೆಯುತ್ತದೆ.

2. ವಾರೀಸು ಸೊತ್ತಿನ ವಿತರಣೆಯಲ್ಲಿ ಉತ್ತರಾಧಿಕಾರಿಯ ಆರ್ಥಿಕತೆಯನ್ನು ನೋ ಬೇಕಾಗಿಲ್ಲ, ಮೃತನೊಂದಿಗಿನ ಸಂಬಂಧವನ್ನು ಪರಿಗಣಿಸಬೇಕು.

3. ವಾರೀಸು ಸೊತ್ತು ಪಾಲು ಮಾಡುವಾಗ ಮೂಲ ನಿಯಮದಂತೆ ವ್ಯಕ್ತಿಯ ಅಗತ್ಯಗ ಅಥವಾ ಅಸಹಾಯಕತೆಯನ್ನು ನೋಡಬೇಕಿಲ್ಲ, ಸಂಬಂಧದ ಸ್ವರೂಪವನ್ನು ಗಮನಿಸಬೇಕು.

4. ತಂದೆ-ತಾಯಿಂದಿರು, ಪತಿ-ಪತ್ನಿಯರು, ಮಗ-ಮಗಳು ಸಮೀಪದ ಸಂಬಂಧಿಕ ಇರುವಾಗ ಇತರರು ವಾರೀಸು ಸೊತ್ತಿನ ಹಕ್ಕುದಾರರಾಗುವುದಿಲ್ಲ.

5. ತಂದೆಯಿರುವಾಗ ಅಜ್ಜನೋ, ತಾಯಿಯಿರುವಾಗ ಅಜ್ಜಿಯೂ ಪುತ್ರನಿರುವಾ ಮೊಮ್ಮಗನೋ ವಾರೀಸು ಸೊತ್ತಿನ ಹಕ್ಕುದಾರರಾಗಲಾರರು.

6. ತಂದೆಯಿಲ್ಲದಿರುವಾಗ ಅಜ್ಜನೂ, ಪುತ್ರನಿಲ್ಲದಿರುವಾಗ ಮೊಮ್ಮಗನೂ ವಾರೀ ಸೊತ್ತಿನ ಹಕ್ಕುದಾರರಾಗುವುದು ಅವರು ತಂದೆಯ ಹಾಗೂ ಮಗನ ಪ್ರತಿನಿಧಿ ಎಂಬ ಕಾರಣ ಅಲ್ಲ, ಅತಿ ನಿಕಟರಾದವರ ಅನುಪಸ್ಥಿತಿಯಲ್ಲಿ ಆದರ ಹಕ್ಕು ಹತ್ತಿರದ ಸಂಬಂಧಿಕರ ವರೆಗೆ ಬಂ ತಲುಪುತ್ತದೆ. ಮೇಲೆ ತಿಳಿಸಿದ ಕಾರಣಗಳಿಂದ ಪುತ್ರನಿರುವಾಗ ಅವರ ಮಕ್ಕಳಿಗೆ ಪಾತ್ರವಿ ಮೊದಲೇ ಮರಣಹೊಂದಿದ ಪುತ್ರನ ಮಕ್ಕಳಿಗೂ ಮೃತನ ಆಸ್ತಿಯಲ್ಲಿ ಪಾಲು ಇರುವುದೀ ಏಕೆಂದರೆ ವಾರೀಸು ಸೊತ್ತು ಅತ್ಯಂತ ನಿಕಟಸಂಬಂಧವಾದ ಮಗನಿಗೇ ಸಲ್ಲುತ್ತದೆಯೇ ಹೊರ ಮೊಮ್ಮಗನಿಗಲ್ಲ. ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ಆಧಾರದಲ್ಲಿ ಇಂದಿನವ ಪ್ರಾಮಾಣಿಕರಾದ ವಿದ್ವಾಂಸರು ಆ ರೀತಿ ಅರ್ಥೈಸಿಕೊಂಡು ಅದನ್ನೇ ಆಚರಿಸುತ್ತಲೂ ಇದ್ದಾ

ಕೇವಲ ನಿಯಮಗಳಿಂದ ಈ ಸಮಸ್ಯೆಗಳಿಗೆ ಸಂಪೂರ್ಣ ನ್ಯಾಯ ನೀಡಲು ಸಾಧ್ಯವಿ ಇದು ಕೇವಲ ಇಸ್ಲಾಮಿನ ಸ್ಥಿತಿಯಲ್ಲ, ಎಲ್ಲಾ ನಿಯಮ ವ್ಯವಸ್ಥೆಗಳ ಅವಸ್ಥೆಯೂ ಇದೇ ಆಗಿ ಕೆಲವು ಉದಾಹರಣೆಗಳಿಂದ ಈ ವಾಸ್ತವಿಕತೆಯನ್ನು ಯಾರು ಬೇಕಾದರೂ ಸುಲಭದ ಗ್ರಹಿಸಬಹುದು.

1. ಮೃತನಿಗೆ ನಾಲ್ಕು ಮಕ್ಕಳಿದ್ದಾರೆಂದಿಟ್ಟುಕೊಳ್ಳಿ. ಹಿರಿಮಗ 28 ವರ್ಷ ಪ್ರಾಯ ಓರ್ವ ಇಂಜಿನಿಯರ್, ಆತನಿಗೆ ಸ್ವಂತ ಮನೆಯಿದೆ. ಎರಡನೇಯವನು 24 ವರ್ಷ ಡಾಕ್ಟರ್. ಮೂರನೆಯವನು ಹನ್ನೆರಡು ವರ್ಷದ ವಿದ್ಯಾರ್ಥಿ. ನಾಲ್ಕನೆಯವನಿಗೆ ವರ್ಷ. ಸೂಕ್ತ ನ್ಯಾಯವೆಂದರೆ ದುಡಿಯುವ ಪ್ರಾಯಕ್ಕೆ ತಲುಪದ ಆ ಇಬ್ಬರು ಮಕ್ಕ ಹಂಚಿಕೊಡಬೇಕಾಗುತ್ತದೆ. ಹಿರಿಯ ಸಹೋದರರು ಸಾಕಷ್ಟು ಸಂಪಾದಿಸುತ್ತಿದ್ದಾರಲ್ಲವೇ ಆದರೆ ಈ ರೀತಿಯ ಪಾಲು ನಡೆಸಬೇಕೆಂದು ಯಾವುದೇ ನ್ಯಾಯ ವ್ಯವಸ್ಥೆಯು ಹೇಳುವುದಿ ಏಕೆಂದರೆ ಅದು ಪ್ರಾಯೋಗಿಕವೂ ಅಲ್ಲ.

2. ವಾರೀಸುದಾರರಾದ ಇಬ್ಬರು ಪುತ್ರರಲ್ಲಿ ಒಬ್ಬನು ಅಂಗವಿಕಲನೊ, ದುಡಿಯುವ ಶಕ್ತಿ ಕಡಿಮೆಯಿರುವವನೋ ಆಗಿದ್ದು, ಇನ್ನೊಬ್ಬ ಆರೋಗ್ಯವಂತನಾಗಿದ್ದರೆ ಆಸ್ತಿಯ ಸಿಂಹಪಾಲನ್ನು ಅಂಗವಿಕಲನಿಗೆ ನೀಡಿದರೆ ಮಾತ್ರ ನ್ಯಾಯವಾಗುತ್ತದೆ. ಆದರೆ ಅವರಿಬ್ಬರಿಗೂ ಸಮಪಾಲು ಮಾಡುವಂತಹ ನಿಯಮವೇ ಇದೆ.

3. ಒಂದೇ ತಂದೆತಾಯಿ ಮಕ್ಕಳಾಗಿದ್ದರೂ ಅವರೆಲ್ಲರೂ ಬುದ್ಧಿಸಾಮರ್ಥ್ಯದಲ್ಲಿ ಸಮಾನವಾಗಿರುವುದಿಲ್ಲ. ಅವರಲ್ಲಿ ಅಸಾಮಾನ್ಯ ಸಾಮರ್ಥ್ಯ ಉಳ್ಳವರು. ದುರ್ಬಲರಾದವರೂ ಇರುತ್ತಾರೆ. ಸಮರ್ಥರು ಉತ್ತಮ ಮೊತ್ತ ಸಂಪಾದಿಸಲು ಹಾಗೂ ಸುಖವಾಗಿ ಬದುಕಲು ಸಾಧ್ಯವಿರುವುದರಿಂದ ಅವರ ವಾರೀಸು ಸೊತ್ತಿನ ಪಾಲನ್ನು ಇತರರಿಗಿಂತ ಕಡಿಮೆಗೊಳಿಸಬೇಕೆಂಬ ಆದೇಶ ಎಲ್ಲಿಯೂ ಇಲ್ಲ. ವ್ಯಕ್ತಿಯ ಸಾಮರ್ಥ್ಯಕ್ಕನುಗುಣವಾಗಿ ವಾರೀಸು ಸೊತ್ತಿನ ಪಾಲಿನ ಅನುಪಾತ ನಿರ್ಣಯಿಸುವುದು ಸೂಕ್ತವೂ ಅಲ್ಲ.

ಸಂಪೂರ್ಣ ನ್ಯಾಯವನ್ನು ಜಾರಿಗೊಳಿಸಲು ಕೇವಲ ನಿಯಮಗಳಿಂದ ಸಾಧ್ಯವಿಲ್ಲ. ಆದ್ದರಿಂದ ಇಸ್ಲಾಮ್ ಇಲ್ಲಿ ಮನುಷ್ಯನ ಪರಲೋಕ ವಿಶ್ವಾಸ, ಧಾರ್ಮಿಕ ಪ್ರಜ್ಞೆ ಹಾಗೂ ಮಾನವೀಯತೆಗೆ ಒತ್ತು ನೀಡಿದೆ. ಅವುಗಳ ಬೆಂಬಲದಿಂದ ಮಾತ್ರ ಆರ್ಥಿಕ ನೀತಿಯನ್ನು ಕಾರ್ಯಗತಗೊಳಿಸಲು ಸಾಧ್ಯ.

ಪ್ರಾತಿನಿಧ್ಯ ಸಿದ್ಧಾಂತವನ್ನು ಅಂಗೀಕರಿಸಿದರೆ ಮಾತ್ರ ಪುತ್ರನಿರುವಾಗ ಅನಾಥ ಮೊಮ್ಮಗನಿಗೆ ವಾರೀಸು ಸೊತ್ತಿನಲ್ಲಿ ಪಾಲು ದೊರೆಯಬಹುದು. ಮರಣ ಹೊಂದಿದ ಪುತ್ರನು ಬದುಕಿದ್ದಾನೆಂದು ಕಲ್ಪಿಸಿ ಆ ಸ್ಥಳದಲ್ಲಿ ಆತನ ಸಂತಾನಗಳನ್ನು ಪ್ರತಿನಿಧಿಗಳನ್ನಾಗಿಸಿ ವಾರೀಸು ಪಾಲು ನೀಡುವ ಸಂಪ್ರದಾಯವಿದು. ಉದಾಹರಣೆಗೆ A ಎಂಬ ವ್ಯಕ್ತಿಗೆ, B,C ಎಂಬ ಇಬ್ಬರು ಮಕ್ಕಳಿದ್ದಾರೆಂದು ಇಟ್ಟುಕೊಳ್ಳೋಣ D, E, F ಎಂಬವರು B ಯ ಮಕ್ಕಳಾಗಿದ್ದರೆ. A ಬದುಕಿರುವಾಗಲೇ B ಮರಣ ಹೊಂದಿದ. ನಂತರ A ಮೃತನಾದರೆ B ಬದುಕಿದ್ದಾನೆಂದು ಪರಿಗಣಿಸಿ C ಯೊಂದಿಗೆ D, E, F ರನ್ನು B ಯ ಪ್ರತಿನಿಧಿಗಳನ್ನಾಗಿಸಿ A ಯ ವಾರೀಸು ಸೊತ್ತನ್ನು ಪಾಲು ಮಾಡುವುದು. ಆಗ C ಗೆ ಲಭಿಸುವ ಪಾಲು B ಯ ಮೂರು ಮಕ್ಕಳಿಗೂ ದೊರೆಯುತ್ತದೆ.

ಇಸ್ಲಾಮ್ ಈ ಪ್ರಾತಿನಿಧ್ಯ ರೀತಿಯನ್ನು ಅಂಗೀಕರಿಸುವುದಿಲ್ಲ. ಈ ಸಿದ್ಧಾಂತವು ಹಲವಾರು ಗೊಂದಲ, ಸಮಸ್ಯೆಗಳಿಗೆ ಕಾರಣವಾಗುವುದೇ ಇದಕ್ಕೆ ಕಾರಣ.

1. ವಾರೀಸು ಹಕ್ಕು ವ್ಯವಸ್ಥೆಯಲ್ಲಿ ಪಾತಿನಿಧ್ಯ ಸಿದ್ಧಾಂತ ಅಂಗೀಕರಿಸುವುದಾದರೆ, ಎಲ್ಲಾ ಕೋನಗಳಲ್ಲೂ ಅದನ್ನು ಜಾರಿಗೆ ತರುವುದು ಅನಿವಾರ್ಯವಾಗುತ್ತದೆ. ಪತಿ-ಪತ್ನಿಯರೂ ಇದರಿಂದ ಹೊರತಲ್ಲ. ಹಾಗಾದರೆ ಗಂಡನ ಮರಣದ ಬಳಿಕ ಪತ್ನಿ ತೀರಿಕೊಂಡರೆ ಆಕೆಯ ವಾರೀಸು ಸೊತ್ತಿನಿಂದ ಪತಿಯ ಪಾಲನ್ನು ಮೃತ ಪತಿಯ ನಿಕಟ ಬಂಧುಗಳಿಗೆ ನೀಡಬೇಕಾಗಬಹುದು. ಅದೇ ರೀತಿ ಪತ್ನಿಯ ಬಳಿಕ ಪತಿ ಮೃತನಾದರೆ ಪತ್ನಿಯ ಪಾಲನ್ನು

ಅವರ ತಂದೆ, ತಾಯಿಯಂತಹ ನಿಕಟ ಬಂಧುಗಳಿಗೆ ನೀಡಬೇಕಾಗುತ್ತದೆ. ಇಂತಹ ನಿಲುವು ಜಾರಿಗೊಳಿಸಬೇಕೆಂದು ಯಾರೂ ಬಯಸಲಾರರು .

2. ತನ್ನ ತಂದೆಯು ಮೃತರಾದ ಬಳಿಕ ಓರ್ವ ವ್ಯಕ್ತಿ ಮೃತನಾದರೆ, ವಾರೀಸು ಸೊತ್ತನ್ನು ಹಂಚುವಾಗ, ಮೊದಲೇ ಮರಣ ಹೊಂದಿದ ತಂದೆಯು ಉತ್ತರಾಧಿಕಾರಿಗಳೆಲ್ಲರನ್ನೂ ತಂದೆಯ ಪ್ರತಿನಿಧಿಗಳೆಂದು ಪರಿಗಣಿಸಿ ಪಾಲು ನೀಡಬೇಕಾಗಬಹುದು.

ಉದಾ: Aಯ ಮೂರು ಮಕ್ಕಳು B, C,D. ಇದರಲ್ಲಿ B ಗೆ E, F, G ಎಂಬ ಮೂವರು ಮಕ್ಕಳಿದ್ದಾರೆ. ಇವರಲ್ಲಿ A ಮೊದಲೇ ಮೃತರಾಗುತ್ತಾರೆ. ನಂತರ B ಮರಣ ಹೊಂದುವಾಗ ಪತ್ನಿ, ತಾಯಿ, ಅಜ್ಜ, ಅಥವಾ ಅಜ್ಜಿ ಇಲ್ಲದಿದ್ದರೆ ಎಲ್ಲಾ ಸೊತ್ತು ಉಳಿದ ಮಕ್ಕಳಾದ E, F, G ಎಂಬವರಿಗೆ ಲಭಿಸುತ್ತದೆ. ಆದರೆ ಪ್ರಾತಿನಿಧ್ಯ ಸಿದ್ಧಾಂತ ಅಂಗೀಕರಿಸಿದ್ದರೆ, A ಬದುಕಿದ್ದಾರೆಂದು ಊಹಿಸಿ, ಆರರಲ್ಲೊಂದು ಭಾಗ Aಗೆ ತೆಗೆದಿರಿಸಿ, ಬೇರೆ ಮಕ್ಕಳಾದ B, C ಎಂಬವರನ್ನು Aಯ ಪ್ರತಿನಿಧಿಗಳೆಂದು ಅವರಿಗೆ ನೀಡಬೇಕಾಗುವುದು. ಅದೇ ರೀತಿ ಮೊದಲೇ ಮೃತರಾದ ತಾಯಿಯ ನಿಕಟ ಬಂಧುಗಳನ್ನು ಅವರ ಪ್ರತಿನಿಧಿಗಳೆಂದು ಪರಿಗಣಿಸಿ ಆರರಲ್ಲೊಂದು ಅವರಿಗೂ, ಮೃತ ಪತ್ನಿಯ ನಿಕಟ ಸಂಬಂಧಿಕರನ್ನು ಅವರ ಪ್ರತಿನಿಧಿಗಳನ್ನಾಗಿಯೂ ಮಾಡಿ ಎಂಟರಲ್ಲೊಂದು ಅಂಶ ಅವರಿಗೂ ನೀಡುವುದು ಕಡ್ಡಾಯವಾಗುತ್ತದೆ. ಇದರೊಂದಿಗೆ ಅತ್ಯಂತ ಯುಕ್ತಿಪೂರ್ಣವೂ, ವ್ಯವಸ್ಥಿತವೂ ಆದ ವಾರೀಸು ಹಕ್ಕು ದೋಷ ಪೂರ್ಣ ಹಾಗೂ ಅಸ್ತವ್ಯಸ್ತವಾಗುತ್ತದೆ.ಹೀಗೆ ಅನಾಥರಾದ ಮೊಮ್ಮಕ್ಕಳ ಒಳಿತಿಗಾಗಿ ಮಾಡುವ ಅದೇ ವ್ಯವಸ್ಥೆ ಅವರ ಸೊತ್ತು ಇತರ ಸಂಬಂಧಿಕರಿಗೆ ಹರಿದು ಹೋಗುವ ಅನೇಕ ಕವಲುಗಳಾಗಿ ಮಾರ್ಪಡುತ್ತದೆ.

3. ಪವಿತ್ರ ಕುರ್‌ಆನ್ ಅಥವಾ ಹದೀಸ್ ವಚನಗಳಿಂದ ಸ್ಪಷ್ಟವಾಗದ, ಸ್ಪಷ್ಟಪಡಿಸದ ಒಂದು ಹೊಸ ನಿಯಮವನ್ನು ರಚಿಸುವಾಗ ಅದು ಅತ್ಯಂತ ಬುದ್ಧಿಪೂರ್ವಕ ನಡೆಯಾಗಿರಬೇಕು. ಅನಾಥ ಮೊಮ್ಮಕ್ಕಳ ವಿಷಯದಲ್ಲಿ ಮಾತ್ರ ಪ್ರಾತಿನಿಧ್ಯ ಸಿದ್ಧಾಂತವನ್ನು ಅಂಗೀಕರಿಸಿ, ಬೇರೆಲ್ಲಿಯೂ ಪರಿಗಣಿಸದಿದ್ದರೆ, ಅದಕ್ಕೆ ಯಾವುದಾದರೂ ಉದಾಹರಣೆಯೋ, ನ್ಯಾಯಯುತ ಪ್ರತಿಪಾದನೆಯೋ ಅನಿವಾರ್ಯ. ಆದರೆ ಇಲ್ಲಿಯವರೆಗೆ ಯಾರೂ ಅದನ್ನು ಮುಂದಿರಿಸಿಲ್ಲ.

4. ಪ್ರಾತಿನಿಧ್ಯ ಸಿದ್ಧಾಂತ ಅಂಗೀಕರಿಸುವುದಾದರೆ ಸಹೋದರ, ಸಹೋದರಿ, ಪಿತೃ ಸಹೋದರ, ಪಿತೃಸಹೋದರರ ಪುತ್ರರಿಗೆ ವಾರೀಸು ಹಕ್ಕಿನಲ್ಲಿ ಪಾಲು ನಿಶ್ಚಯಿಸಿರುವುದು ಅನಗತ್ಯವೆಂದು ಭಾವಿಸಬೇಕಾಗುತ್ತದೆ. ಏಕೆಂದರೆ ಮೃತವ್ಯಕ್ತಿಗೆ ತಂದೆಯಿದ್ದರೆ ಸಹೋದರರಿಗೂ ಇತರರಿಗೂ ಹಕ್ಕು ಇರುವುದಿಲ್ಲವಲ್ಲಾ, ಇತರ ಪಾಲುದಾರರಿಗೆ ಕೊಟ್ಟು ಉಳಿದದ್ದೆಲ್ಲಾ ಆತನಿಗೇ ಲಭಿಸುತ್ತದೆ. ಪ್ರಾತಿನಿಧ್ಯ ನಿಯಮದಂತೆ ತಂದೆ ಜೀವಂತವಾಗಿಲ್ಲದಿದ್ದರೂ ಬದುಕಿದ್ದಾರೆಂದು ಸಂಕಲ್ಪಿಸಿ, ಆತನ ನಿಕಟ ಬಂಧುಗಳನ್ನು ಅವನ ಪ್ರತಿನಿಧಿಗಳಾಗಿಸಿ, ಎಲ್ಲಾ ಆಸ್ತಿಯನ್ನೂ ಅವರಿಗೆ ನೀಡಬೇಕಾಗುತ್ತದೆ. ಆದರಿಂದ ಸಹೋದರ, ಸಹೋದರಿಯರು ಹಾಗೂ ಇತರರ

ಪಾಲು ನಿರ್ಣಯವು ನಿರರ್ಥಕವೆನಿಸುತ್ತದೆ. ಅವರಿಗೆ ಲಭಿಸುವ ಪಾಲಿನಲ್ಲಿ ಬದಲಾವಣೆ ಸಂಭವಿಸುತ್ತದೆ.

5. ಪ್ರಾತಿನಿಧ್ಯ ಸಿದ್ಧಾಂತವು ಮೊಮ್ಮಕ್ಕಳಿಗೆ ಇಸ್ಲಾಮ್ ನಿಶ್ಚಯಿಸಿದ ಪಾಲಿನಲ್ಲೂ ವ್ಯತ್ಯಾಸ ಉಂಟು ಮಾಡುತ್ತದೆ. Aಗೆ B, C ಎಂಬ ಪುತ್ರರಿದ್ದಾರೆ. ಇವರಲ್ಲಿ Bಗೆ D ಎಂಬ ಮಗನೂ C ಗೆ E, F, G ಎಂಬ ಪುತ್ರರೂ ಇದ್ದಾರೆ. Aಯ ಮರಣದ ಮೊದಲೇ ಮಕ್ಕಳಾದ B ಮತ್ತು C ಮರಣ ಹೊಂದುತ್ತಾರೆ. ನಂತರ A ಮೃತನಾದರೆ ಇಸ್ಲಾಮೀ ನಿಯಮದಂತೆ D, E, F, G ಎಂಬ ಮೊಮ್ಮಕ್ಕಳಿಗೆಲ್ಲಾ ಸಮಾನ ಪಾಲು ದೊರೆಯುತ್ತದೆ. ಪ್ರಾತಿನಿಧ್ಯ ಸಿದ್ಧಾಂತ ಸ್ವೀಕರಿಸುವುದಾದರೆ Bಯ ಪ್ರತಿನಿಧಿಯಾದ Dಗೆ ಲಭಿಸುವ ಪಾಲು ಮಾತ್ರ Cಯ ಪ್ರತಿನಿಧಿಯಾದ E, F, G ಯವರಿಗೂ ದೊರೆಯುವುದು. ಇದು ಇಸ್ಲಾಮೀ ವ್ಯವಸ್ಥೆಯನ್ನು ಕೆಡಿಸುವುದಲ್ಲದೆ ಅತ್ಯಂತ ಅನ್ಯಾಯವೂ ಆಗಿದೆ.

6. ಇಸ್ಲಾಮಿನ ವಾರೀಸು ಹಕ್ಕಿನ ಮೂಲಭೂತ ಉದ್ದೇಶಗಳಲ್ಲಿ ಪರಸ್ಪರ ಸಂರಕ್ಷಣೆಯು ಅತೀ ಪ್ರಧಾನವಾಗಿದೆ. ಪುತ್ರನಿರುವಾಗ ತಂದೆಯ ಪೋಷಣೆಯ ಹೊಣೆ ಮೊಮ್ಮಕ್ಕಳಿಗಿಲ್ಲ, ಅದೇ ವೇಳೆ ಮೊಮ್ಮಗನ ಪೋಷಣೆಯ ಹೊಣೆ ಅಜ್ಜನಿಗಿರುವುದು. ಅಜ್ಜ ಇಲ್ಲದಿದ್ದರೆ ಪಿತೃ ಸಹೋದರನಿಗಿರುತ್ತದೆ. ಆದ್ದರಿಂದ ಮೊಮ್ಮಗನ ವಾರೀಸು ಸೊತ್ತು ತಾತನಿಗೆ ಲಭಿಸುವುದು. ಪ್ರಾತಿನಿಧ್ಯ ಸಿದ್ಧಾಂತದಿಂದ ಇದರ ಮೂಲ ಉದ್ದೇಶವೇ ಇಲ್ಲದಂತಾಗುತ್ತದೆ. ಇಲ್ಲದಿದ್ದರೆ, ತಂದೆಯ ಪ್ರತಿನಿಧಿಯಾಗಿ ತಾತನ ಸಂರಕ್ಷಣೆಯು ಮೊಮ್ಮಗನಿಗೆ ಬಂದು ತಲುಪುತ್ತದೆ. ಪುತ್ರನಿರುವಾಗ ಅನಾಥ ಮೊಮ್ಮಗನಿಗೆ ಈ ಹೊಣೆಯನ್ನು ವಹಿಸುವುದು ಖಂಡಿತ ಅನ್ಯಾಯವಾಗುತ್ತದೆ.

ಪ್ರಾಚೀನ ಅರೇಬಿಯಾದಲ್ಲಿ ಅನಾಥರಾದ ಮೊಮ್ಮಕ್ಕಳಿಗೆ ಮಾತ್ರವಲ್ಲ ಅನಾಥ ಪುತ್ರರಿಗೂ ವಾರೀಸು ಹಕ್ಕು ಇರಲಿಲ್ಲ, ಪ್ರಾಯ ಪೂರ್ತಿಯಾದ ಪುತ್ರರಿಗೆ ಮಾತ್ರ ಉತ್ತರಾಧಿಕಾರ ಲಭಿಸುತ್ತಿತ್ತು. ಆದರೆ ಇಸ್ಲಾಮ್ ಗರ್ಭಸ್ಥ ಶಿಶುವೋ ಸೇರಿದಂತೆ ಎಲ್ಲಾ ಮಕ್ಕಳಿಗೂ ವಾರೀಸು ಹಕ್ಕನ್ನು ನೀಡಿತು. ಆದರೆ ಇಸ್ಲಾಮಿನ ಸೂಕ್ತ, ಸುವ್ಯವಸ್ಥಿತವಾದ ವಾರೀಸು ನಿಯಮದಂತೆ ಮೊದಲೇ ತಿಳಿಸಿದ ಹಲವು ನ್ಯಾಯಯುತ ಕಾರಣಗಳಿಂದ ಪುತ್ರನು ಬದುಕಿರುವಾಗ ಅನಾಥ ಮೊಮ್ಮಗನಿಗೆ ಪಾಲು ದೊರೆಯುವುದಿಲ್ಲ, ಪ್ರಾಚೀನ ಕಾಲದಲ್ಲಿ ಗೋತ್ರಗಳಲ್ಲಿ ಇದು ಯಾವುದೇ ಸಮಸ್ಯೆಗೆ ಕಾರಣವಾಗಿರಲಿಲ್ಲ,

ಕುಟುಂಬದ ಸರ್ವ ಸದಸ್ಯರ ಗಾಢಸಂಬಂಧವು ಇದಕ್ಕೆ ಕಾರಣವಾಗಿತ್ತು. ಅಂದು ಅನಾಥರ ಪೋಷಣೆಯ ಸಂಪೂರ್ಣ ಹೊಣೆಯನ್ನು ಪೋಷಕರು ಉತ್ತಮ ರೀತಿಯಿಂದ ನಿಭಾಯಿಸುತ್ತಿದ್ದರು. ಅಜ್ಜ, ಪಿತೃ ಸಹೋದರರಂತಹ ಸಮೀಪದ ಬಂಧುಗಳು ಅವರನ್ನು ನಿರ್ಲಕ್ಷಿಸುತ್ತಿರಲಿಲ್ಲ, ಜನನಕ್ಕಿಂತ ಮೊದಲೇ ತಂದೆಯನ್ನು ಕಳೆದುಕೊಂಡ ಪ್ರವಾದಿಯನ್ನು ತಾತ ಮುತ್ತಲಿಬ್, ಬಳಿಕ ಚಿಕ್ಕಪ್ಪ ಅಬೂತಾಲಿಬ್ ಪೋಷಿಸಿದ ಘಟನೆಯು ಎಲ್ಲರಿಗೂ ತಿಳಿದಿದೆ. ಇವರ

ಚಿಕ್ಕಪ್ಪ ಪ್ರವಾದಿವರ್ಯರನ್ನು ಬೆಳೆಸಿದ್ದು ಮಾತ್ರವಲ್ಲ, ತನ್ನ ಸ್ವಂತ ಮಕ್ಕಳಿಗಿಂತಲೂ ಗಾಢವಾಗಿ ಪ್ರೀತಿಸಿದರು. ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿ ಪ್ರವಾದಿಯವರಿಗಾಗಿ ಊರಿನ ಗಣ್ಯರ ವಿರೋಧವನ್ನು ಎದುರಿಸಿದರು. ಗಾಢವಾದ ಕುಟುಂಬ ಬಾಂಧವ್ಯ ಹಾಗೂ ಗೋತ್ರ ಸ್ನೇಹವು ಇದರಲ್ಲಿ ಮುಖ್ಯ ಪಾತ್ರ ವಹಿಸಿತ್ತು. ಪರಂಪರಾಗತವಾಗಿ ರೂಢಿಯಲ್ಲಿರುವ ಈ ಕೌಟುಂಬಿಕ ವ್ಯವಸ್ಥೆಯು ಇಸ್ಲಾಮ್‌ನ ಆಗಮನದ ಬಳಿಕವೂ ಮುಂದುವರಿಯಿತು. ಆದ್ದರಿಂದ ಅನಾಥ ಮೊಮ್ಮಕ್ಕಳ ವಾರೀಸು ಹಕ್ಕಿನ ವಿಷಯ ಇತ್ತೀಚಿಗಿನ ವರೆಗೂ ಚರ್ಚಾವಿಷಯವಾಗಿರಲಿಲ್ಲ. ಇಸ್ಲಾಮ್ ಎತ್ತಿ ಹಿಡಿಯುವ ಉನ್ನತ ನೈತಿಕ ಪ್ರಜ್ಞೆ, ಮಾನವೀಯ ಮೌಲ್ಯಗಳು ಹಾಗೂ ಅನುಕಂಪವೂ ಇದಕ್ಕೆ ಕಾರಣವಾಗಿದೆ.

ಆದರೆ, ಹಳೆಯ ಗೋತ್ರ ಸಂಬಂಧಗಳು ಮಸುಕಾಗಿ, ಅನಾಥರ ಪಾಲನೆ ಪೋಷಣೆಯಲ್ಲಿ ಪೋಷಕರು ಉದಾಸೀನ ತೋರುತ್ತಿರುವ ಈ ಆಧುನಿಕ ಕಾಲದಲ್ಲಿ ಅನಾಥ ಮೊಮ್ಮಕ್ಕಳ ವಾರೀಸು ಹಕ್ಕಿನ ಸಮಸ್ಯೆಗಳಿಗೆ ಖಂಡಿತ ಪರಿಹಾರ ಬೇಕಾಗಿದೆ. ಪರಲೋಕ ಪ್ರಜ್ಞೆ ಮೂಡಿಸುವ, ಸ್ನೇಹ-ವಾತ್ಸಲ್ಯ-ಕಾರುಣ್ಯದಂತಹ ಭಾವನಾತ್ಮಕ ನೈತಿಕ ಚಿಂತನೆಗಳಿಗೆ ಅದನ್ನು ಬಿಟ್ಟುಕೊಡಬಾರದೆಂಬ ಪ್ರಬಲ ಅಭಿಪ್ರಾಯಗಳು ಕೇಳಿಬರುತ್ತಿದೆ. ಮುಸ್ಲಿಮ್ ಲೋಕದಲ್ಲಿ ಇದು ಹಲವಾರು ವಿವಾದಗಳಿಗೆ ಹಲವು ಇಸ್ಲಾಮೀ ವ್ಯವಸ್ಥೆಯು ಚೈತನ್ಯವನ್ನು ಕಳೆದುಕೊಂಡು, ದೌರ್ಬಲ್ಯಗಳಿಂದ ಕೂಡಿದೆ.

ಆದರೂ ಈ ಸಮಸ್ಯಗೆ ಇಸ್ಲಾಮೀ ಪರಿಹಾರ ಅನಿವಾರ್ಯವೆಂದು ಹಲವು ಆಧುನಿಕ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಇಸ್ಲಾಮೀ ವ್ಯವಸ್ಥೆಯ ಚೌಕಟ್ಟಿನಲಿದ್ದುಕೊಂಡೇ ಅದು ಹೇಗೆ ಸಾಧ್ಯವಾಗುತ್ತದೆಯೆಂಬುದೇ ಈಗಿನ ಸಮಸ್ಯೆ. ವಾರೀಸು ಸೊತ್ತು ಲಭಿಸದ ಸಮೀಪದ ಸಂಬಂಧಿಕರಿಗೆ ವಸಿಯ್ಯತ್(ಉಯಿಲು) ಕಡ್ಡಾಯವೆಂಬ ಹಿಂದಿನ ವಿದ್ವಾಂಸರ ಅಭಿಪ್ರಾಯವು ಇಲ್ಲಿ ಪ್ರಸ್ತುತವಾಗುತ್ತದೆ. ತಾವೂಸ್, ಖತಾದಃ ಹಸನ್ ಬಸರಿ, ಜಾಬಿರ್, ಅಬೂಮಿಜ್ ಲಸ್, ಮಸ್‌ರೂಕ್, ಇಯಾಝ್, ಇಬ್ನು ಜರೀರ್ ಝುಹ್ರಿಯವರು ಈ ನಿಲುವನ್ನು ಅಂಗೀಕರಿಸಿದ್ದಾರೆ. ಇದೇ ರೀತಿ ವಾರೀಸು ಹಕ್ಕು ನಿಯಮಗಳ ಅವತೀರ್ಣದಿಂದ ವಸಿಯ್ಯತ್ ಕಡ್ಡಾಯಗೊಳ್ಳುವ ಕುರ್‌ಆನ್ ವಾಕ್ಯವು ದುರ್ಬಲವಾಯಿತೆಂಬ ದೃಷ್ಟಿಕೋನವನ್ನು ಇಬ್ನು ಉಮರ್, ತಲ್ಹಾ, ಝುಬೈರ್, ಅಬ್ದುಲ್ಲಾ ಇಬ್ನು ಉಬಯ್ಯ್, ಶಅ್‌ಬಿ, ಅತಾಅ್, ಇಸ್‌ಹಾಕ್, ತಬರಿ, ದಾವೂದ್ ಮುಂತಾದವರು ಹೊಂದಿಲ್ಲ.

ಏನಿದ್ದರೂ ಅನಾಥ ಮೊಮ್ಮಕ್ಕಳಿಗೆ ವಸಿಯ್ಯತ್ ಮಾಡುವುದು ತಾತನ ನೈತಿಕ ಕರ್ತವ್ಯವಾಗಿದೆ. ನಿಯಮದ ಮೂಲಕ ಅದಕ್ಕೆ ಅವರನ್ನು ನಿರ್ಬಂಧಿಸಬಹುದೆಂದು ಹಲವು ಆಧುನಿಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಪ್ರಸಿದ್ಧ ಈಜಿಪ್ಟ್ ಗ್ರಂಥಕರ್ತರಾದ ಮುಹಮ್ಮದ್ ಅಬೂಝುಹ್ರ, ಮುಹಮ್ಮದ್ ಝುಕರಿಯ್ಯಲ್ ಬರ್‌ದೀಸಿ ಮೊದಲಾದವರು ಇಂತಹ ನಿಯಮದ ರಚನೆಗೆ ಅನುಮೋದನೆ ನೀಡಿದ್ದಾರೆ.

ಮುಹಮ್ಮದ್ ಅಬೂಝುಹ್ರ ಈ ಕುರಿತು ಸ್ಪಷ್ಟ ಮಾರ್ಗ ನಿರ್ದೇಶಗಳನ್ನು ನೀಡಿದ್ದಾರೆ. ಅದರಂತೆ ಅನಾಥ ಮೊಮ್ಮಕ್ಕಳ ತಂದೆ ಬದುಕಿರುತ್ತಿದ್ದರೆ ಲಭಿಸಬಹುದಾಗಿದ್ದ ಆಸ್ತಿಯ ಅಥವಾ ವಸಿಯ್ಯತ್ ಮಾಡಬಹುದಾದ ಸಂಪೂರ್ಣ ಆಸ್ತಿಯ ಮೂರರಲ್ಲೊಂದೋ ಅಥವಾ ಕಡಿಮೆಯೋ ಅಷ್ಟನ್ನು ಮೃತನ ಆಸ್ತಿಯಿಂದ ಮೊಮ್ಮಕ್ಕಳಿಗೆ ನೀಡಿ, ಉಳಿದದ್ದನ್ನು ನೈಜ ಹಕ್ಕುದಾರರಿಗೆ ಪಾಲುಮಾಡಬೇಕು. ಉದಾಹರಣೆಗೆ ಮೃತವ್ಯಕ್ತಿಗೆ ಪುತ್ರನೋ, ಎರಡು ಪುತ್ರಿಯರೋ, ತಂದೆತಾಯಿಗಳೋ, ಮೃತ ವ್ಯಕ್ತಿಯ ಮಗನ ಮಗಳು ಇದ್ದರೆ, ಮಾತಾಪಿತರಿಗೆ ಆರರಲ್ಲೊಂದು ಅಂಶವೂ ಉಳಿದಿದ್ದು ಮಕ್ಕಳಿಗೂ ದೊರೆಯುತ್ತದೆ ಅಲ್ಲವೇ? ಮೃತ ವ್ಯಕ್ತಿಯ ಮಗನು ಬದುಕಿದ್ದರೆ, ಉಳಿದ ಆರರಲ್ಲಿ ಎರಡು(2/6) ಅಥವಾ ಒಟ್ಟು ಆಸ್ತಿಯ ಹದಿನೆಂಟರಲ್ಲಿ ನಾಲ್ಕು(4/18) ಆತನಿಗಿರುತ್ತದೆ. ವಸಿಯ್ಯತ್(ಉಯಿಲು) ಮಾಡಬಹುದಾದ ಗರಿಷ್ಠ ಆಸ್ತಿಗಿಂತ ಅದು ಕಡಿಮೆಯಾದರೆ ಅಷ್ಟು ಧನವನ್ನು ವಾರೀಸು ಸೊತ್ತಿನಿಂದ ತೆಗೆದು, ಅನಾಥ ಮೊಮ್ಮಗಳಿಗೆ ನೀಡಿ, ಉಳಿದ ವಾರೀಸುದಾರರಿಗೆ ಪಾಲು ಮಾಡಬೇಕು. ಅಥವಾ ಮೃತನಿಗೆ ಪುತ್ರನೂ, ಮೃತ ಪುತ್ರನಿಗೆ ಪುತ್ರನೂ ಇದ್ದರೆ ಮೃತ ಮಗನು ಬದುಕಿರುವನೆಂದು ಊಹಿಸಿ, ಸಿಗಬಹುದಾದ ಆಸ್ತಿಯ ಅರ್ಧಪಾಲನ್ನು ಮೊಮ್ಮಗನಿಗೆ ನೀಡಬಾರದು. ಏಕೆಂದರೆ ಅದು ವಸಿಯ್ಯತ್ ಮಾಡಬಹುದಾದ ಮೂರರಲ್ಲಿ ಒಂದಕ್ಕಿಂತ ಹೆಚ್ಚಾಗುತ್ತದೆ. ಇಂತಹ ಸಂದರ್ಭದಲ್ಲಿ ಮೂರರಲ್ಲೊಂದು ಮೊಮ್ಮಕ್ಕಳಿಗಾಗಿ ಮೀಸಲಿರಿಸಬೇಕು. ಹೀಗೆ ವಸಿಯ್ಯತ್ ಮಾಡಲು ತಾತಂದಿರನ್ನು ನಿಯಮದ ಮೂಲಕ ನಿರ್ಬಂಧಿಸಬೇಕೆಂಬ ನಿಲುವನ್ನು ನಿರಾಕರಿಸಬೇಕಾದ ಅಗತ್ಯವಿಲ್ಲ.

ನಮ್ಮಂತೆ ಕಾನೂನಿನ ಮೂಲಕ ವಸಿಯ್ಯತ್ತನ್ನು ಕಡ್ಡಾಯಗೊಳಿಸದ ದೇಶಗಳಲ್ಲಿ ಪುತ್ರ ಅಥವಾ ಪುತ್ರಿ ಮರಣ ಹೊಂದುವಾಗಲೇ ಅವರ ಅನಾಥ ಮಕ್ಕಳಿಗೆ ವಸಿಯ್ಯತ್ ಮಾಡಲು ತಾತಂದಿರು ಸಿದ್ಧರಾಗಬೇಕು. ಹೀಗೆ ಅನಾಥ ಮೊಮ್ಮಕ್ಕಳ ಆಸ್ತಿಯ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾದರೆ ಇಸ್ಲಾಮ್ ಬಹಳ ಪ್ರಾಧಾನ್ಯತೆ ನೀಡಿರುವ ಅನಾಥ ಸಂರಕ್ಷಣೆಗೆ ಹಾದಿ ತೆರೆದಂತಾಗುತ್ತದೆ. ವಾರೀಸು ಹಕ್ಕು ಲಭಿಸದ ನಿಕಟಸಂಬಂಧಿಕರಿಗೆ ವಸಿಯ್ಯತ್ ಮಾಡುವುದು ಕಡ್ಡಾಯವೆಂಬ ಅಭಿಪ್ರಾಯವಿಲ್ಲದ ವಿದ್ವಾಂಸರು ಸಹ ಅದು ಅತ್ಯುತ್ತಮ ಪುಣ್ಯಕರ್ಮವೆಂದು ಹೇಳಿರುವುದು ಗಮನಾರ್ಹವಾಗಿದೆ.

## 36 ಪ್ರಾಣಿ ಬಲಿ ಮತ್ತು ದಯೆ

**ದಯೆಯ ಕುರಿತು ಬಹಳವಾಗಿ ಮಾತನಾಡುವ ಇಸ್ಲಾಮ್ ಪ್ರಾಣಿ ಹಾಗೂ ಇತರ ಜೀವಿಗಳೊಂದಿಗೆ ಕ್ರೂರವಾಗಿ ವರ್ತಿಸುತ್ತಿದೆಯಲ್ಲಾ? ಅವುಗಳನ್ನು ಕೊಲ್ಲುವುದು ಎಷ್ಟು ಸರಿ.?**

ಭೂಮಿಯಲ್ಲಿರುವ ಎಲ್ಲ ಜೀವಜಾಲಗಳ ಮೇಲೆ ದಯೆ ತೋರಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ಪ್ರವಾದಿ(ಸ)ರು ಹೇಳಿದರು: 'ಭೂಮಿಯಲ್ಲಿರುವವರಿಗೆ ಕರಣೆ ತೋರಿಸಿರಿ, ಆಕಾಶದಲ್ಲಿರುವವನು ನಿಮ್ಮ ಮೇಲೆ ಕರುಣೆ ತೋರುವನು.' (ತ್ವಬ್ರಾನಿ)

'ಕರುಣೆಯಿಲ್ಲದವನಿಗೆ ಕಾರುಣ್ಯ ಲಭಿಸುವುದಿಲ್ಲ.' (ಬುಖಾರಿ, ಮುಸ್ಲಿಮ್)

'ದೌರ್ಭಾಗ್ಯ ಶಾಲಿಯ ಹೊರತು ಯಾರೂ ಕರುಣೆಯಿಲ್ಲದವರಾಗಲಾರರು.' (ಅಬೂದಾವೂದ್)

ಇಸ್ಲಾಮ್ ಭೂಮಿಯಲ್ಲಿರುವ ಜೀವಜಾಲಗಳನ್ನೆಲ್ಲಾ ಮನುಷ್ಯರಂತಹ ಸಮೂಹವೆಂದು ಪರಿಗಣಿಸುತ್ತದೆ. ಅಲ್ಲಾಹನು ಹೇಳುತ್ತಾನೆ: **'ಭೂಮಿಯ ಮೇಲೆ ಚಲಿಸುವ ಪ್ರಾಣಿಗಳನ್ನು ವಾಯುವಿನಲ್ಲಿ ರೆಕ್ಕೆಗಳಿಂದ ಹಾರಾಡುವ ಪಕ್ಷಿಗಳನ್ನು ನೋಡಿಕೊಳ್ಳಿರಿ. ಇವೆಲ್ಲವೂ ನಿಮ್ಮಂತೆಯೇ ಇರುವ ವರ್ಗಗಳು.' (ಪವಿತ್ರ ಕುರ್‌ಆನ್ 6: 38)**

ಮನುಷ್ಯರು ಧಿಕ್ಕಾರಿಗಳಾದರೂ, ಇತರ ಜೀವಜಾಲಗಳನ್ನು ಪರಿಗಣಿಸಿ ಮಳೆ ಸುರಿಯುತ್ತದೆಂದು ಪ್ರವಾದಿವರ್ಯರು ಹೇಳಿದ್ದಾರೆ: 'ಜನರು ಝಕಾತ್ ನೀಡದಿದ್ದರೆ ಮಳೆ ನಿಂತು ಹೋಗುತ್ತಿತ್ತು. ಇತರ ಜೀವಿಗಳ ಕಾರಣದಿಂದ ಮಳೆ ಸುರಿಯುತ್ತದೆ.' (ಇಬ್ನು ಮಾಜಃ)

ಯಾವುದೇ ಜೀವಿಗೂ ಸಹಾಯ ಮಾಡುವುದು ಪುಣ್ಯಕರ್ಮವಾಗಿದೆ. ಪ್ರವಾದಿ(ಸ) ಹೇಳುತ್ತಾರೆ: 'ಪ್ರತಿಯೊಂದು ಜೀವಿಗೆ ತೋರುವ ಕರುಣೆಗೂ ಪುಣ್ಯವಿದೆ.' (ಬುಖಾರಿ)

ಪ್ರವಾದಿವರ್ಯರು ಹೇಳುತ್ತಾರೆ: 'ಒಬ್ಬನು ದಾರಿಯಲ್ಲಿ ಹೋಗುತ್ತಿದ್ದಾಗ ಬಾಯಾರಿಕೆಯಿಂದ ಬಳಲಿದನು. ಅವನಿಗೆ ಒಂದು ಬಾವಿ ಕಾಣಿಸಿತು. ಅದರಲ್ಲಿ ಇಳಿದು ನೀರು ಕುಡಿದು ಹೊರಗೆ ಬಂದಾಗ ಒಂದು ನಾಯಿಯು ಬಾಯಾರಿ ಬಳಲಿ ನೆಲೆ ನೆಕ್ಕುವುದನ್ನು ಕಂಡನು. ಈ ನಾಯಿಗೆ ನನ್ನಂತೆಯೇ ಬಾಯಾರಿಕೆಯಾಗಿದೆಯೆಂದು ಮನದಲ್ಲಿಯೇ ಹೇಳುತ್ತಾ ಅವನು ಬಾವಿಗಿಳಿದು ತನ್ನ ಬೂಟಿನಲ್ಲಿ ನೀರು ತುಂಬಿಸಿ ಅದನ್ನು ಬಾಯಿಯಲ್ಲಿ ಕಚ್ಚಿ ಹಿಡಿದು ಮೇಲೆ ಬಂದು ನಾಯಿಗೆ ಕುಡಿಸಿದರು. ಇದಕ್ಕಾಗಿ ಅಲ್ಲಾಹನು ಅವನಿಗೆ ಕೃತಜ್ಞತೆ ತೋರಿದನು. ಅವರಿಗೆ ಕ್ಷಮೆ ನೀಡಿದನು.' ಇದನ್ನು ಕೇಳಿದ ಅವರ ಸಂಗಾತಿಗಳು ಹೀಗೆ ಪ್ರಶ್ನಿಸಿದರು. 'ಪ್ರಾಣಿಗಳ

ವಿಷಯದಲ್ಲಿಯೂ ನಮಗೆ ಪ್ರತಿಫಲವಿದೆಯೇ' ಪ್ರವಾದಿ(ಸ) ಉತ್ತರಿಸಿದರು, 'ಪ್ರಾಣವಿರುವ ಎಲ್ಲ ಜೀವಿಗಳ ಬಗ್ಗೆಯೂ ನಿಮಗೆ ಪ್ರತಿಫಲವಿದೆ.' (ಬುಖಾರಿ ಮುಸ್ಲಿಮ್)

ಇನ್ನೊಂದು ಘಟನೆಯನ್ನು ಪ್ರವಾದಿ(ಸ) ಹೀಗೆ ವಿವರಿಸುತ್ತಾರೆ: 'ಒಂದು ನಾಯಿಯು ಬಾವಿಯ ಸುತ್ತಲೂ ಓಡಾಡುತ್ತಿತ್ತು. ತೀವ್ರ ಬಾಯಾರಿಕೆಯಿಂದ ಅದು ಸಾಯುವ ಸ್ಥಿತಿಗೆ ತಲುಪಿತ್ತು. ಇದನ್ನು ನೋಡಿ ಇಸ್ರಾಈಲ್ ಜನಾಂಗದ ಓರ್ವ ವ್ಯಭಿಚಾರಿಣಿಯು ತನ್ನ ಬೂಟು ಕಳಚಿ ಅದರಲ್ಲಿ ನೀರು ತಂದು ಅದಕ್ಕೆ ಕುಡಿಸಿದಳು ಮತ್ತು ತಾನೂ ಕುಡಿದಳು. ಅದಕ್ಕಾಗಿ ಅಲ್ಲಾಹನು ಆಕೆಗೆ ಕ್ಷಮೆ ನೀಡಿದನು.' (ಬುಖಾರಿ)

ಜೀವಿಗಳಿಗೆ ದ್ರೋಹವೆಸಗುವುದು ಅಪರಾಧವಾಗಿದೆ. ಪ್ರವಾದಿವರ್ಯರು ಅದನ್ನು ತೀವ್ರವಾಗಿ ಖಂಡಿಸಿದ್ದಾರೆ. ಅವರು ಹೇಳುತ್ತಾರೆ: 'ಬೆಕ್ಕಿನಿಂದಾಗಿ ಓರ್ವ ಮಹಿಳೆಯು ದಂಡನೆಗೆ ಗುರಿಯಾದಳು. ಆವಳು ಅದನ್ನು ಹಸಿವೆಯಿಂದ ಸಾಯುವ ತನಕ ಕಟ್ಟಿಹಾಕಿದಳು. ಅದ್ದರಿಂದ ಆಕೆ ನರಕವಾಸಿಯಾದಳು.' (ಬುಖಾರಿ, ಮುಸ್ಲಿಮ್)

'ಒಂದು ಗುಬ್ಬಚ್ಚಿ ಅಥವಾ ಅದಕ್ಕಿಂತಲೂ ಸಣ್ಣ ಜೀವಿಯನ್ನು ಅನ್ಯಾಯವಾಗಿ ಕೊಲ್ಲುವುದು ಅಲ್ಲಾಹನ ಬಳಿ ಉತ್ತರಿಸಬೇಕಾದ ವಿಷಯವಾಗಿದೆ.'

'ನ್ಯಾಯಯುತವಾದ ಅಗತ್ಯವೇನೆಂದು' ಕೇಳಿದಾಗ ಅವರು ಹೇಳಿದರು: 'ಆಹಾರ ತಯಾರಿಸುವುದು, ಬಲಿಯರ್ಪಿಸುವುದು ಮತ್ತು ಕೊಂದ ಬಳಿಕ ವೃಥಾ ಉಪೇಕ್ಷಿಸದಿರುವುದು.' (ಅಹ್ಮದ್)

ಮನೋರಂಜನೆಗಾಗಿ ಪ್ರಾಣಿಗಳನ್ನು ಕೊಲ್ಲುವುದನ್ನೂ, ಪರಸ್ಪರ ಕಾದಾಡಿಸುವುದನ್ನೂ ಪ್ರವಾದಿ(ಸ) ನಿಷೇಧಿಸಿದ್ದಾರೆ.( ಮುಸ್ಲಿಮ್, ತಿರ್ಮಿದಿ)

ಹೀಗೆಪ್ರಾಣಿಗಳಿಗೆಕಲ್ಲೆಸೆಯುವುದನ್ನೂ, ಜೇನ್ನೊಣ, ಇರುವೆ, ಗುಬ್ಬಚ್ಚಿಯಂತಹವುಗಳನ್ನು ವೃಥಾ ಕೊಲ್ಲುವುದನ್ನು ಪ್ರವಾದಿ(ಸ) ವಿರೋಧಿಸಿದ್ದಾರೆ.(ಮುಸ್ಲಿಮ್, ಅಬೂದಾವುದ್)

ಪ್ರವಾದಿ(ಸ) ಹೇಳಿದ್ದಾರೆ: ಯಾರಾದರೂ ಒಂದು ಪಕ್ಷಿಯನ್ನು ಅನಗತ್ಯವಾಗಿ ಕೊಂದರೆ ಅಂತ್ಯದಿನಂದು ಅದು ಅಲ್ಲಾಹನೊಡನೆ ಜೋರಾಗಿ ಕಿರುಚಿಕೊಂಡು ಹೇಳುತ್ತಾರೆ: 'ನನ್ನ ಪ್ರಭೂ! ಈ ವ್ಯಕ್ತಿ ನನ್ನನ್ನು ಅನಗತ್ಯವಾಗಿ ಕೊಂದಿದ್ದಾನೆ. ಆತನ ಉಪಯೋಗಕ್ಕಾಗಿ ನನ್ನನ್ನು ಕೊಂದದ್ದಲ್ಲ.' (ನಸಾಈ, ಇಬ್ನು ಹಿಬ್ಬಾನ್)

ಚಳಿಕಾಯಿಸಲು ಬೆಂಕಿ ಉರಿಸಿದ ಅನುಯಾಯಿಗಳೊಡನೆ ಪ್ರವಾದಿ(ಸ) ಅದು ಅಲ್ಲಿರುವ ಇರುವೆಗಳನ್ನು ಸುಡಬಹುದೆಂಬ ಭಯದಿಂದ ಅದನ್ನು ನಂದಿಸುವಂತೆ ಸೂಚಿಸಿದರು. ಹಸಿವೆಯಿಂದ ಕಂಗಾಲಾಗಿ ರೋದಿಸುತ್ತಿದ್ದ ಒಂಟೆಯ ಮಾಲಿಕನನ್ನು ಗದರಿಸಿದರು. ಮೃಗಗಳ ಮುಖದ ಮೇಲೆ ಹಚ್ಚೆಹಾಕುವುದನ್ನೂ, ಬೆನ್ನಿಗೆ ಸುಟ್ಟ ಬರೆಯನ್ನು ಹಾಕುವುದನ್ನು ವಿರೋಧಿಸಿದರು. ಮೃಗಗಳ ಬೆನ್ನನ್ನು ಆಸನವನ್ನಾಗಿ ಮಾಡಬಾರದೆಂದು ಆಜ್ಞಾಪಿಸಿದ ಅವರು ಸಸ್ಯ ಸಂಕುಲದೊಂದಿಗೂ ಕರುಣೆ ತೋರಬೇಕೆಂದು ಉಪದೇಶಿಸಿದರು.

ಮರಕ್ಕೆ ಕಲ್ಲೆಸೆಯುತ್ತಿದ್ದ ಬಾಲಕನೊಡನೆ 'ವಿನಾಕಾರಣ ಮರಕ್ಕೆ ಕಲ್ಲೆಸೆಯಬಾರದು. ಅದರಿಂದ ಮರಕ್ಕೆ ನೋವಾಗುವುದೆಂದು ಹೇಳಿದರು.'

ಹೀಗೆ ಪ್ರಪಂಚದ ಸರ್ವಜೀವಜಾಲಗಳೊಂದಿಗೆ ಕರುಣಾಳುಗಳಾಗಿರಬೇಕೆಂದು ಇಸ್ಲಾಮ್ ಬಯಸುತ್ತದೆ.

ಆಹಾರವಿಲ್ಲದೆ ಯಾವ ಜೀವಿಯೂ ಬದುಕಲಾರದು. ಸಸ್ಯ, ಪ್ರಾಣಿ, ಜಲಚರ, ಜಾನುವಾರುಗಳು, ಹಕ್ಕಿಗಳು, ಕೀಟಗಳು ಆಹಾರದಿಂದಲೇ ಬದುಕುತ್ತದೆ. ಅದು ಸಾಧ್ಯವಾಗಬೇಕಾದರೆ ಒಂದು ಜೀವಿ ಇನ್ನೊಂದನ್ನು ಉಪಯೋಗಿಸಬೇಕಾಗುತ್ತದೆ. ಸಸ್ಯಗಳು ತಮ್ಮ ಉಳಿವಿಗಾಗಿ ಇತರ ಸಸ್ಯಗಳನ್ನು ಉಪಯೋಗಿಸುತ್ತದೆ. ಪ್ರಾಣಿಗಳನ್ನು ಆಹಾರವಾಗಿಸುವ ಸಸ್ಯಗಳು ಇದೆ. ಪ್ರಾಣಿಗಳು ಸಸ್ಯಗಳನ್ನು, ಇತರ ಜೀವಗಳನ್ನು ಸೇವಿಸುತ್ತದೆ. ಗಾಳಿ, ನೀರು, ಭೂಮಿ, ಸಮುದ್ರಗಳಲ್ಲಿರುವ ಜೀವಜಾಲಗಳೆಲ್ಲವೂ ಇತರ ಸಸ್ಯ ಹಾಗೂ ಪ್ರಾಣಿಗಳಿಂದಲೇ ಬದುಕುಳಿಯುತ್ತದೆ. ಇದರಲ್ಲಿ ಪ್ರತಿಯೊಂದು ಜೀವಿಗೂ ಅದರ ಶರೀರಕ್ಕೆ ಅನುಗುಣವಾದ ಜೀವನ ಶೈಲಿಯಿದೆ. ಮೊಲವು ಸಸ್ಯಹಾರಿಯಾದುದರಿಂದ ಅದಕ್ಕೆ ಸೂಕ್ತವಾದ ಹಲ್ಲು ಹಾಗೂ ಹೊಟ್ಟೆಯಿದೆ. ಸಿಂಹವು ಮಾಂಸಹಾರಿಯಾದುದರಿಂದ ಅದು ಸೂಕ್ತವಾದ ದೇಹಪ್ರಕೃತಿಯನ್ನು ಹೊಂದಿದೆ.

ಮನುಷ್ಯರು ಸಸ್ಯಾಹಾರ ಹಾಗೂ ಮಾಂಸಾಹಾರ ಉಪಯೋಗಿಸಲು ಸಾಧ್ಯವಾಗುವ ರೀತಿಯಲ್ಲಿ ಸೃಷ್ಟಿಸಲ್ಪಟ್ಟಿದ್ದಾರೆ. ಕೇವಲ ಸಸ್ಯಾಹಾರಿಗಳಾದ ಆಡು, ದನ, ಕುರಿಗಳ ಹಲ್ಲುಗಳು ಸಸ್ಯ ಸೇವನೆಗೆ ಸೂಕ್ತವಾಗಿದೆ. ಮಾಂಸಾಹಾರಿಗಳ ಹಲ್ಲುಗಳು ಚೂಪಾಗಿ ಹರಿತವಾಗಿರುತ್ತದೆ. ಆದರೆ ಮನುಷ್ಯನಿಗೆ ಎರಡಕ್ಕೂ ಸಾಧ್ಯವಾಗುವ ಹಲ್ಲುಗಳಿವೆ. ಅಗಲವಾದ, ಸಮತಟ್ಟಾದ ಹಲ್ಲುಗಳೊಂದಿಗೆ ಚೂಪಾದ ಹಲ್ಲುಗಳೂ ಇವೆ ಅಥವಾ ಮನುಷ್ಯನನ್ನು ಮಿಶ್ರಾಹಾರಿಯಾಗಿಯೇ ಸೃಷ್ಟಿಸಲಾಗಿದೆ.

ಪಚನೇಂದ್ರಿಯಗಳ ಸ್ಥಿತಿಯೂ ಇದೇ ಆಗಿದೆ. ಸಸ್ಯಾಹಾರಿ ಪ್ರಾಣಿಗಳಿಗೆ ಸಸ್ಯಾಹಾರವನ್ನು ಮಾತ್ರ ಜೀರ್ಣವಾಗುವಂತಹ, ಮಾಂಸಾಹಾರಿ ಪ್ರಾಣಿಗಳಿಗೆ ಅದಕ್ಕನುಗುಣವಾದ ಪಚನೇಂದ್ರಿಯಗಳು, ಮನುಷ್ಯರಿಗೆ ಎರಡನ್ನೂ ಜೀರ್ಣಗೊಳಿಸುವ ರೀತಿಯಲ್ಲಿದೆ. ಹಲ್ಲುಗಳು ಹಾಗೂ ಜೀರ್ಣಾಂಗ ವ್ಯವಸ್ಥೆಯಿಂದಲೇ ಮಾನವ ಮಿಶ್ರಾಹಾರಿಯೆಂದು ಸಂಶಯಾತೀತವಾಗಿ ಸ್ಪಷ್ಟವಾಗುತ್ತದೆ.

ಈ ಭೂಮಿ ಹಾಗೂ ಅವುಗಳಲ್ಲಿರುವುದೆಲ್ಲವನ್ನು ಮಾನವ ಸಮೂಹಕ್ಕಾಗಿ ಸೃಷ್ಟಿಸಲಾಗಿದೆ. ಅಥವಾ ಮಾನವನು ಭೂಮಿಯ ಕೇಂದ್ರಬಿಂದುವಾಗಿದ್ದಾನೆ. ಅಲ್ಲಾಹನು ಹೇಳುತ್ತಾನೆ: **'ಅಲ್ಲಾಹನು ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಸಕಲ ವಸ್ತುಗಳನ್ನು ನಿಮಗೆ ಅಧೀನಗೊಳಿಸಿರುವುದನ್ನೂ ತನ್ನ ಪ್ರತ್ಯಕ್ಷ ಹಾಗೂ ರಹಸ್ಯ ಅನುಗ್ರಹಗಳನ್ನು ನಿಮಗೆ ಪೂರ್ತಿಗೊಳಿಸಿ ಕೊಟ್ಟಿರುವುದನ್ನೂ ನೀವು ನೋಡುತ್ತಿಲ್ಲವೇ?' (ಪವಿತ್ರ ಕುರ್‌ಆನ್ 31:20)**

'ಜಾನವಾರುಗಳಲ್ಲಿ ಸವಾರಿಗಾಗಿ ಮತ್ತು ಹೊರೆ ಹೊರುವುದಕ್ಕಾಗಿ ಉಪಯೋಗವಾಗುವವುಗಳನ್ನು ತಿನ್ನಲು ಮತ್ತು ಹಾಸಲು ಉಪಯೋಗವಾಗುವುಗಳನ್ನು ಉಂಟು ಮಾಡಿದವನು ಅವನೇ, ಅಲ್ಲಾಹನು ನಿಮಗೆ ದಯಪಾಲಿಸಿದ ವಸ್ತುಗಳಿಂದ ತಿನ್ನರಿ ಮತ್ತು ಶೈತಾನನನ್ನು ಅನುಸರಿಸಬೇಡಿರಿ. ನಿಜವಾಗಿಯೂ ಅವನು ನಿಮ್ಮ ಪ್ರತ್ಯಕ್ಷ ಶತ್ರು.' (ಪವಿತ್ರ ಕುರ್‌ಆನ್ 6:142)

'ವಾಸ್ತವದಲ್ಲಿ ಜಾನುವಾರುಗಳಲ್ಲಿಯೂ ನಿಮಗೊಂದು ಪಾಠವಿದೆ. ಅವುಗಳ ಉದರದೊಳಗೆ ಏನಿರುವುದೋ ಅದರಿಂದಲೇ ನಾವು ನಿಮಗೊಂದು ವಸ್ತುವನ್ನು ಕುಡಿಸುತ್ತೇವೆ ಮತ್ತು ನಿಮಗೆ ಅವುಗಳಲ್ಲಿ ಬೇರೆ ಅನೇಕ ಪ್ರಯೋಜನಗಳೂ ಇವೆ. ಅವುಗಳನ್ನು ನೀವು ತಿನ್ನುತ್ತೀರಿ.'
(ಪವಿತ್ರ ಕುರ್‌ಆನ್ 23:21)

'ನಿಮಗಾಗಿ ಸಮುದ್ರಗಳನ್ನು ನಿಯಂತ್ರಿಸಿ ನೀವು ಅದರಿಂದ ತಾಜಾಮಾಂಸ ಪಡೆದು ತಿನ್ನಲಾಗುವಂತೆಯೂ ಅದರಿಂದ ನೀವು ಧರಿಸುವ ಆಭರಣಗಳನ್ನು ಹೊರ ತೆಗೆಯುವಂತೆಯೂ ಮಾಡಿದವನು ಅವನೇ.' (ಪವಿತ್ರ ಕುರ್‌ಆನ್ 16:14)

ಭೂಮಿಯಲ್ಲಿರುವುದೆಲ್ಲವನ್ನೂ ಮನುಷ್ಯನಿಗಾಗಿ ನಿರ್ಮಿಸಲಾಗಿದೆಯೆಂಬ ಮಾತನ್ನು ಅಂಗೀಕರಿಸದವರೂ, ಪ್ರಾಯೋಗಿಕವಾಗಿ ಅದಕ್ಕೆ ಅನುಗುಣವಾದ ನಿಲುವನ್ನೇ ಸ್ವೀಕರಿಸು ತ್ತಾರೆ. ಮನುಷ್ಯನು ತನ್ನ ಹಿತಾಸಕ್ತಿಗಾಗಿ ಭೂಮಿಯನ್ನು ಆಕ್ರಮಿಸುತ್ತಾನೆ. ಅದರಲ್ಲಿ ಬಾವಿಗಳನ್ನು ತೋಡುತ್ತಾನೆ. ರಸ್ತೆಗಳು, ಸೇತುವೆಗಳನ್ನು ನಿರ್ಮಿಸುತ್ತಾನೆ, ಮನೆ ಕಟ್ಟುತ್ತಾನೆ. ಇವೆಲ್ಲವನ್ನು ಮಾಡುವಾಗ ಅಲ್ಲಿರುವ ಪ್ರಾಣಿ, ಪಕ್ಷಿಗಳಿಗೆ ಏನು ಸಂಭವಿಸುತ್ತದೆಯೆಂಬುದನ್ನು ಗಮನಿಸುವುದಿಲ್ಲ. ಎಲ್ಲಾ ಜೀವಿಗಳಿಗೂ ಒಂದೇ ರೀತಿ ಹಕ್ಕುಬಾಧ್ಯತೆಗಳಿರುವ ಭೂಮಿಯಲ್ಲಿ ತಾನು ರಸ್ತೆ ಹಾಗೂ ಬಾವಿಯನ್ನು ಮಾಡುತ್ತಿದ್ದೇನೆಂಬುದನ್ನು ನೆನಪಿಸುವುದಿಲ್ಲ. ಹೀಗೆ ಸಸ್ಯಗಳು, ಫಲ ವೃಕ್ಷಗಳು, ಬೆಳೆಗಳನ್ನೆಲ್ಲವನ್ನೂ ತನ್ನ ಹಿತಾಸಕ್ತಿಯಂತೆ ಉಪಯೋಗಿಸಿಕೊಳ್ಳುತ್ತಾನೆ. ಆದ್ದರಿಂದ ಭೂಮಿ ಹಾಗೂ ಅದರಲ್ಲಿರುವವುಗಳನ್ನೆಲ್ಲಾ ಮಾನವನಿಗಾಗಿ ಸಿದ್ಧಗೊಳಿಸಲಾಗಿದೆಯೆಂಬ ಸತ್ಯವನ್ನು ಪ್ರಾಯೋಗಿಕವಾಗಿ ಒಪ್ಪಿಕೊಳ್ಳದ ಯಾರೂ ಇಲ್ಲ.

ಒಂದು ಜೀವಿಯನ್ನು ಕೊಲ್ಲುವುದಿಲ್ಲವೆಂಬುದು ಅಹಿಂಸೆಯೆನಿಸಿಕೊಂಡರೆ ಅದರಂತೆ ಬದುಕುವವರಾರೂ ಈ ಭೂಮಿಯಲ್ಲಿಲ್ಲ. ಮಾಂಸಾಹಾರ ಸೇವಿಸದವರು ಸಸ್ಯಾಹಾರವನ್ನು ಸೇವಿಸುತ್ತಾರಲ್ಲವೇ? ಸಸ್ಯಗಳಿಗೆ ಜೀವ ಹಾಗೂ ಭಾವನೆಗಳು ಇವೆಯೆಂಬುದು ಸರ್ವವಿದಿತ. ಆದ್ದರಿಂದ ಮಾಂಸಾಹಾರಿಗಳಂತೆ, ಸಸ್ಯಾಹಾರಿಗಳು ಜೀವಹಾನಿಯುಂಟು ಮಾಡುವುದರೊಂದಿಗೆ, ಸಸ್ಯಗಳಿಗೆ ನೋವನ್ನು ಉಂಟುಮಾಡುತ್ತಾರೆ.

ಮನುಷ್ಯನ ದೇಹಕ್ಕೆ ಗಾಯವಾದರೆ ಅದರ ವಿಷಾಣುಗಳನ್ನು ಔಷಧಿ ಹಾಕಿ ಕೊಲ್ಲಲಾಗುತ್ತದೆ. ಹೊಟ್ಟೆಯ ಕ್ರಿಮಿಗಳನ್ನು ನಾಶಪಡಿಸುತ್ತೇವೆ. ಸೊಳ್ಳೆಗಳು ಮೊಟ್ಟೆಯಿಡುವ ಮಲಿನ ಜಲಕ್ಕೆ ವಿಷ ಸಿಂಪಡಿಸಿ ಕೊಲ್ಲಲಾಗುತ್ತದೆ. ಒಟ್ಟಿನಲ್ಲಿ ಯಾವೊಂದು ಜೀವಿಯನ್ನೂ ಕೊಲ್ಲದವರು ಯಾರೂ ಇರಲಾರರು. ಅದು ಸಾಧ್ಯವೂ ಅಲ್ಲ.

ಮಾನವ ಸಮೂಹದ ಸ್ವಸ್ಥತೆಗಾಗಿ ಇವುಗಳನ್ನೆಲ್ಲಾ ಕೊಲ್ಲಬಹುದಾದರೆ ಅತ್ಯಂ ಪೋಷಕಾಂಶ ಆಹಾರವಾದ ಮಾಂಸವನ್ನು ಉಪಯೋಗಿಸಬಹುದು. ಪ್ರೋಟೀನ್, ಕಬ್ಬಿಣಾಂಶ ವಿಟಮಿನ್ ಬಿ-1, ನಿಯಾಸಿನ್... ಮೊದಲಾದವುಗಳು ಮಾಂಸಾಹಾರದಲ್ಲಿ ಧಾರಾಳವಾಗಿದೆ ಸಸ್ಯಗಳು, ಪ್ರಾಣಿಗಳು, ಕ್ರಿಮಿ ಕೀಟಗಳನ್ನು ತಮ್ಮ ಉಳಿಯುವಿಕೆಗಾಗಿ ಕೊಲ್ಲುವವರು ಕೋಟ್ಯಂತರ ಜನರಿಗೆ ಆಹಾರವಾಗುವ ಮಾಂಸವನ್ನು ತಿನ್ನಬಾರದೆಂದು ಹೇಳುವುದು ಖಂಡಿ ಅರ್ಥಶೂನ್ಯವಾಗಿದೆ.

ಅದರಿಂದಾಗಿಯೇ, ಜೀವಜಾಲಗಳೊಂದಿಗೆ ಅತ್ಯಂತ ಕಾರುಣ್ಯದಿಂದ ವರ್ತಿಸಬೇಕೆಂದು ಆದೇಶಿಸುವ ಇಸ್ಲಾಮ್, ಅದರ ಮಾಂಸ ಸೇವನೆಗೆ ಅನುಮತಿ ನೀಡಿತು. ವಿಶ್ವದ ಕೋಟ್ಯಂತ ಜನರು ಅದನ್ನು ಆಹಾರವಾಗಿ ಉಪಯೋಗಿಸುತ್ತಿದ್ದಾರೆ. ಅದನ್ನು ವಿರೋಧಿಸುವುದು ಸಮಾಜದ್ರೋಹವೂ, ಜನವಿರೋಧಿಯೂ ಆಗಿದೆ.

ಮಾಂಸವು ಧರ್ಮಸಮ್ಮತವಾಗಲು ಅವುಗಳನ್ನು ಅಲ್ಲಾಹನ ನಾಮದಿಂದ ಕೊಯ್ಯಬೇಕೆಂದು ಇಸ್ಲಾಮ್ ಆದೇಶಿಸಿದೆ. ದೇವನ ಅನುಗ್ರಹ ಕಾರುಣ್ಯವನ್ನು ಅನುಸರಿಸಿ ಎಲ್ಲಾ ಕರ್ಮಗಳಂತೆಯೇ ಅವನ ಸೃಷ್ಟಿಯಾದ ಪ್ರಾಣಿಯನ್ನು ಅನಿವಾರ್ಯ ಉದ್ದೇಶಗಳಿಗಾಗಿ ಉಪಯೋಗಿಸಬೇಕೆಂದು ಇದು ಕಲಿಸುತ್ತದೆ. ಅದರೊಂದಿಗೆ ಬಲಿಪ್ರಾಣಿಗೆ ಗರಿಷ್ಠ ಸುಖ ನೀಡಿ, ಅದರ ಕಷ್ಟವನ್ನು ಲಘುಗೊಳಿಸಿ ಕೊಡಬೇಕೆಂಬ ಆದೇಶವಿದೆ. ಪ್ರವಾದಿ (ಸ) ಹೇಳಿದರು: 'ಅಲ್ಲಾಹನು ಎಲ್ಲ ವಿಷಯದಲ್ಲಿಯೂ ಒಳಿತನ್ನು ನಿರ್ಣಯಿಸಿದ್ದಾನೆ. ಆದ್ದರಿಂದ ನೀವು ಕೊಯ್ಯುವುದಿದ್ದರೆ (ದಿಬಹ್) ಅದನ್ನು ಉತ್ತಮ ರೀತಿಯಲ್ಲಿ ನಿರ್ವಹಿಸಬೇಕು. ವಧಿಸುವುದಿದ್ದರೂ ಒಳ್ಳೆಯ ರೀತಿಯಲ್ಲಿ ವಧಿಸಬೇಕು. ಚೂರಿಯ ಅಲಗನ್ನು ಚೆನ್ನಾಗಿ ಹರಿತಗೊಳಿಸಿ ಪ್ರಾಣಿಗೆ ಅನುಕೂಲ ಒದಗಿಸಬೇಕು.' (ಮುಸ್ಲಿಮ್) ಒಮ್ಮೆ ಒಬ್ಬರು ಪ್ರವಾದಿಯವರೊಡನೆ ಹೇಳಿದರು: 'ನಾನು ಆಡನ್ನು ಕೊಯ್ಯುವಾಗ ದಯೆ ತೋರಿಸುತ್ತೇನೆ.' ಅದನ್ನು ಕೇಳಿ ಪ್ರವಾದಿಯವರು(ಸ) ಹೀಗೆ ಉತ್ತರಿಸಿದರು. 'ನೀನು ಅದಕ್ಕೆ ಕರುಣೆ ತೋರಿದರೆ, ಅಲ್ಲಾಹನು ನಿನ್ನ ಮೇಲೆ ಕರುಣೆ ತೋರಿಸುತ್ತಾನೆ.' ( ಹಾಕಿಮ್)

ಒಮ್ಮೆ ಒಬ್ಬರು ಕೊಯ್ಯಲಿಕ್ಕಾಗಿ ಆಡಿನ ಕಾಲು ಹಿಡಿದು ಎಳೆದೊಯ್ಯುತ್ತಿರುವುದನ್ನು ಉಮರ್ ಫಾರೂಕ್(ರ) ನೋಡಿದರು, 'ನಿನಗೇನಾಗಿದೆ? ಅದನ್ನು ಉತ್ತಮ ರೀತಿಯಲ್ಲಿ ಸಾಯುವಂತೆ ಮಾಡು' ಎಂದರು.

ಇಸ್ಲಾಮ್ ಧರ್ಮದಂತೆ ಹಿಂದೂ ಧರ್ಮದಲ್ಲೂ ಮಾಂಸಾಹಾರಕ್ಕೆ ಅನುಮತಿಯಿದೆ. ಅದು ಮಾಂಸಾಹಾರವನ್ನು ನಿಷೇಧಿಸುತ್ತದೆಂಬ ಭಾವನೆ ಸರಿಯಲ್ಲ. ಹಲವು ಪುರಾಣಗಳಲ್ಲಿ ಸ್ಪಷ್ಟವಿದೆ. ಶ್ರೀರಾಮನು ವನವಾಸಕ್ಕೆ ಕಳುಹಿಸಲ್ಪಟ್ಟಾಗ, ನನಗೆ ರುಚಿಕರವಾದ ಮಾಂಸಾಹಾರ ವನ್ನು ಉಪೇಕ್ಷಿಸಬೇಕಾಗುತ್ತದೆಂದು ತಾಯಿಯೊಡನೆ ಹೇಳಿರುವುದಾಗಿ ಅಯೋಧ್ಯಕಾಂಡದ 20, 22, 66, 94 ಶ್ಲೋಕಗಳು ತಿಳಿಸುತ್ತದೆ. ಇದರಿಂದ ಶ್ರೀರಾಮನಿಗೆ ಮಾಂಸಹಾರ ಪ್ರಿಯವೆಂದು ವ್ಯಕ್ತವಾಗುತ್ತದೆ.

ಬೃಹದಾರಣ್ಯಕೋಪನಿಷತ್ ಹೇಳುತ್ತದೆ: 'ನನಗೆ ವಿದ್ವಾಂಸನೂ, ಪ್ರಸಿದ್ಧನೂ ಸಭೆಗಳಲ್ಲಿ ಕರ್ಷಕವಾಗಿ ಮಾತನಾಡುವ ಪುತ್ರನೂ ಲಭಿಸಬೇಕು. ಅವನು ವೇದಗ್ರಂಥಗಳನ್ನು ಲಿಯಬೇಕು. ಆರು ವರ್ಷ ಬದುಕಬೇಕು ಎಂದು ಬಯಸುವುದಿದ್ದರೆ ಮಾಂಸದೊಂದಿಗೆ ಹಾರವನ್ನು ಪಾಕಮಾಡಿ ತುಪ್ಪದೊಂದಿಗೆ ಸೇರಿಸಿ ಇಬ್ಬರೂ ತಿನ್ನಬೇಕು. ಅಂತಹ ಪುತ್ರನನ್ನು ಪಟ್ಟಿಸಲು ಅವರು ಶಕ್ತರಾಗಬಹುದು. ಮಾಂಸವು ದನ ಅಥವಾ ಹೋರಿಯದ್ದಾಗಬಹುದು.

## ಎಲಿಕರ್ಮದ ತಿರುಳು

**ಹಾಗಿದ್ದರೂ ಹಜ್ಜ್ ವೇಳೆಯಲ್ಲಿ ಹಾಗೂ ಹಬ್ಬದ ಸಂದರ್ಭಗಳಲ್ಲಿ ನಡೆಸುವ ಪ್ರಾಣಿ ಹತ್ಯೆ ಕರಿಯೇ ಅಸಂಖ್ಯಾತ ಪ್ರಾಣಿಗಳನ್ನು ಕೊಲ್ಲುವುದೇ?**

ಇತಿಹಾಸದ ಅಂಧಕಾರದ ಕರಿನೆರಳಿನಲ್ಲಿ ನಡೆಸಲಾಗುತ್ತಿದ್ದ ನರಬಲಿಯೆಂಬ ಕ್ರೂರಕೃತ್ಯಕ್ಕೆ ತಡೆಹಾಕಿದ ಸಂಭ್ರಮದ ಸ್ಮರಣೆಯೇ ಇಸ್ಲಾಮಿನ ಬಲಿಕರ್ಮ. ಅದರೊಂದಿಗೆ ಅಸಾಮಾನ್ಯ ತ್ಯಾಗದ ಸಂಕೇತ ಮತ್ತು ಸಮರ್ಪಣಾ ಭಾವವನ್ನು ಇದು ಎತ್ತಿ ತೋರಿಸುತ್ತದೆ.

ಪ್ರಾಯ ಮೀರಿದರೂ ಪ್ರವಾದಿ ಇಬ್ರಾಹೀಮ್(ಅ)ರಿಗೆ ಸಂತಾನಭಾಗ್ಯವಿರಲಿಲ್ಲ. ಅತ್ಯಂತ ದುಃಖಿತರಾದ ಅವರು ದೇವನೊಂದಿಗೆ ಸಂತಾನಕ್ಕಾಗಿ ಪ್ರಾರ್ಥಿಸಿದರು. ನಿರಂತರ ಪ್ರಾರ್ಥನೆಯ ಬಳಿಕ ಸೃಷ್ಟಿಕರ್ತನು ಅವರಿಗೆ ಓರ್ವ ಮಗನನ್ನು ದಯಪಾಲಿಸಿದನು. ಇಸ್ಮಾಯೀಲ್ ಎಂಬ ಹೆಸರಿನ ಆ ಪ್ರಿಯಪುತ್ರನೊಂದಿಗೆ ಸಂತೋಷದಿಂದಿರುವಾಗ ಅವನನ್ನು ಬಲಿ ನೀಡಬೇಕೆಂಬ ದೇವಾದೇಶ ಬಂತು. ತಂದೆ ಹಾಗೂ ಪುತ್ರನು ದೇವಾದೇಶಕ್ಕೆ ಸಿದ್ಧರಾದರು. ಬಲಿದಾನದ ಹಂತದಲ್ಲಿರುವಾಗ ಮಗನನ್ನು ಬಲಿ ನೀಡಬೇಕಾಗಿಲ್ಲವೆಂದೂ, ಮೃಗವನ್ನು ಬಲಿ ನೀಡಿದರೆ ಸಾಕೆಂದೂ ದೇವಾಜ್ಞೆ ದೊರೆಯಿತು.

ಲೌಕಿಕ ಜೀವನವು ಮನುಷ್ಯನನ್ನು 'ಏನು ಲಭಿಸುತ್ತದೆ' ಎಂಬ ಕಡೆಗೆ ಪ್ರೇರೇಪಿಸುತ್ತದೆ. ಆದರೆ ಧರ್ಮವು 'ಧರ್ಮ ಏನು ನೀಡಬಹುದು' ಎಂಬ ಪ್ರಶ್ನೆಯನ್ನು ವಿಶ್ವಾಸಿಗಗಳೊಂದಿಗೆ ನಿರಂತರವಾಗಿ ಕೇಳುತ್ತದೆ. ಅದಕ್ಕೆ ಎಂತಹ ತ್ಯಾಗಕ್ಕೂ ಸಿದ್ಧ ಎಂಬ ಉತ್ತರವನ್ನು ನಮ್ಮ ಬದುಕಿನಲ್ಲಿ ನೀಡಲು ಬಲಿಕರ್ಮವು ಪ್ರೇರಕವಾಗಿದೆ.

ತನಗೆ ಅತೀ ಪ್ರಿಯವಾದದ್ದನ್ನು ದೇವಮಾರ್ಗದಲ್ಲಿ ಅರ್ಪಿಸಲು ಸಿದ್ಧವಾದ ಪ್ರವಾದಿ ಇಬ್ರಾಹೀಮರ ತ್ಯಾಗಮಯ ಜೀವನವೇ ನಮ್ಮದೆಂದು ನೆನಪಿಸಲು ಹಜ್ಜ್‌ನ ಮತ್ತು ಹಬ್ಬದ ಸಂದರ್ಭದಲ್ಲಿ ಬಲಿದಾನ ನೀಡಲಾಗುತ್ತದೆ. ತನಗೆ ಅತ್ಯಧಿಕ ಪ್ರೀತಿ ಪಾತ್ರವಾದುದನ್ನು ದೇವ ಮಾರ್ಗದಲ್ಲಿ ಅರ್ಪಿಸಲು ಸಿದ್ಧನೆಂಬುದರ ಪ್ರತಿಜ್ಞೆಯೂ ಹೌದು. ಹಣ, ಸ್ಥಾನಮಾನ, ಗೌರವ, ಪ್ರಶಸ್ತಿ, ಸನ್ಮಾನ, ಹೆಣ್ಣು, ಹೊನ್ನು, ಕುಟುಂಬ ಅಥವಾ ಅಧಿಕಾರಗಳು ಯಾವುದೂ ದೇವಾದೇಶದ ಪಾಲನೆಗೆ ಅಡ್ಡಿಯಾಗದೆಂಬ ಘೋಷಣೆಯನ್ನೂ ಇದು ಒಳಗೊಂಡಿದೆ.

ತನ್ನ ಸರ್ವಸ್ವವೆಂದು ಭಾವಿಸುವವುಗಳ ತ್ಯಾಗವು ಎಲ್ಲರಿಗೂ ಕಷ್ಟಕರ ವಿಚಾರವಾಗಿದೆ. ತಾನು ಅದಕ್ಕೂ ಸಿದ್ಧವೆಂದು ವಿಶ್ವಾಸಿಯು ಬಲಿದಾನದ ಮೂಲಕ ಘೋಷಿಸುತ್ತಾನೆ. ಪ್ರತ್ಯಕ್ಷವಾಗಿ

ನೋಡುವಾಗ ಅದೊಂದು ಜೀವಹರಣವಾಗಿದೆ. ಆದರೆ ಅದರ ಆಂತರಿಕ ಅರ್ಥವು ಅ ಮಹತ್ತರವಾಗಿದೆ. ಸೃಷ್ಟಿಕರ್ತನ ಪ್ರೀತಿಗಳಿಸಲು ಅತ್ಯಂತ ಪ್ರಿಯಕರವಾದುದನ್ನು ಅರ್ಪಿಸಲ ಸನ್ನದ್ಧನೆಂಬ ಪ್ರತಿಜ್ಞೆಯಾಗಿದೆ. ಆದ್ದರಿಂದ ಈ ಕುರಿತು ಪವಿತ್ರ ಕುರ್ಆನ್ ಹೇಳುತ್ತದ **'ಅವುಗಳ ಮಾಂಸವಾಗಲಿ, ರಕ್ತವಾಗಲಿ ಅಲ್ಲಾಹನಿಗೆ ತಲುಪುವುದಿಲ್ಲ, ಆದರೆ ಅವನಿಗೆ ನಿವ 'ಧರ್ಮನಿಷ್ಠೆ' ತಲುಪುತ್ತದೆ.' (22:37)**

ಇಸ್ಲಾಮಿನ ಆರಾಧನೆಗಳು ಹೆಚ್ಚಾಗಿ ಸಮಾಜಕ್ಕೆ ಅದರಲ್ಲೂ ಅಸಹಾಯಕ, ಅನಾಥರಿ ಉಪಕಾರಪ್ರದವಾಗಿರುತ್ತದೆ. ಬಲಿಕರ್ಮವು ಅದೇ ರೀತಿಯಾಗಿದೆ. ಅಲ್ಲಾಹನು ಆಜ್ಞಾಪಿಸು ತ್ತಾನೆ: **'ಆದರಿಂದ ಸ್ವತಃ ತಿನ್ನಲಿ ಮತ್ತು ಬಡಬಗ್ಗರಿಗೂ ಕೊಡಲಿ.' (22:28)**

ಸಂತೋಷದ ಸಂದರ್ಭಗಳಲ್ಲಿ ದೇವನಿಗೆ ಕೃತಜ್ಞತೆಯ ಭಾಗವಾಗಿ ಅವನ ಸೃಷ್ಟಿಗಳಾದ ಮನುಷ್ಯನಿಗೆ, ವಿಶೇಷವಾಗಿ ಬಡವರು, ನಿರ್ಗತಿಕರಿಗೆ ಅನ್ನದಾನವನ್ನು ನೀಡುವುದು ಉತ್ತಮವೆಂದು ಇಸ್ಲಾಮ್ ಸಾರುತ್ತದೆ. ಆಹಾರ ಪದಾರ್ಥಗಳಲ್ಲಿ ಮಾಂಸಾಹಾರದಲ್ಲಿ ಹೆಚ್ಚು ಪೋಷಕಾಂಶವಿರುವುದಿರಂದ ಉದಾರಮತಿಗಳಾದ ವಿಶ್ವಾಸಿಗಳು ಅದನ್ನೇ ಕೊಡಬಯಸುತ್ತಾರೆ. ಮಾಂಸಾಹಾರದ ಅಡುಗೆಗಳಿಲ್ಲದ ಸತ್ಕಾರ ಕೂಟಗಳು ವಿಶ್ವದ ಯಾವುದೇ ಭಾಗದಲ್ಲೂ, ಯಾವುದೇ ಜನವಿಭಾಗದಲ್ಲೂ ಆಗುವುದು ಕಡಿಮೆ ಎಂಬುದು ಎಲ್ಲರಿಗೂ ತಿಳಿದಿರುವ ವಿಚಾರ.

## 37 ಇಸ್ಲಾಮ್ ಮತ್ತು ಭಯೋತ್ಪಾದನೆ

**ವಿಶ್ವದಲ್ಲಿರುವ ಮುಸ್ಲಿಮರು ಭಯೋತ್ಪಾದಕರೂ, ಉಗ್ರಗಾಮಿಗಳು ಆಗಲು ಇಸ್ಲಾಮ್ ಕಾರಣವಲ್ಲವೇ?**

ಇದು ಸ್ವಲ್ಪ ಹೆಚ್ಚು ವಿವರಣೆಯನ್ನು ಬಯಸುವ ಪ್ರಶ್ನೆಯಾಗಿದೆ. ಕ್ರಿ.ಶ. 1492 ಮಾನವ ಇತಿಹಾಸದ ಭಯಾನಕರವಾದ ಮಹಾದುರಂತ ನಡೆದ ವರ್ಷವಾಗಿತ್ತು. ಸುದೀರ್ಘ ಕಾಲದ ತನಕ ವೈಜ್ಞಾನಿಕ-ತಂತ್ರಜ್ಞಾನ, ಕಲೆ, ಸಾಹಿತ್ಯ, ಸಾಂಸ್ಕೃತಿಕ, ನಾಗರಿಕತೆಯ ಎಲ್ಲಾ ರಂಗಗಳಲ್ಲಿಯೂ ವಿಶ್ವದ ನೇತೃತ್ವವನ್ನು ವಹಿಸಿದ್ದ ಮುಸ್ಲಿಮ್ ಸ್ಪೇಯಿನ್‌ನ ಕೊನೆಯ ಆಡಳಿತಗಾರ ಅಬೂ ಅಬ್ದುಲ್ಲಾ ಆಗಿದ್ದರು.

ಗ್ರಾನಡೆ ನಗರವು ಮಾತ್ರ ಆತನ ಅಧೀನದಲ್ಲಿತ್ತು. 1492 ಜನವರಿ ಕೊನೆಯಲ್ಲಿ ಅವರನ್ನು ಪದಚ್ಯುತಿಗೊಳಿಸಿ ಸ್ಪೇಯಿನಿಗರು ಆಧಿಪತ್ಯ ಸ್ಥಾಪಿಸಿದರು. ಸ್ಪೇಯಿನ್‌ನ ಪತನ ಪೂರ್ತಿಯಾದ ಅದೇ ವರ್ಷವೇ ಸಾಮ್ರಾಜ್ಯಶಾಹಿತ್ವದ ವಸಾಹತು ಆರಂಭಗೊಂಡಿತೆಂಬುದು ಗಮನಾರ್ಹ. 1492ರಲ್ಲೇ ಕೊಲಂಬಸ್ ತನ್ನ ದಂಡಯಾತ್ರೆಯನ್ನು ಆರಂಭಿಸಿದ್ದ.

ಅದೇ ವರ್ಷ ಅಕ್ಟೋಬರ್ 12ಕ್ಕೆ ಆತ ಗ್ವಾನಾಹಾನಿ ದ್ವೀಪಕ್ಕೆ ತಲುಪಿದ. ಆಯುಧಗಳೊಂದಿಗೆ ಹಡಗಿನಿಂದ ಇಳಿದ ಕೊಲಂಬಸ್ ಹಾಗೂ ಅನುಚರರು ಅಂದಿನಿಂದ ಈ ನಾಡು ಸ್ಪಾನಿಶ್ ರಾಜನದ್ದೆಂದು ಘೋಷಿಸಿದ. ಅಲ್ಲಿನವರಿಗೆ ಅರ್ಥವಾಗದ ಸ್ಪಾನಿಶ್ ಭಾಷೆಯಲ್ಲಿ ಓದಿ ಕೇಳಿಸಿದ. ಅದನ್ನು ಅನುಸರಿಸದಿದ್ದರೆ ಪರಿಣಾಮವೇನಾದೀತೆಂಬುದನ್ನು ವಿವರಿಸಿದ. ನಾನು ದೃಢವಾಗಿ ಹೇಳುತ್ತಿದ್ದೇನೆ: ದೇವನ ಸಹಾಯದಿಂದ ನಾವು ನಿಮ್ಮ ದೇಶದೊಳಗೆ ಬಲಾತ್ಕಾರವಾಗಿ ಪ್ರವೇಶಿಸುತ್ತೇವೆ. ನಿಮ್ಮೊಂದಿಗೆ ಸಾಧ್ಯವಾದ ರೀತಿಯಲ್ಲಿ ಯುದ್ಧ ಮಾಡುತ್ತೇವೆ. ನಿಮ್ಮನ್ನು ಕ್ರೈಸ್ತ ಚರ್ಚ್‌ಗಳ ಹಾಗೂ ಧರ್ಮಗಳಿಗೆ ಅಧೀನಗೊಳಿಸುತ್ತೇವೆ. ನಿಮ್ಮ ಪತ್ನಿಯರನ್ನೂ ಮಕ್ಕಳನ್ನೆಲ್ಲಾ ಬಂಧಿಸಿ ಗುಲಾಮರನ್ನಾಗಿಸುತ್ತೇವೆ. ನಿಮ್ಮ ಸೊತ್ತುಗಳನ್ನು ವಶಪಡಿಸುತ್ತೇವೆ. ನಮ್ಮಿಂದಾಗುವ ಎಲ್ಲಾ ವಿಧದ ದ್ರೋಹ ಹಾಗೂ ನಾಶಕ್ಕಾಗಿ ಪ್ರಯತ್ನಿಸುತ್ತೇವೆ. (David Estannard, American Holocaust, The Conquest of the New World, oup 1993,p 66) (ಉದ್ಧರಣೆ: ಪಾಶ್ಚಿಶ್ಚೀಕರಣದ 500 ವರ್ಷ, ಐ, ಪಿ, ಎಚ್, ಪುಟ 17)

ಇದರೊಂದಿಗೆ ಯೂರೋಪಿನ ವಶಾಹತುಶಾಹಿತ್ವ ಆರಂಭಗೊಂಡಿತು. ಮುಸ್ಲಿಮ್ ಸ್ಪೇಯಿನ್ ಕುಸಿದು ಬಿದ್ದು ಸರಿಯಾಗಿ 6 ವರ್ಷ ಕಳೆದಾಗ ಅಂದರೆ 1498 ರಲ್ಲಿ ವಾಸ್ಕೋಡಗಾಮ ಕೋಝಿಕ್ಕೋಡ್‌ಗೆ ತಲುಪಿದ.

1492ರಲ್ಲಿ ಅಮೇರಿಕಾದಲ್ಲಿ ಏಳುವರೆ ಕೋಟಿಯಿಂದ ಹತ್ತು ಕೋಟಿಯಷ್ಟು ಆದಿವಾಸಿಗಳಿದ್ದರು. ಯೂರೋಪಿಯನ್ ವಶಾಹತು ಶಾಹಿತ್ವದಿಂದ ಒಂದೂವರೆ ಶತಮಾನದಲ್ಲಿ ತೊಂಬತ್ತು ಶೇಕಡಾ ಆದಿವಾಸಿಗಳು ಸ್ವಂತ ನೆಲದಿಂದ ಹೊಡೆದೋಡಿಸಲ್ಪಟ್ಟರು. ಅತ್ಯಂತ ಹೇಯ ಕ್ರೂರ ಕೃತ್ಯಗಳಿಂದ, ಸಾಮೂಹಿಕ ಹತ್ಯಾಕಾಂಡಗಳಿಂದ ಆ ದೇಶದ ನಿವಾಸಿಗಳನ್ನು ನಿರ್ನಾಮಗೊಳಿಸಿದ ಬಳಿಕ 1776ರ ಸ್ವಾತಂತ್ರ್ಯ ಘೋಷಣೆಯೊಂದಿಗೆ ಯೂರೋಪಿಯನ್ನರು ಅಮೇರಿಕಾವನ್ನು ಅಧೀನಗೊಳಿಸಿದರು. ಹೀಗೆ ಅನ್ಯಾಯ, ಅತಿಕ್ರಮದ ಘೋಷಣೆಗಳಿಂದ ಇಂದಿನ ಅಮೇರಿಕಾ ಸ್ಥಾಪಿತವಾಯಿತು.

1527 ರಲ್ಲಿ ಪೋರ್ಚುಗೀಸರು ಬಹ್ರೈನನ್ನು ವಶಪಡಿಸಿಕೊಂಡರು. ಕೆಲವೇ ಸಮಯಗಳಲ್ಲಿ ಓಮನ್ ಕೂಡಾ ಅವರ ಅಧೀನವಾಯಿತು. ಆದರೂ ಉಸ್ಮಾನಿಗಳು ಆ ದೇಶವನ್ನು ಮರಳಿ ಪಡೆದರು. ನಂತರ 1798-1801 ರ ಕಾಲದಲ್ಲಿ ನೆಪೋಲಿಯನ್‌ನ ಫ್ರೆಂಚ್ ಸೇನೆಯು ಈಜಿಪ್ಟ್‌ನ ಅಲೆಗ್ಸಾಂಡ್ರಿಯಾ, ಅಕ್ಕಾ ನಗರಗಳನ್ನು ಅಧೀನಗೊಳಿಸಿತು.

ನಂತರ ಎರಡು ಶತಮಾನಗಳು ಅರಬ್-ಮುಸ್ಲಿಮ್ ರಾಷ್ಟ್ರಗಳು ಇತರ ಏಷ್ಯ-ಆಫ್ರಿಕಾ ದೇಶಗಳಂತೆ ಪಾಶ್ಚಾತ್ಯ ವ ಸಾಹತು ಶಾಹಿತ್ವದ ಹಿಡಿತಲ್ಲಿದ್ದವು. ಫ್ರಾನ್ಸ್ 1830 ರಲ್ಲಿ ಅಲ್ಜೀರಿಯವನ್ನು 1859ರಲ್ಲಿ ಜಿಬೂಟ್ಟಿಯನ್ನು, 1881ರಲ್ಲಿ ಟುನಿಷ್ಯಾವನ್ನು ಹಾಗೂ 1919ರಲ್ಲಿ ಮೌರಿತಾನಿಯವನ್ನು ವಶಪಡಿಸಿತು. ಇಟಲಿ 1859ರಲ್ಲಿ ಸೋಮಾಲಿಯಾವನ್ನು 1911ರಲ್ಲಿ ಲಿಬಿಯಾವನ್ನು ಹಾಗೂ 1880ರಲ್ಲಿ ಐರಿತ್ರಿಯವನ್ನು ಅಧೀನಗೊಳಿಸಿತು. ಬ್ರಿಟನ್ 1800ರಲ್ಲಿ ಮಸ್ಕತ್, 1820ರಲ್ಲಿ ಒಮನ್‌ನ ಉಳಿದ ಭಾಗ 1839ರಲ್ಲಿ ಏಥೆನ್, 1863ರಲ್ಲಿ ಬಹ್ರೈನ್, 1878ರಲ್ಲಿ ಸೈಪ್ರಸ್, 1882ರಲ್ಲಿ ಈಜಿಪ್ಟ್ 1898ರಲ್ಲಿ ಸುಡಾನ್, 1899ರಲ್ಲಿ ಕುವೈಟ್‌ಗಳನ್ನು ವಶಪಡಿಸಿತು. 1916ರಲ್ಲಿ ಬ್ರಿಟನ್ ಮತ್ತು ಫ್ರಾನ್ಸ್ ಜಂಟಿಯಾಗಿ ಮಾಡಿದ ಸೈಕ್ಸ್-ಪಿ ಕ್ಕೋಟ್ ರಹಸ್ಯ ಕರಾರಿನಂತೆ ಉಸ್ಮಾನಿಯಾ ಖಲೀಫರ ಅಧೀನದಲ್ಲಿದ್ದ ಅರಬ್ ಸಂಸ್ಥಾನಗಳನ್ನು ಬ್ರಿಟನ್ ಮತ್ತು ಫ್ರಾನ್ಸ್ ಹಂಚಿಕೊಂಡವು.

ಹೀಗೆ ಇರಾಕ್, ಜೋರ್ಡಾನ್, ಫೆಲೆಸ್ತೀನ್, ಕತಾರ್‌ಗಳು ಬ್ರಿಟನ್‌ಗೆ ಅಧೀನವಾದರೆ ಸಿರಿಯಾ,ಲೆಬನಾನ್ ಫ್ರಾನ್ಸ್‌ನ ಹಿಡಿತಕ್ಕೊಳಗಾದವು. ಮೊರೊಕ್ಕೊ ಸ್ಪೈನ್‌ನ, ಇಂಡೋನೇಶ್ಯಾ ಡಚ್ಚರ ವಶಾಹತುಗಳಾದವು. ಭಾರತ ಮತ್ತು ಅಫಘಾನಿಸ್ತಾನವು ಸಾಮ್ರಾಜ್ಯಶಾಹಿ ಶಕ್ತಿಗಳಿಗೆ ಅಧೀನವಾದಂತೆ ಈ ಎಲ್ಲಾ ರಾಷ್ಟ್ರಗಳ ಪಾಡೂ ಅದೇ ಆಗಿತ್ತು.

ಕಳೆದ ಶತಮಾನದ ಮೊದಲ ಹಂತ ಕಳೆದೊಡನೆ ಪಶ್ಚಿಮದ ರಾಷ್ಟ್ರಗಳಲ್ಲಿ ಸ್ವಾತಂತ್ರ್ಯ ಹೋರಾಟ ಶಕ್ತವಾಯಿತು. ಅದರ ಫಲವಾಗಿ 1932 ರಲ್ಲಿ ಇರಾಕ್, 1946 ರಲ್ಲಿ ಸಿರಿಯಾ, ಲೆಬನಾನ್, 1951ರಲ್ಲಿ ಲಿಬಿಯಾ, ಒಮನ್ 1952ರಲ್ಲಿ ಈಜಿಪ್ಟ್, 1956ರಲ್ಲಿ ಮೊರಕ್ಕೋ, ಸುಡಾನ್ ಮತ್ತು ಟುನಿಷ್ಯಾ 1958 ರಲ್ಲಿ ಜೋರ್ಡಾನ್ 1959 ರಲ್ಲಿ ಮೌರಿತಾನಿಯ 1960 ರಲ್ಲಿ ಸೋಮಾಲಿಯಾ 1961ರಲ್ಲಿ ಕುವೈತ್ 1962 ರಲ್ಲಿ ಅಲ್ಜೀರಿಯಾ, 1968 ರಲ್ಲಿ ಯಮನ್

1971ರಲ್ಲಿ ಕತರ್, ಬಹ್ರೈನ್, ಅರಬ್ ಎಮಿರೇಟ್ಸ್ ಹಾಗೂ 1972 ರಲ್ಲಿ ಜಿಬೂಟಿ ಮುಂತಾದ ರಾಷ್ಟ್ರಗಳು ಸ್ವಾತಂತ್ರ್ಯ ಪಡೆದುವು.

ಆದರೆ ಆ ಸಾಮ್ರಾಜ್ಯಶಾಹಿ ಶಕ್ತಿಗಳು ತಮ್ಮ ಹಿತವನ್ನು ಸಂರಕ್ಷಿಸುವ ಸರ್ವಾಧಿಕಾರಿಗಳು, ಸ್ವೇಚ್ಛಾಧಿಪತಿಗಳಾದ ರಾಜಕುಮಾರರನ್ನು, ಚಕ್ರವರ್ತಿಗಳನ್ನು, ಸುಲ್ತಾನರನ್ನು ಅಧಿಕಾರ ಸ್ಥಾನದಲ್ಲಿ ಕುಳ್ಳಿರಿಸಿದ ಬಳಿಕವೇ ಆ ರಾಷ್ಟ್ರಗಳಿಂದ ವಿದಾಯ ಹೇಳಿದರು. ಮಾತ್ರವಲ್ಲ ಈ ರಾಷ್ಟ್ರಗಳ ನಡುವೆ ಪರಿಹಾರ ಅಸಾಧ್ಯವಾದಂತಹ ಗಡಿ ವಿವಾದಗಳನ್ನು ಹುಟ್ಟುಹಾಕಿದರು. ಯಮನ್ - ಸೌದಿಅರೇಬಿಯಾ, ಇರಾನ್-ಇರಾಕ್, ಇರಾಕ್-ಕುವೈತ್ ಮತ್ತು ಇರಾನ್-ಯು.ಎ.ಇ ಗಳ ನಡುವೆ ಇಂದಿಗೂ ಪರಿಹಾರ ಕಾಣದೆ ಉಳಿದಿರುವ ಸಮಸ್ಯೆಗಳಿಗೆ ಸಾಮ್ರಾಜ್ಯಶಾಹಿ ಶಕ್ತಿಗಳ ಕುತಂತ್ರವೇ ಕಾರಣ. ಅರಬ್ ಮತ್ತು ಮುಸ್ಲಿಮ್ ರಾಷ್ಟ್ರಗಳು ಒಂದಾಗಲು ಈ ಗಡಿವಿವಾದಗಳು ನಿರಂತರ ತಡೆಯೊಡ್ಡುವುದಲ್ಲದೆ ಸಂಘರ್ಷಗಳಿಗೂ ಕಾರಣವಾಗುತ್ತಿದೆ. ಅಮೇರಿಕ ಹಾಗೂ ಇತರ ಬಂಡವಾಳಶಾಹಿ ರಾಷ್ಟ್ರಗಳಿಗೆ ಅಲ್ಲಿನ ಪೆಟ್ರೋಲ್, ಅನಿಲ ಹಾಗೂ ಇತರ ಕಚ್ಚಾ ಪದಾರ್ಥಗಳನ್ನು ಅಪಹರಿಸಲು ಹಾಗೂ ಆ ದೇಶಗಳನ್ನು ತಮ್ಮ ಶಸ್ತ್ರಾಸ್ತ್ರ ಮಾರುಕಟ್ಟೆಯಾಗಿ ಬದಲಾಯಿಸಲು ಅವಕಾಶ ಮಾಡಿಕೊಡುತ್ತಿದೆ.

ಸಾಮ್ರಾಜ್ಯಶಾಹಿ ಶಕ್ತಿಗಳೇ ಹುಟ್ಟುಹಾಕಿದ ವಿವಾದವು ಇರಾಕ್ ಮತ್ತು ಕುವೈತ್‌ನ ನಡುವೆ ಸಂಘರ್ಷಕ್ಕೆ ಕಾರಣವಾಯಿತು. ಇದು ಅಮೇರಿಕಾಕ್ಕೆ ಆ ಭಾಗಗಳಲ್ಲಿ ತನ್ನ ಪಾರಮ್ಯ ಮೆರೆಯಲು ಅವಕಾಶ ನೀಡಿತು. ಅಮೇರಿಕಾದ ನೈಜ ಉದ್ದೇಶವು ಅದೇ ಆಗಿತ್ತು. ಅರಬ್-ಮುಸ್ಲಿಮ್ ರಾಷ್ಟ್ರಗಳು ಸ್ವತಂತ್ರ್ಯಗೊಂಡ ಬಳಿಕವೂ ಅಲ್ಲೆಲ್ಲಾ ಅದೃಶ್ಯ ಸಾಮ್ರಾಜ್ಯಶಾಹಿತ್ವ, ವಂಚನೆ ಹಾಗೂ ನಿಯಂತ್ರಣವು ಇಂದಿಗೂ ಪ್ರಬಲವಾಗಿದೆ. ಆ ದೇಶಗಳಿಗೆ ತಮ್ಮ ಉತ್ಪನ್ನಗಳನ್ನು, ಪ್ರಕೃತಿಯ ಕೊಡುಗೆಗಳನ್ನು ತಮ್ಮಿಚ್ಛೆಯಂತೆ ವಿನಿಯೋಗಿಸಲು, ನಿಯಂತ್ರಿಸಲು ಸಾಧ್ಯವಾಗಿಲ್ಲ. ಅಲ್ಲಿನ ಆಡಳಿತಗಾರರು ತಿಳಿದೋ ತಿಳಿಯದೆಯೋ, ನಿರ್ಬಂದಿತರಾಗಿಯೋ, ಅಲ್ಲದೆಯೋ ಪಾಶ್ಚಾತ್ಯ ರಾಷ್ಟ್ರಗಳ ಹಿತಾಸಕ್ತಿಗಳನ್ನು ಕಾಪಾಡುತ್ತಿದ್ದಾರೆ.

ಇರಾಕ್‌ನಲ್ಲಿ ಹಸ್ತಕ್ಷೇಪ ನಡೆಸಲು ಅವಕಾಶ ದೊರೆತೊಡನೆ ಅಮೇರಿಕಾವು ಅರಬ್ ರಾಷ್ಟ್ರಗಳ ಮೇಲಿನ ತನ್ನ ಹಿಡಿತವನ್ನು ಬಿಗಿಗೊಳಿಸಿ, ತನ್ನ ಸೈನಿಕರನ್ನು ಪೋಷಿಸುವ ಹೊಣೆಯನ್ನು, ಆರ್ಥಿಕ ಮುಗ್ಗಟ್ಟನ್ನು ಪರಿಹರಿಸುವ ಜವಾಬ್ದಾರಿಯನ್ನು ಆ ದೇಶಗಳ ತಲೆಗೆ ಕಟ್ಟಿಹಾಕಿತು. ಇಂದು ಪ್ರಮುಖ ಅರಬ್ ರಾಷ್ಟ್ರಗಳಲ್ಲೆಲ್ಲಾ ಅಮೇರಿಕಾಕ್ಕೆ ಶಸ್ತ್ರಾಸ್ತ್ರ ಕೇಂದ್ರಗಳೂ, ಸೈನಿಕ ಕೇಂದ್ರಗಳೂ ಇವೆ. ಅದನ್ನು ತೆರವುಗೊಳಿಸುವಂತೆ ಹೇಳುವುದನ್ನೂ, ಸಾಮ್ರಾಜ್ಯಶಾಹಿಯ ಮೋಸದಾಟವನ್ನು ಕೊನೆಗೊಳಿಸಬೇಕೆಂದು ವಾದಿಸುವುದನ್ನು ಪಾಶ್ಚಾತ್ಯ ಶಕ್ತಿಗಳು ಮಹಾ ಅಪರಾಧವೆಂಬಂತೆ ಬಿಂಬಿಸುತ್ತಿದೆ.

ಕಳೆದ ಶತಮಾನದ ಕೊನೆಯ ದಶಕಗಳ ವರೆಗೂ ಜಾಗತಿಕ ರಾಷ್ಟ್ರಗಳ ಶಕ್ತಿಯಲ್ಲಿ ಸಂತುಲಿತತೆ ಇತ್ತು. ಆದರೆ ಸೋಶಲಿಸ್ಟ್ ರಷ್ಯಾ ಪತನಗೊಂಡ ಇತಿಹಾಸ ಪುಟವನ್ನು

ಸೇರುವುದರೊಂದಿಗೆ ಶೀತಲಸಮರವು ಕೊನೆಗೊಂಡಿತು. ಲೋಕವು ಅಮೇರಿಕಾದ ನೇತೃತ್ವದಲ್ಲಿ ಏಕಧ್ರುವೀಕರಣಗೊಂಡಿತು. ಗಲ್ಫ್ ಯುದ್ಧದಲ್ಲಿ ಅಮೇರಿಕಾ ವಿಜಯ ಹೊಂದುವುದರೊಂದಿಗೆ ಆ ದೇಶವು ವಿಶ್ವಪೊಲೀಸನಂತೆ ವರ್ತಿಸಲಾರಂಭಿಸಿತು. ತನ್ನ ಹಿತಾಸಕ್ತಿಗೆ ವಿರೋಧ ವ್ಯಕ್ತಪಡಿಸುವವರನ್ನು ಉಗ್ರವಾದಿಗಳು, ಹಾಗು ಭಯೋತ್ಪಾದಕರೆಂಬ ಮುದ್ರೆಯೊತ್ತಿ ಅವರನ್ನೆಲ್ಲಾ ಸರ್ವನಾಶ ಮಾಡಲು ಹೊರಟಿತು.

ಪಾಶ್ಚಾತ್ಯ ಮೈತ್ರಿಯ ಕಮ್ಯೂನಿಸ್ಟ್ ಪತನದ ಬಳಿಕ ಇಸ್ಲಾಮನ್ನು ತನ್ನ ಮುಖ್ಯ ಶತ್ರುವಾಗಿ ಪರಿಗಣಿಸಿತು. ಅಮೇರಿಕಾ ಹಾಗೂ ಅದರ ನಾಯಕತ್ವದಲ್ಲಿರುವ ನ್ಯಾಟೋ ಈ ವಿಷಯವನ್ನು ಸಂಶಯಾತೀತವಾಗಿ ಸ್ಪಷ್ಟಪಡಿಸಿದೆ. ಆದ್ದರಿಂದ ವಿಶ್ವದಲ್ಲಿರುವ ಇಸ್ಲಾಮೀ ನವೋತ್ಥಾನವನ್ನು ಇಸ್ಲಾಮಿನ ಏಳಿಗೆಯನ್ನು ಚಿವುಟಲು ಅಮೇರಿಕಾ ಮತ್ತದರ ಬೆಂಬಲಿಗರು ಗರಿಷ್ಠ ಶ್ರಮಿಸುತ್ತಿದ್ದಾರೆ. ಅದಕ್ಕಾಗಿ ಆಡನ್ನು ನಾಯಿಯನ್ನಾಗಿ ಮಾಡುವ ರೀತಿಯ ಪ್ರಚಾರ ನಡೆಸಲಾಗುತ್ತದೆ. ಮುಸ್ಲಿಮರಿಗೆ ಭಯೋತ್ಪಾದರು, ಉಗ್ರಗಾಮಿಗಳು, ಮತಾಂಧರು ಮುಂತಾದ ಪದಪ್ರಯೋಗ ಮಾಡಲಾಗುತ್ತದೆ. 1993ರಲ್ಲಿ ಅಮೇರಿಕಾ ಕಾಂಗ್ರೆಸ್ ಅಂಗೀಕರಿಸಿ, ಪ್ರಕಟಿಸಿದ ಕೇವಲ 93 ಪುಟಗಳ 'ಹೊಸ ಲೋಕದ ಇಸ್ಲಾಮಿಸ್ಟ್‌ಗಳು' ಎಂಬ ಆದಿಕೃತ ದಾಖಲೆಯಲ್ಲಿ 288 ಬಾರಿ ಭಯೋತ್ಪಾದಕರು, ಭಯೋತ್ಪಾದನೆ ಎಂಬ ಪದವನ್ನು ಪುನರಾವರ್ತಿಸಲಾಗಿದೆ. ಝಿಯೊನಿಸ್ಟರೊಂದಿಗೆ ಸಹಮತವಿರುವ ಫಾನ್ ಪೋರೆಯ್‌ಸ್ಟ್, ಯೋಸಫ್ ಸೋದಾನ್‌ಸ್ಕಿ ಎಂಬವರು ಇದನ್ನು ತಯಾರಿಸಿದ್ದಾರೆ.

ವಿಶ್ವದಲ್ಲಿ ಸಾಮೂಹಿಕ ಹತ್ಯಕಾಂಡಗಳನ್ನೂ, ಭಯೋತ್ಪಾದನಾ ಕೃತ್ಯಗಳನ್ನೂ, ಯುದ್ಧಗಳನ್ನೂ ನಡೆಸುವ ನೈಜ ಅಪರಾಧಿಗಳು ಯಾರು ? ಒಂದನೇ ಮಹಾಯುದ್ಧದಲ್ಲಿ 80 ಲಕ್ಷ, ಎರಡನೇ ಮಹಾಯುದ್ಧದಲ್ಲಿ ಐದು ಕೋಟಿ ಮತ್ತು ವಿಯಟ್ನಾಂನಲ್ಲಿ 30 ಲಕ್ಷ ಜನರು ಕೊಲ್ಲಲ್ಪಟ್ಟರು. ಪನಾಮ, ಗೋಟ್ಟಿಮಲ, ನಿಕಾರಗುವ ಕಂಬೋಡಿಯಾ, ಕೊರಿಯ, ದಕ್ಷಿಣ ಆಫ್ರಿಕಾಗಳಲ್ಲಿ ಲಕ್ಷಾಂತರ ಜನರ ಮಾರಣಹೋಮ ನಡೆಯಿತು. ಇವುಗಳಲ್ಲಿ ಇಸ್ಲಾಮಿಗೋ, ಮುಸ್ಲಿಮರಿಗೋ ಯಾವುದೇ ಪಾತ್ರವಿಲ್ಲ.

ಜಪಾನ್ ದೇಶವು ಯುದ್ಧದಿಂದ ಹಿಂದೆ ಸರಿಯಲು ಸನ್ನದ್ಧವಾದರೂ ಹಿರೋಶಿಮಾ ನಾಗಾಸಾಕಿಯಲ್ಲಿ ಅಣುಬಾಂಬ್ ಸುರಿಸಿದ ಭಯೋತ್ಪಾದಕ ರಾಷ್ಟ್ರವಾದ ಅಮೇರಿಕಾವೇ ಆ ಹೆಸರಿಗೆ ಅರ್ಹವಾಗಿದೆ. ತಮ್ಮ ಕುತಂತ್ರಗಳಿಗೆ, ಹಿತಾಸಕ್ತಿಗೆ ವಿರೋಧ ಸೂಚಿಸುವ ದೇಶಗಳನ್ನು ವಿರೋಧಿಸುತ್ತದೆ. ತನ್ನ ದಾರಿಗೆ ಬರದ ರಾಷ್ಟ್ರಗಳಲ್ಲೆಲ್ಲಾ ಭಯೋತ್ಪಾದಕ ಕೃತ್ಯವನ್ನು ನಡೆಸುತ್ತದೆ. ಗುಪ್ತಚರ ಸಂಘಟನೆಯಾದ ಸಿ.ಐ.ಎ ಯನ್ನೂ ಭಯೋತ್ಪಾದನಾ ಕೃತ್ಯದಲ್ಲಿ ಮುಂಚೂಣಿಯಲ್ಲಿರುವ ಝಿಯೋನಿಷ್ಟ್‌ಗಳನ್ನೂ ಅದಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. ಆಂತರಿಕ ಸಮಸ್ಯೆಗಳಿಂದ ಜಾರಿಕೊಳ್ಳಲೂ ಕೂಡ ವಿಶ್ವದಲ್ಲಿ ಯುದ್ಧಗಳು ಉಂಟಾಗುತ್ತದೆ. ಅಮೇರಿಕನ್ ರಾಜಕೀಯ ವಲಯಗಳಲ್ಲಿ ಸುದ್ಧಿಯಲ್ಲಿರುವ ಮಿಸ್ಟರ್ ರೋಸ್ಪೆರೋ ಹೇಳುತ್ತಾರೆ:

'ಆಂತರಿಕ ಪರಿಸ್ಥಿತಿಯು ಪ್ರತಿಕೂಲವಾಗುವಾಗ ಜನರ ಗಮನವನ್ನು ಬೇರೆಡೆಗೆ ತಿರುಗಿಸಲು ನಾವು ವಿಶ್ವದಲ್ಲಿ ಸಣ್ಣ ಪುಟ್ಟ ಯುದ್ಧಗಳನ್ನು ಆಯೋಜಿಸುತ್ತೇವೆ.'

ಹೀಗೆ ಕಳೆದ ಒಂದು ಶತಮಾನದೊಳಗೆ ಅಮೇರಿಕಾ ವಿಶ್ವದ ಐವತ್ತಕ್ಕಿಂತಲೂ ಹೆಚ್ಚು ರಾಷ್ಟ್ರಗಳಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಮೂಗುತೋರಿಸಿ ಸಂಘರ್ಷವನ್ನುಂಟು ಮಾಡಿ, ಹಲವಾರು ಸಾಮೂಹಿಕ ಹತ್ಯಾಕಾಂಡಗಳಿಗೆ ಕಾರಣವಾಗಿದೆ. ಇಂತಹ ಭಯೋತ್ಪಾದಕ ರಾಷ್ಟ್ರವು ಮಾಡುವ ಪ್ರಚಾರವೇ ಇಸ್ಲಾಮ್ ಮತ್ತು ಮುಸ್ಲಿಮ್‌ರ ಮೇಲಿನ ತಪ್ಪುಭಾವನೆಗಳು ಹೆಚ್ಚಲು ಕಾರಣವಾಗಿದೆ. ಎಲ್ಲಾ ವಿಧದ ಪ್ರಚಾರ ಮಾಧ್ಯಮಗಳನ್ನು ಹಿಡಿತದಲ್ಲಿರಿಸಿರುವ ಅಮೇರಿಕಾ ಮುಸ್ಲಿಮರನ್ನು ಭಯೋತ್ಪಾದಕರೆಂದು ಚಿತ್ರಿಸಲು ಸ್ವಲ್ಪಮಟ್ಟಿಗೆ ಯಶಸ್ವಿಯಾಗಿದೆ.

ವಾಸ್ತವದಲ್ಲಿ ಇಂದು ವಿಶ್ವದಲ್ಲಿ ಅತ್ಯಂತ ಭೀಕರ ಕೃತ್ಯವನ್ನು, ಶಾಂತಿಯ ರಕ್ಷಕನೆಂದು ತಿಳಿಯಲಾಗಿರುವ ವಿಶ್ವಸಂಸ್ಥೆಯ ಸೆಕ್ಯೂರಿಟಿ ಕೌನ್ಸಿಲ್ ನಡೆಸುತ್ತಿದೆ. ಸಾಮಾನ್ಯವಾಗಿ ನಾವು ಒಂದು ದೇಶದ ಆಡಳಿತಗಾರನ ಮೇಲಿನ ದ್ವೇಷದಿಂದ ಆ ದೇಶದ ವಿಮಾನವನ್ನು ಅಪಹರಿಸಿ ಅದರಲ್ಲಿರುವ ಮುನ್ನೂರೋ, ಐನೂರೋ ಯಾತ್ರಿಕರನ್ನು ಒತ್ತೆಯಿರಿಸಿದರೆ ನಾವು ಅವರನ್ನು ಉಗ್ರಗಾಮಿಗಳೆಂದೂ, ಭಯೋತ್ಪಾದಕರೆಂದೂ ಕರೆಯುತ್ತೇವೆ. ಖಂಡಿತವಾಗಿಯೂ ಅಪಹರಣ ಕಾರರಿಗೆ ಅದೇ ಸೂಕ್ತ ಹೆಸರು. ನಿರಪರಾಧಿಗಳಾದ ಪ್ರಯಾಣಿಕರನ್ನು ಮಾನಸಿಕ ಮತ್ತು ದೈಹಿಕ ಹಿಂಸೆಗೊಳಪಡಿಸುವುದು ಕ್ರೂರ ಹಾಗೂ ಅಮಾನವೀಯ ಕೃತ್ಯವಾಗಿದೆ. ಆದ್ದರಿಂದಲೇ ಅದು ಧರ್ಮವಿರೋಧಿಯೂ ಹೌದು. ಆದರೆ ಸದ್ದಾಂ ಹುಸೈನ್ ಎಂಬ ಆಡಳಿತಗಾರನ ಮೇಲಿನ ದ್ವೇಷದಿಂದ ಇರಾಕ್‌ನ ಸುಮಾರು ಒಂದೂಕಾಲು ಕೋಟಿ ಮನುಷ್ಯರನ್ನು ಹನ್ನೊಂದು ವರ್ಷದಿಂದ ಆಹಾರ, ಔಷಧಿ ನೀಡದೆ ಬಂದಿಗಳನ್ನಾಗಿಸಿ ಆರುಲಕ್ಷ ಮಕ್ಕಳೂ ಸೇರಿದಂತೆ ಹನ್ನೊಂದು ಲಕ್ಷ ಜನರನ್ನು ವಿಶ್ವಸಂಸ್ಥೆಯು ಕೊಂದು ಮುಗಿಸಿತು. ಹೀಗೆ ವಿಶ್ವದ ಅತ್ಯಂತ ಕ್ರೂರ ಕೊಲೆಗಡುಕನಾಗಿ ಬದಲಾದ ಭದ್ರತಾ ಸಂಸ್ಥೆಯು ಈಗಲೂ ಶಾಂತಿಯ ಕಾವಲುಗಾರನೆಂದೇ ಬಿಂಬಿಸಲ್ಪಟ್ಟಿದೆ. ಅಮೇರಿಕಾದ ಹೊರತು ಬೇರಾವ ಮಾನದಂಡವೂ ಇಂದು ಲೋಕಕ್ಕಿಲ್ಲದಿರುವುದೇ ಇದಕ್ಕೆ ಕಾರಣ.

ಮುಸ್ಲಿಮರಲ್ಲಿ ಉಗ್ರಗಾಮಿಗಳು ಯಾ ಭಯೋತ್ಪಾದಕರು ಇಲ್ಲವೇ ಇಲ್ಲವೆಂದು ಹೇಳಲು ಸಾಧ್ಯವಿಲ್ಲ, ಇಸ್ಲಾಮಿನ ಹೆಸರಿಗೆ ಕಳಂಕ ತರುವ, ಗೌರವವನ್ನು ಕೆಡಿಸುವ ಅಪಾಯಕಾರಿಯೂ, ವಿವೇಕರಹಿತವೂ ಆದ ಕೃತ್ಯಗಳನ್ನೆಸಗುವವರನ್ನು, ಕೆಲವೊಮ್ಮೆ ಕಾಣಬಹುದು ಮುಸ್ಲಿಮ್ ರಾಷ್ಟ್ರಗಳಲ್ಲಿ ಭಯೋತ್ಪಾದಕ ಚಿಂತನೆಗಳು ಮೂಡಿಬರಲು ಕಾರಣ, ಅಲ್ಲಿನ ಸರ್ವಾಧಿಕಾರಿ-ಸ್ವೇಚ್ಛಾಧಿಪತಿ ಸರಕಾರಗಳು ಹಾಗೂ ಅವುಗಳೆಸುಗುವ ಮಹಾ ಕೆಡು ಕುಗಳಾಗಿವೆ. ಪ್ರಜಾಪ್ರಭುತ್ವ ರೀತಿಯಲ್ಲಿ ಶಾಂತಿಯುತ ಮಾರ್ಗಗಳಿಂದ ಜನರ ಅಭಿಲಾಷೆಯನ್ನು ಪ್ರತಿನಿಧಿಸುವ ಸರಕಾರವನ್ನು ಸ್ಥಾಪಿಸಲು ಹಾಗೂ ಆಡಳಿತ ವ್ಯವಸ್ಥೆಯ ಬದಲಾವಣೆಯ ಪ್ರಯತ್ನವನ್ನು ಸಾಮ್ರಾಜ್ಯಶಾಹಿ ಶಕ್ತಿಗಳು ಮಧ್ಯಪ್ರವೇಶಿಸಿ ಬುಡಮೇಲುಗೊಳಿಸಿ ಬಿಡುತ್ತದೆ.

ಇದರಿಂದ ನಿರಾಶೆ ಹೊಂದಿದ ಹಲವು ಯುವಕರು ಉಗ್ರವಾದಿ ಸಿದ್ಧಾಂತವನ್ನು ನೆಚ್ಚಿಕೊಂಡರು. ಮುಸ್ಲಿಮ್ ಅಲ್ಪಸಂಖ್ಯಾತರಾಗಿರುವ ಪ್ರದೇಶಗಳಲ್ಲಿ ಬಹುಸಂಖ್ಯಾತರೊಂದಿಗೆ ಆಡಳಿತಪಕ್ಷಗಳು ಸೇರಿ ಮಾಡುವಂತಹ ಭೀಕರ ಕೃತ್ಯಗಳು, ಕೆಲವು ಯುವಕರನ್ನು ಪ್ರತೀಕಾರವೆಸಗಲು ಪ್ರೇರೇಪಿಸುತ್ತದೆ. ಇದು ಅಪರೂಪದ ಕೆಲವು ಘಟನೆಗಳು ಮಾತ್ರ. ಅವುಗಳನ್ನು ವೈಭವೀಕರಿಸಿ, ಇಸ್ಲಾಮನ್ನು ಭಯೋತ್ಪಾದನೆಯೊಂದಿಗೆ ಜೋಡಿಸಲಾಗುತ್ತಿದೆ.

ಇಸ್ಲಾಮ್ ಎಲ್ಲಾ ರೀತಿಯ ಭಯೋತ್ಪಾದನೆಯನ್ನು ವಿರೋಧಿಸುತ್ತದೆ. ಅದು ವ್ಯಕ್ತಿಗಳದ್ದಾಗಿರಬಹುದು, ಸಂಘಟನೆಗಳ, ಸರಕಾರಗಳ, ವಿಶ್ವಸಂಸ್ಥೆಯದ್ದೇ ಆಗಿರಬಹುದು. ಎಲ್ಲಾ ರೀತಿಯ ಉಗ್ರವಾದವನ್ನು ಅದು ಪ್ರಬಲವಾಗಿ ಖಂಡಿಸುತ್ತದೆ. ನಿರಪರಾಧಿಗಳ ಪ್ರಾಣ, ಆಸ್ತಿ ಪಾಸ್ತಿಗಳ ನಾಶಕ್ಕೆ ಕಾರಣವಾಗುವ ಭಯೋತ್ಪಾದಕ ಕೃತ್ಯವು ಧರ್ಮವಿರೋಧಿಯಾಗಿದೆ. **'ಒಬ್ಬ ಮಾನವನ ಕೊಲೆಯ ಬದಲಿಗೆ ಅಥವಾ ಭೂಮಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾರಣಕ್ಕಾಗಿ ಹೊರತು ಯಾರಾದರು ಒಬ್ಬ ಮನುಷ್ಯನನ್ನು ವಧಿಸಿದರೆ ಅವನು ಸಕಲ ಮಾನವ ಕೋಟಿಯನ್ನೇ ವಧಿಸಿದಂತೆ ಮತ್ತು ಒಬ್ಬನು ಇನ್ನೊಬ್ಬನಿಗೆ ಜೀವದಾನ ಮಾಡಿದರೆ ಅವನು ಸಕಲ ಮಾನವ ಕೋಟಿಗೆ ಜೀವದಾನ ಮಾಡಿದಂತೆ' ಎಂದು ಪವಿತ್ರ ಕುರ್‌ಆನ್ ಸ್ಪಷ್ಟಪಡಿಸಿದೆ. (5:32)**

ಆದ್ದರಿಂದ ನೈಜ ವಿಶ್ವಾಸಿಗಳಿಗೆ ಖಂಡಿತವಾಗಿಯೂ ಭಯೋತ್ಪಾದಕರಾಗಲು ಅಥವಾ ಉಗ್ರಗಾಮಿಗಳಾಗಲು ಸಾಧ್ಯವಿಲ್ಲ. ಅದರೊಂದಿಗೆ ವಿಶ್ವದಲ್ಲೆಡೆ ಮುಸ್ಲಿಮರು ಭಯೋತ್ಪಾದಕರೆಂಬ ಅಮೇರಿಕಾ ಹಾಗೂ ಅದರ ಹಿಂಬಾಲಕ ರಾಷ್ಟ್ರಗಳ ಮತ್ತು ಅವುಗಳ ಮೆಗಾಫೋನ್‌ಗಳಾಗಲು ವಿಧಿಸಲ್ಪಟ್ಟಿರುವ ಪೌರ್ವಾತ್ಯ ರಾಷ್ಟ್ರಗಳ ಪ್ರಚಾರ ಮಾತ್ರವೆಂಬ ವಾಸ್ತವವನ್ನು ಖಂಡಿತವಾಗಿಯೂ ಮರೆಯಬಾರದು. (ವಿವರಣೆಗಾಗಿ ಭಯೋತ್ಪಾದನೆ ಮತ್ತು ಇಸ್ಲಾಮ್, ಯುದ್ಧದ ಕುರಿತು ಕುರ್‌ಆನಿನ ನಿಲುವು ಎಂಬ ಕೃತಿಗಳನ್ನು ನೋಡಿರಿ).

## 38 ಇಸ್ಲಾಮ್ ಸ್ವೀಕಾರಾರ್ಹವಾಗದಿರಲು ಕಾರಣವೇನು?

ಇಸ್ಲಾಮ್ ಧರ್ಮವು ಅತ್ಯುತ್ತಮ ಹಾಗೂ ಫಲಪ್ರದವೆಂದಾದರೆ ವಿಶ್ವದಲ್ಲಿ ನೂರು ಕೋಟಿ ಮುಸ್ಲಿಮರೂ, ಐವತ್ತಕ್ಕಿಂತ ಹೆಚ್ಚು ಮುಸ್ಲಿಮ್ ರಾಷ್ಟ್ರಗಳಿದ್ದೂ ಅದೇಕೆ ಫಲಪ್ರದವಾಗುತ್ತಿಲ್ಲ? ಅದರ ಸತ್ಫಲಗಳು ಗೋಚರಿಸದಿರಲು ಕಾರಣವೇನು.?

ಇಸ್ಲಾಮ್ ವೈಯಕ್ತಿಕ, ಸಾಮಾಜಿಕ, ರಾಜಕೀಯ ಯಶಸ್ಸಿನೊಂದಿಗೆ ಮರಣಾನಂತರದ ವಿಜಯವನ್ನು ಖಾತ್ರಿಗೊಳಿಸುವ ಜೀವನ ವ್ಯವಸ್ಥೆಯಾಗಿದೆ. ಅದು ವ್ಯಕ್ತಿಜೀವನದ ತೀವ್ರ ಶಾಖಕ್ಕೆ ನೆರಳು ನೀಡುವ ಕೊಡೆಯಾಗಿ, ಕಗ್ಗತ್ತಲೆಯಲ್ಲಿ ಬೆಳಕನ್ನು ನೀಡುವ ನಂದಾದೀಪವಾಗಿ, ವಿಜಯದ ಸಂದರ್ಭದಲ್ಲಿ ನಿಯಂತ್ರಿಸುವ ಕಡಿವಾಣವಾಗಿ, ದುಃಖದ ಸಂದರ್ಭದಲ್ಲಿ ಸಾಂತ್ವನದ ಸಂದೇಶವಾಗಿ, ನೋವಿನಲ್ಲಿ ಸ್ನೇಹಸ್ಪರ್ಶವಾಗಿ, ತಪ್ಪುಹಾದಿಯಿಂದ ತಡೆಯುವ ಗುರಾಣಿಯಾಗಿ ಸಹಕರಿಸುತ್ತದೆ. ಬದುಕಿಗೆ ಸ್ಪಷ್ಟ ಮಾರ್ಗದರ್ಶನವನ್ನು ನೀಡುತ್ತದೆ. ಹೀಗೆ ನಮ್ಮ ಉದಾಸೀನತೆಯನ್ನು ಕೊನೆಗೊಳಿಸುತ್ತದೆ. ಅಸ್ವಸ್ಥತೆಗೆ ವಿರಾಮ ಹಾಕುತ್ತದೆ. ಕೌಟುಂಬಿಕ ಜೀವನದಲ್ಲಿ ಧೈರ್ಯ ಹಾಗೂ ಭದ್ರತೆಯನ್ನು ನೀಡುತ್ತದೆ. ವೈಯುಕ್ತಿಕವಾಗಿ ಇಸ್ಲಾಮನ್ನು ಪ್ರಾಯೋಗಿಕಗೊಳಿಸಿ ಸತ್ಫಲವನ್ನು ಪಡೆಯುವುದರೊಂದಿಗೆ, ಪ್ರಾಮಾಣಿಕವಾದ ಆಚರಣೆಯು ಮರಣಾನಂತರ ನರಕದಿಂದ ಮುಕ್ತಗೊಳಿಸಿ ಸ್ವರ್ಗಕ್ಕೆ ಅರ್ಹಗೊಳಿಸುತ್ತದೆ. ಇಸ್ಲಾಮ್ ತನ್ನ ಕಾರ್ಯಭಾರವನ್ನು ಕಳೆದ ಹದಿನಾಲ್ಕು ಶತಮಾನಗಳಿಂದ ನಿರಂತರವಾಗಿ ನಿರ್ವಹಿಸುತ್ತಾ ಬರುತ್ತಿದೆ. ಇಂದು ಕೂಡಾ ಲೋಕದಲ್ಲೆಡೆ ಇಸ್ಲಾಮಿನ ಸತ್ಫಲಗಳು ಜನಕೋಟಿಗಳಲ್ಲಿ ಗೋಚರಿಸುತ್ತಿದೆ.

ಒಂದು ಕಾರ್ಯವು ಅತ್ಯುತ್ತಮವೂ, ಫಲಪ್ರದವೂ ಆಗಿರುವ ಕಾರಣಕ್ಕೆ ಎಲ್ಲರೂ ಅದನ್ನು ಸ್ವೀಕರಿಸಬೇಕೆಂದಿಲ್ಲ, ಧೂಮಪಾನ ಕೆಟ್ಟದೆಂದು ತಿಳಿಯದವರು ಲೋಕದಲ್ಲಿ ಯಾರೂ ಇರಲಾರರು. ಆದರೂ ಕೋಟ್ಯಂತರ ಜನರು ಅದನ್ನು ಉಪಯೋಗಿಸುತ್ತಾರೆ. ಮದ್ಯಪಾನವು ಶರೀರ, ಮಸ್ತಿಷ್ಕ, ಕುಟುಂಬ, ಸಮಾಜ ಹಾಗೂ ರಾಷ್ಟ್ರಕ್ಕೆ ಹಾನಿಕರವೆಂಬ ಅರಿವಿದ್ದರೂ ಜನರು ಕೋಟ್ಯಂತರ ಹಣವನ್ನು ಅದಕ್ಕಾಗಿ ಸುರಿಯುತ್ತಾರೆ. ಆದ್ದರಿಂದ ಒಂದು ಕಾರ್ಯವು ಒಳಿತೋ-ಕೆಡುಕೋ, ಗುಣಕರವೊ-ದೋಷಪೂರ್ಣವೋ, ಫಲಪ್ರದವೋ ಎಂಬುದರ ಮಾನದಂಡ ಅದನ್ನು ಎಷ್ಟು ಜನರು ನಿರಾಕರಿಸುತ್ತಾರೆ ಮತ್ತು ಸ್ವೀಕರಿಸುತ್ತಾರೆ ಎಂಬುದಲ್ಲ. ಒಂದು ಕಾರ್ಯವನ್ನು ಒಪ್ಪಿಕೊಂಡು ಕಾರ್ಯಗತಗೊಳಿಸಿದರೆ ಅದು ಸತ್ಫಲಕ್ಕೆ ಕಾರಣವಾದರೆ

ಒಳಿತೆಂದೂ, ಅದನ್ನು ಕಾರ್ಯಗತಗೊಳಿಸದಿದ್ದರೆ ಒಳ್ಳೆಯ ಫಲ ಗೋಚರಿಸುವುದಾದರೆ ಅದು ಕೆಡುಕೆಂದೂ ತಿಳಿದುಕೊಳ್ಳುವುದೇ ಸೂಕ್ತ ಮಾನದಂಡವಾಗಿದೆ. ಈ ಆಧಾರದಲ್ಲಿ ನೋಡುವಾಗ ಇಸ್ಲಾಮಿನ ಸಾಮಾಜಿಕ-ಆರ್ಥಿಕ -ರಾಜಕೀಯ-ಆಡಳಿತ ವ್ಯವಸ್ಥೆಯನ್ನು ಜಾರಿಗೊಳಿಸಿದಾಗ ಮಾನವ ಸಮೂಹಕ್ಕೆ ಅತ್ಯುಜ್ವಲ ವಿಜಯವನ್ನೋ ಅಮೂಲ್ಯವಾದ ಕೊಡುಗೆಯನ್ನೋ ನೀಡಿದೆ. ಆದರೆ ಅದನ್ನು ಯಾವ ರೀತಿ ನಾವು ಪ್ರಾಯೋಗಿಕಗೊಳಿಸುತ್ತೇವೆ ಎನ್ನುವುದು ಮುಖ್ಯವಾಗುತ್ತದೆ.

## ಸೋಶಲಿಝುಂನ ಪತನ ಮತ್ತು ಇಸ್ಲಾಮಿಗಾದ ಆಘಾತ ಒಂದೇ ರೀತಿಯಲ್ಲವೇ?

ಕಮ್ಯೂನಿಸ್ಟ್ ಒಕ್ಕೂಟದ ಪತನಕ್ಕೆ ಅದರ ವ್ಯವಸ್ಥೆಯಲ್ಲಿನ ದೋಷವೇ ಕಾರಣವೆಂದು ಪ್ರಚುರಪಡಿಸುವವರು ಇಸ್ಲಾಮಿನ ವಿಷಯದಲ್ಲಿ ಬೇರೆಯೇ ನಿಲುವನ್ನು ಸ್ವೀಕರಿಸುವುದು ವಿರೋಧಾಭಾಸವಲ್ಲವೇ?

ಸೋಶಲಿಝುಂನ ಪತನ ಹಾಗೂ ಇಸ್ಲಾಮೀ ಆಡಳಿತ ವ್ಯವಸ್ಥೆಗೆ ಉಂಟಾದ ಆಘಾತವು ಪ್ರತ್ಯಕ್ಷವಾಗಿ ಒಂದೇ ರೀತಿ ಗೋಚರಿಸಬಹುದು. ಆದರೆ ಅವೆರಡರ ಮಧ್ಯೆ ಬಹಳ ಅಂತರವಿದೆ. ವಿಶ್ವಾಸ ರೀತಿಗಳು, ಹಕ್ಕು ಬಾಧ್ಯತೆಗಳು, ಇತಿಹಾಸ ಪಾಠಗಳು, ಪ್ರಾಯೋಗಿಕ ಅನುಭವಗಳನ್ನು ಗಮನಿಸಿದರೆ ಎಲ್ಲರಿಗೂ ಇದು ಸುಲಭವಾಗಿ ಅರ್ಥವಾಗುತ್ತದೆ.

1.ಕಮ್ಯುನಿಸ್ಟ್ ವ್ಯವಸ್ಥೆಯ ಗುರಿಯು ಅದರ ಗೋಷಣಾ ಪತ್ರ ಸ್ಪಷ್ಟಪಡಿಸುವಂತೆ ಜಾತಿ, ವರ್ಗ ರಹಿತವಾದ ಒಂದು ಸಮಾಜದ ಸ್ಥಾಪನೆಯಾಗಿದೆ. ಲೆನಿನ್ ವಿವರಿಸುವಂತೆ ಆಡಳಿತಗಾರ-ಪ್ರಜೆ, ನಾಯಕ-ಅನುಯಾಯಿ, ಪೋಲಿಸ್, ಸೈನ್ಯ, ನ್ಯಾಯಾಲಯವಿಲ್ಲದ ಒಂದು ಸಮಾಜದ ನಿರ್ಮಾಣ. ಆದರೆ ಇಂತಹ ಒಂದು ಸಮಾಜ ಮಾರ್ಕ್ಸ್‌ನ ಬಳಿಕ ಭೂಮಿಯಲ್ಲಿ ಒಂದಿಂಚು ಸ್ಥಳದಲ್ಲಿ, ಒಂದು ನಿಮಿಷದ ಮಟ್ಟಿಗಾಗಲಿ ಇರಲಿಲ್ಲ. ಅಥವಾ ಮಾರ್ಕ್ಸಿಝುಂ ಅಥವಾ ಕಮ್ಯುನಿಝುಂ ಎಲ್ಲಿಯೂ ಕೂಡಾ ಸ್ವಲ್ಪ ಸಮಯಕ್ಕಾದರೂ ಸ್ಥಾಪಿತವಾಗಿಲ್ಲ. ಆದರೆ ಇಸ್ಲಾಮಿನ ಪರಿಸ್ಥಿತಿ ಭಿನ್ನವಾಗಿದೆ. ಅದು ಪೂರ್ಣ ರೀತಿಯಲ್ಲಿ ಪ್ರಾಯೋಗಿಕವಾಗಿ ಜಾರಿಗೊಂಡು ಚರಿತ್ರೆಯಲ್ಲಿ ಸರಿಸಾಟಿಯಿಲ್ಲದ ಸತ್ಫಲಗಳನ್ನು ಕೊಡುಗೆಯಿತ್ತಿದೆಯೆಂಬುದು ಸಂಶಯಾತೀತವಾಗಿ ಸಾಬೀತಾಗಿದೆ.

2.ಕಮ್ಯುನಿಝುಂ ಎಂಬುದು ಅನಿವಾರ್ಯವಾಗಿ ಸ್ಥಾಪಿತವಾಗುವ ವ್ಯವಸ್ಥೆಯೆಂದು ಅದರ ವಕ್ತಾರರು ಪರಿಚಯಪಡಿಸುತ್ತಿದ್ದರು. ಇಕ್ಕಟ್ಟಾದ ಸ್ಥಳಗಳಲ್ಲೂ ಮಳೆ ಸುರಿಯುವಂತೆ ಪ್ರಕೃತಿಯ ಅನುಲ್ಲಂಘನೀಯ ನಿಯಮದ ಪ್ರಾಯೋಗಿಕ ರೂಪವೆಂದು ಅವರ ಪ್ರಚಾರವಾಗಿತ್ತು. ಬಂಡವಾಳಶಾಹಿತ್ವದಿಂದ ಸಮಾಜವಾದದೆಡೆಗೆ ಮತ್ತು ಅಲ್ಲಿಂದ ಕಮ್ಯುನಿಝುಂನ ಕ್ರಮಬದ್ಧವಾದ ಬದಲಾವಣೆಯು ಚರಿತ್ರೆಯ ಅನಿವಾರ್ಯತೆಯೆಂದು ಹೇಳಲಾಯಿತು. ಅದನ್ನು ತಡೆಗಟ್ಟಲು ಯಾರಿಗೂ ಸಾಧ್ಯವಿಲ್ಲವೆಂದು ವಾದಿಸಿದರು. ಆದರೆ ಅದಕ್ಕೆ ವಿರುದ್ಧವಾದುದೇ ಸಂಭವಿಸಿತೆಂಬುದು ಅನುಭವ ಸತ್ಯ. ಸಮೂಹವು

ಸೋಶಲಿಝಂನಿಂದ ಕಮ್ಯುನಿಝಂನೆಡೆಗೆ ಸಾಗಿದ್ದಲ್ಲ, ಅದು ಪುನಃ ಬಂಡವಾಳಶಾಹಿತ್ವದೆಡೆಗೆ ಮರಳಲಾರಂಭಿಸಿತು. ಸಮಾಜವಾದಿ ದೇಶಗಳ ಅಥವಾ ಒಕ್ಕೂಟಗಳ ಅನುಭವವೇ ಅದಕ್ಕೆ ಸಾಕ್ಷಿಯಾಗಿದೆ.

ಆದರೆ ಇಸ್ಲಾಮ್ ತನ್ನನ್ನು ಧಾರಾಕಾರ ಮಳೆಯಂತೆ ಅನಿವಾರ್ಯವಾಗಿ ಸ್ಥಾಪಿತವಾಗುವ ವ್ಯವಸ್ಥೆಯೆಂದು ಹೇಳಿಕೊಳ್ಳುವುದಿಲ್ಲ, ಸಮಾಜಕ್ಕೆ ಸ್ವೀಕರಿಸಿಕೊಳ್ಳಲು ಹೇಗೆ ಸ್ವಾತಂತ್ರ್ಯವಿದೆಯೋ ನಿರಾಕರಿಸಲೂ ಸ್ವಾತಂತ್ರ್ಯವಿರುವ ಒಂದು ವ್ಯವಸ್ಥೆ, ಸಮಾಜದ ಆಶೆ ಅಭಿಲಾಷೆಗಳು, ತೀರ್ಮಾನ, ಅನುಕೂಲತೆ, ಪರಿಸ್ಥಿತಿಗಳು ಹಾಗೂ ದೇವವಿಧಿಯು ಒಂದಾಗುವಾಗ ಇದು ಕಾರ್ಯರೂಪಕ್ಕೆ ಬರುತ್ತದೆ. ಇಲ್ಲದಿದ್ದರೆ ಕೇವಲ ಒಂದು ಆಶಯವಾಗಿ ಉಳಿದುಬಿಡುತ್ತದೆ. ಅಥವಾ ಇಸ್ಲಾಮೀ ವ್ಯವಸ್ಥೆಯೆಂಬದು ಸ್ವಯಂ ಸ್ಥಾಪಿತಗೊಂಡು, ಅನಿವಾರ್ಯವಾಗಿ ಕಾರ್ಯಗತಗೊಂಡು, ಉಳಿದುಕೊಳ್ಳುವಂತದಲ್ಲ, ಆದರೆ ಇಸ್ಲಾಮ್ ಹೇಳದ ವಿಚಾರಗಳನ್ನು ಅದರ ಮೇಲೆ ಆರೋಪಿಸುವುದು ಅನ್ಯಾಯವಲ್ಲವೇ?

3. ಕಮ್ಯುನಿಝಂನ ಕಡೆಗಿನ ಹೆಜ್ಜೆಯೆಂದು ವಿಶ್ಲೇಷಿಲಾಗುವ ಸೋಶಲಿಝಂ ಸ್ಥಾಪಿತವಾದ ದೇಶಗಳಲ್ಲೆಲ್ಲಾ ಜನರ ಸಮಸ್ಯೆಗಳು ಪರಿಹಾರಗೊಳ್ಳದೆ ವರ್ಧಿಸಿತು. ಮಾನವರ ಸಮಾನತೆಯ ಹಕ್ಕನ್ನು ಕಸಿದು ಅವರನ್ನು ನಿರ್ವಿಕಾರ, ನಿಷ್ಪ್ರಾಣಗೊಳ್ಳುವಂತೆ ಕೆಲಸ ಮಾಡಿಸಿಯೂ ಪ್ರಾಥಮಿಕ ಅಗತ್ಯಗಳನ್ನೂ ಪೂರೈಸಲು ಸಾಧ್ಯವಾಗಲಿಲ್ಲ, ಇದರಿಂದಲೇ ಜನರು ಸಮಾಜವಾದದ ವಿರುದ್ಧ ತಿರುಗಿಬಿದ್ದರು. ಕ್ರಾಂತಿಕಾರೀ ಹೋರಾಟಗಳ ಮೂಲಕ ಸೋಶಲಿಝಂ ವ್ಯವಸ್ಥೆಯನ್ನು ಕಿತ್ತೆಸೆದರು. ಆದರೆ ಇಸ್ಲಾಮೀ ವ್ಯವಸ್ಥೆ ಸ್ಥಾಪನೆಗೊಂಡಾಗ ಜನರ ಸಮಸ್ಯೆಗಳು ಪರಿಹಾರಗೊಂಡು ಶಾಂತಿಯುತ ವಾತಾವರಣ ಸೃಷ್ಟಿಯಾಯಿತು. ಆದ್ದರಿಂದಲೇ ಜನರು ಇಸ್ಲಾಮೀ ವ್ಯವಸ್ಥೆಗಳು ಜಾರಿಗೊಳ್ಳಬೇಕೆಂದು ಬಯಸುತ್ತಾರೆ. ಆದರೆ ಆಡಳಿತಗಾರರು ಅದನ್ನು ವಿರೋಧಿಸಿದರು. ನಾಲ್ವರು ಖಲೀಫರ ಬಳಿಕ ಇಸ್ಲಾಮೀ ವ್ಯವಸ್ಥೆಯನ್ನು ಜಾರಿಗೆ ತರುವಲ್ಲಿ ಉಮವಿಯೂ ಮತ್ತು ಅಬ್ಬಾಸಿಯಾ ಆಡಳಿತಗಾರರು ಎಡವಿದರು. ಆಗೆಲ್ಲಾ ಜನಸಾಮಾನ್ಯರು ಇಸ್ಲಾಮಿ ವ್ಯವಸ್ಥೆಯ ಬೆಂಬಲಿಗರಾಗಿದ್ದರು ಇಂದಿನ ಸ್ಥಿತಿಯೂ ಭಿನ್ನವಲ್ಲ, ಈಜಿಪ್ಟ್, ಅಲ್ಜೀರಿಯಾ, ತುರ್ಕಿ, ಸೌದಿ ಅರೇಬಿಯಾದ ಪ್ರಜೆಗಳು ಇಸ್ಲಾಮೀ ವ್ಯವಸ್ಥೆಯ ಸ್ಥಾಪನೆಗಾಗಿ ಪ್ರಯತ್ನಿಸುವಾಗ, ಆಡಳಿತಗಾರರು ಅದರ ವಿರುದ್ಧ ಸೆಟೆದು ನಿಲ್ಲುತ್ತಾರೆ. ಪಾಶ್ಚಾತ್ಯ ಸಾಮ್ರಾಜ್ಯಶಾಹಿ ಶಕ್ತಿಗಳು ಆಡಳಿತಗಾರರನ್ನು ಬೆಂಬಲಿಸುತ್ತವೆ. ಸೋಶಲಿಸ್ಟ್ ವ್ಯವಸ್ಥೆಯನ್ನು ಅದು ಚಾಲ್ತಿಯಲ್ಲಿರುವ ದೇಶಗಳು ಜನರು ವಿರೋಧಿಸುವಾಗ, ಸರ್ವಾಧಿಕಾರಿ ಆಡಳಿತಗಾರರು ಅದನ್ನು ರಕ್ಷಿಸಲು ಪ್ರಯತ್ನಿಸುತ್ತಾರೆ. ಇಸ್ಲಾಮೀ ವ್ಯವಸ್ಥೆಯ ಸ್ಥಾಪನೆಗಾಗಿ ಹೋರಾಡುವ ಜನರು ಆಡಳಿತಗಾರರಿಂದ ದಮನಿಸಲ್ಪಡುತ್ತಾರೆ. ಇದು ಎರಡು ವ್ಯವಸ್ಥೆಗಳ ನಡುವಿನ ಅಂತರವಾಗಿದೆ.

4. ಇಸ್ಲಾಮೀ ನಿಯಮಗಳನ್ನು ಟ್ರಾಫಿಕ್ ನಿಯಮಗಳಿಗೆ ಹೋಲಿಸಬಹುದು. ಅದನ್ನು ಶಿರಸಾ ಪಾಲಿಸಿದರೆ ಎಲ್ಲ ರೀತಿಯ ಸಂಕಷ್ಟಗಳಿಂದಲೂ, ನಾಶನಷ್ಟಗಳಿಂದಲೂ

ಪಾರಾಗಲು ಸಾಧ್ಯವಿದೆ. ಅದನ್ನು ಕಡೆಗಣಿಸಿದರೆ ದುರಂತ ಫಲ ಅನುಭವಿಸಬೇಕಾಗುತ್ತದೆ. ಇತಿಹಾಸದ ಅನುಭವಗಳೇ ಇದಕ್ಕೆ ಸಾಕ್ಷಿಯಾಗಿದೆ. ಇಸ್ಲಾಮಿನ ನಿಯಮಗಳನ್ನು ಟ್ರಾಫಿಕ್ ನಿಯಮಗಳಂತೆಯೇ ಪಾಲಿಸುವ ಹಾಗೂ ಪಾಲಿಸದಿರುವ ಸ್ವಾತಂತ್ರ್ಯವೂ ಸಾಧ್ಯತೆಯೂ ಇದೆ.

5. ಸನಾದಿಂದ ಹದರಲ್ ಮೌತ್‌ನವರೆಗೆ ಒಂದು ಯಾತ್ರಾತಂಡಕ್ಕೆ ನಿರ್ಭಯವಾಗಿ ಸಂಚರಿಸಲು ಸಾಧ್ಯವಾಗುವ ವರೆಗೆ ಇಸ್ಲಾಮೀ ವ್ಯವಸ್ಥೆ ಸ್ಥಾಪಿತವಾಗದೆಂದು ಪ್ರವಾದಿ(ಸ) ರು ಇಸ್ಲಾಮಿನ ಸಂದೇಶ ಪ್ರಚಾರದ ಆರಂಭದ ಕಾಲ ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿ ಹೇಳಿದ್ದರು. ಆದರೆ ಇಂತಹ ಒಂದು ನಿರ್ಭಿತ ಸಮಾಜ ಅಂದು ನಿರ್ಮಾಣಗೊಂಡಿತ್ತೆಂದು ಇತಿಹಾಸದ ಪುಟಗಳು ಸಾಕ್ಷಿ ಹೇಳುತ್ತದೆ. ಅದೇ ವೇಳೆ ಇಸ್ಲಾಮೀ ವ್ಯವಸ್ಥೆಯ ನಂತರದ ಕಾಲದಲ್ಲಿ ತಿರಸ್ಕರಿಸಲ್ಪಡುವುದೆಂದು ಪ್ರವಾದಿಯವರ ಎಚ್ಚರಿಕೆಯೂ ಪೂರ್ಣಗೊಂಡಿದೆ. ಅದೇ ವೇಳೆ ಕಮ್ಯುನಿಝಂ ಜಾರಿಗೆ ಬರುವ ಪ್ರದೇಶಗಳ ರೀತಿ ಹಾಗೂ ಕಾಲಗಳ ಕುರಿತು ಕಾರ್ಲ್ ಮಾರ್ಕ್ಸ್ ನ ಹೇಳಿಕೆಗಳೆಲ್ಲವೂ ಬುಡಮೇಲಾದವು.

6.ಇಸ್ಲಾಮಿ ವ್ಯವಸ್ಥೆ ಗೆ ಪುನರಾವರ್ತನೆಯ ಸ್ವಭಾವವಿದೆ. ಜನರಿಗೆ ಯಾವುದೇ ಕಾಲದಲ್ಲೂ, ಪ್ರದೇಶಗಳಲ್ಲೂ ಪ್ರಾಯೋಗಿಕಗೊಳಿಸಲು ಸಾಧ್ಯವಿದೆ. ಇಸ್ಲಾಮೀ ಜೀವನ ವ್ಯವಸ್ಥೆಯು ಕಳೆದ ಹದಿನಾಲ್ಕು ಶತಮಾನಗಳಿಂದ ಅಲ್ಲಲ್ಲಿ ಒಮ್ಮೊಮ್ಮೆ ಸಂಪೂರ್ಣವಾಗಿ ಸ್ಥಾಪನೆಗೊಂಡಿರುವುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ. ಆದ್ದರಿಂದ ಇಸ್ಲಾಮಿನ ಜೀವನ ಪದ್ಧತಿಯು ನಿರಾಕರಿಸಲ್ಪಟ್ಟಿದೆಯೆಂಬ ವಾದವು ವಸ್ತುನಿಷ್ಠವಲ್ಲ. ಹೀಗೆ ನಿರಾಕರಿಸಲ್ಪಟ್ಟ ಬಳಿಕವೂ ಹಲವು ಕಾಲಗಳಲ್ಲಿ ಅದು ಪುನಃ ಸ್ಥಾಪನೆಯಾಗಿರುವುದು ವಾಸ್ತವಿಕತೆಯಾಗಿದೆ.

7. ಮಾನವ ಇತಿಹಾಸದ ಸರಿಸಾಟಿಯಿಲ್ಲದ, ಮಾದರಿಯೋಗ್ಯವಾದ ಇಸ್ಲಾಮೀ ಜೀವನ ವ್ಯವಸ್ಥೆಯು ಪ್ರವಾದಿ ಮುಹಮ್ಮದ್(ಸ)ರ ಬಳಿಕ ದೀರ್ಘಕಾಲ ಉಳಿಯಲಿಲ್ಲ ವೆಂಬುದು ನಿಜವಾದರೂ 1924ರಲ್ಲಿ ಉಸ್ಮಾನಿಯಾ ಖಿಲಾಫತ್‌ನ ಅಂತ್ಯದವರೆಗೆ ಅದು ಅಂಶಿಕವಾಗಿಯೂ, ಕೆಲವೊಂದು ವಿಷಯಗಳಲ್ಲಿ ಪೂರ್ಣವಾಗಿಯೂ ಅಥವಾ ಸಂಪೂರ್ಣವಾಗಿಯೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತು. ಈ ಆಧುನಿಕ ಜಗತ್ತಿನಲ್ಲೂ ಇಸ್ಲಾಮೀ ಆಡಳಿತ ವ್ಯವಸ್ಥೆಯ ಸತ್ಫಲವನ್ನು ಜನತೆ ಅನುಭವಿಸುತ್ತಿದ್ದಾರೆ. ಕಳೆದ ಹದಿನಾಲ್ಕು ಶತಮಾನದಿಂದ ಮುಸ್ಲಿಮ್ ಸಮೂಹವು ಇಸ್ಲಾಮೀ ಜೀವನ ವ್ಯವಸ್ಥೆಯನ್ನು ಸಂಪೂರ್ಣವಾಗಿ ಧಿಕ್ಕರಿಸಿ, ಅದರ ವಿರೋಧಿ ವ್ಯವಸ್ಥೆಯನ್ನು ಸ್ವೀಕರಿಸಿದ ಇತಿಹಾಸವಿಲ್ಲ, ಆದರೆ ಸಮಾಜವಾದಿ ಶಕ್ತಿಗಳು ಅಲ್ಪಕಾಲದ ಪ್ರಯೋಗದ ಬಳಿಕ ಅದನ್ನು ಕೈಬಿಟ್ಟು ತಮ್ಮ ಆಶಯಕ್ಕೆ ತೀರಾ ವಿರುದ್ಧವಾದ ಬಂಡವಾಳಶಾಹಿ ವ್ಯವಸ್ಥೆಯನ್ನು ಅಪ್ಪಿಕೊಂಡಿತು. ಹಲವು ಪೂರ್ವ ಯುರೋಪಿಯನ್ ರಾಷ್ಟ್ರಗಳೇ ಇದಕ್ಕೆ ಸ್ಪಷ್ಟ ಉದಾಹರಣೆಯಾಗಿದೆ.

8.ಇಸ್ಲಾಮ್ ಎಂಬುದು ಕೇವಲ ಒಂದು ರಾಜಕೀಯ ಆಡಳಿತ ವ್ಯವಸ್ಥೆ ಮಾತ್ರವಲ್ಲ, ಅದರ ಪರಮ ಉದ್ದೇಶ ಮಾನವನನ್ನು ದೇವಕೋಪ ಹಾಗೂ ಶಿಕ್ಷೆಯಿಂದ ಪಾರುಗೊಳಿಸಿ

ದೇವಸಂಪ್ರೀತಿಗೆ ಮತ್ತು ಪ್ರತಿಫಲವಾಗಿ ದೊರೆಯುವ ಸ್ವರ್ಗಕ್ಕೆ ಅರ್ಹಗೊಳಿಸುವುದು ಆಗಿದೆ. ಅದರೊಂದಿಗೆ ಭೂಮಿಯಲ್ಲಿ ಶಾಂತಿ, ನೆಮ್ಮದಿ, ವೈಯಕ್ತಿಕ ಜೀವನದಲ್ಲಿ ಪರಿಶುದ್ಧತೆ, ಕುಟುಂಬ ವ್ಯವಸ್ಥೆಯಲ್ಲಿ ಭದ್ರತೆ, ಸಮಾಜದಲ್ಲಿ ಸ್ಪಷ್ಟತೆಯನ್ನು ಖಾತ್ರಿ ಪಡಿಸುತ್ತದೆ. ಕಾಲ-ದೇಶ ಭೇದಭಾವವಿಲ್ಲದೆ ಇಸ್ಲಾಮ್ ಇಂದಿನವರೆಗೆ ಅದನ್ನು ನಿರ್ವಹಿಸುತ್ತಾ ಬಂದಿದೆ. ಲೋಕಾಂತ್ಯದ ವರೆಗೂ ಇದು ಮುಂದುವರಿಯುತ್ತದೆ. ಆದರೆ ಇಂತಹ ಒಂದು ನಿರೀಕ್ಷೆಯನ್ನಿರಿಸಿಕೊಳ್ಳಲು ಕಮ್ಯುನಿಝಂ ವ್ಯವಸ್ಥೆಗೆ ಸಾಧ್ಯವಿಲ್ಲ.

## 39 ಇಸ್ಲಾಮ್ ಮತ್ತು ಮುಸ್ಲಿಮರ ಹಿಂದುಳಿಯುವಿಕೆ

**ಜಾಗತಿಕ ಮಟ್ಟದಲ್ಲಿ ನೋಡುವಾಗ ಹಲವು ಮುಸ್ಲಿಮ್ ರಾಷ್ಟ್ರಗಳಲ್ಲಿ ಮುಸ್ಲಿಮರು ಬಹಳ ಹಿಂದುಳಿದಿದ್ದಾರೆ. ಭಾರತದ ಮುಸ್ಲಿಮರೂ ಇತರ ಧರ್ಮೀಯರಿಗಿಂತ ಬಹಳ ಹಿಂದುಳಿದ ಅವಸ್ಥೆಯಲ್ಲಿದ್ದಾರೆ. ಇಸ್ಲಾಮ್ ಪ್ರಗತಿಗೆ ಅಡ್ಡಿಯಾಗಿರುವುದೇ ಇದಕ್ಕೆ ಕಾರಣವೆಂಬುದನ್ನು ಸೂಚಿಸುತ್ತದೆಯಲ್ಲವೇ.?**

ಮಾನವ ಜಗತ್ತಿನ ಪ್ರಗತಿ ಹಾಗೂ ಅಭಿವೃದ್ಧಿಯಲ್ಲಿ ಇಸ್ಲಾಮ್ ಮತ್ತು ಮುಸ್ಲಿಮರ ಪಾತ್ರ ಹೇಳಬೇಕಾದ ಅಗತ್ಯವಿಲ್ಲದಷ್ಟು ಸ್ಪಷ್ಟವೂ, ವಿವಾದಾತೀತವೂ ಆಗಿದೆ. ಗಾಢ ನಿದ್ರೆಯಲ್ಲಿದ್ದ ಅರೇಬಿಯನ್ ಜನತೆಯನ್ನು ಇಸ್ಲಾಮ್ ಬಡಿದೆಬ್ಬಿಸಿತು. ಅವರ ಅಜ್ಞಾನ, ಅಂಧವಿಶ್ವಾಸವನ್ನು ಹೋಗಲಾಡಿಸಿತು. ಜೀವನದ ಎಲ್ಲಾ ರಂಗಗಳಲ್ಲೂ ಅವರ ಉನ್ನತಿಗೆ ಹಾಗೂ ಮುನ್ನಡೆಗೆ ಕಾರಣವಾಯಿತು. ಹೀಗ ಅವರು ವಿಶ್ವದ ನಾಯಕತ್ವ ಸ್ಥಾನಕ್ಕೆ ತಲುಪಿಸಿದರು. ಸತ್ಯ, ನ್ಯಾಯ, ಸಮಾನತೆ, ಸಹೋದರತೆ, ಸಹಿಷ್ಣುತೆ ಹಾಗೂ ಧಾರ್ಮಿಕ ಮೌಲ್ಯಗಳಲ್ಲಿ ಮಾತ್ರವಲ್ಲ ಕಲೆ, ಸಾಹಿತ್ಯ, ತಂತ್ರಜ್ಞಾನ, ಶಿಕ್ಷಣ, ವೈಜ್ಞಾನಿಕ, ನಾಗರಿಕ, ಆಡಳಿತ ನಿರ್ವಹಣೆಯಂತಹ ಎಲ್ಲಾ ರಂಗಗಳಲ್ಲೂ ಸುದೀರ್ಘ ಕಾಲದವರೆಗೆ ಮುಸ್ಲಿಮರು ಜಗತ್ತಿಗೆ ನೇತೃತ್ವವನ್ನು ವಹಿಸಿದರು. ಇಂದು ಆ ಸ್ಥಾನದಲ್ಲಿ ಪಾಶ್ಚಾತ್ಯರಿದ್ದಾರಲ್ಲವೇ? ಅದಕ್ಕೆ ಅವರನ್ನು ಸಜ್ಜುಗೊಳಿಸಿದ್ದಲ್ಲದೆ ಪಾಶ್ಚಾತ್ಯ ನಾಗರಿತೆಗೆ ತೊಟ್ಟಿಲನ್ನು ಒದಗಿಸಿ ಕೊಟ್ಟವರು ಇಸ್ಲಾಮ್ ಮತ್ತು ಮುಸ್ಲಿಮರೇ ಆಗಿದ್ದಾರೆ. ನಿಷ್ಪಕ್ಷಪಾತಿಗಳಾದ ಇತಿಹಾಸಕಾರರು ಈ ಸತ್ಯವನ್ನು ಬಹಿರಂಗಗೊಳಿಸಿದ್ದಾರೆ. ರಾಬರ್ಟ್ ಬ್ರಿಫೋರ್ಟ್ ಬರೆಯುತ್ತಾರೆ: '15 ನೇ ಶತಮಾನದಲ್ಲಿ ಅರಳಿದ ಅರಬ್-ಮೋರಿಶ್ ನಡುವಿನ ನಾಗರೀಕತೆಯ ಕಂಪು ನವನಾಗರಿಕತೆಗೆ ನಾಂದಿ ಹಾಡಿತು. ಸ್ಪೇಯಿನ್ ಯೂರೋಪ್‌ಗೆ ಪುನರ್ಜನ್ಮನೀಡಿದ ದೇಶವಾಗಿತ್ತು. ಸಾರಸ್ವತ ಸಾಮ್ರಾಜ್ಯದ ನಗರಗಳಾದ ಕೈರೋ, ಕಾರ್ಡೋವಾ, ಬಗ್ದಾದ್, ಟೋಲಿಡೋಗಳು ಸಾಂಸ್ಕೃತಿಕ ಹಾಗೂ ವೈಚಾರಿಕತೆಯ ಕೇಂದ್ರಗಳಾಗಿ ಬೆಳೆದಾಗ, ಅನಾಗರಿಕತೆಯಲ್ಲಿ ಮುಳುಗಿದ ಯೂರೋಪ್ ಅಜ್ಞಾಂಧಕಾರದಲ್ಲಿ ಅಧಃಪತನಗೊಂಡಿತು. ಮಾನವ ಜೀವನಕ್ಕೆ ಹೊಸ ದಿಕ್ಕು ನೀಡಲು ಆ ನಗರದ ನಿವಾಸಿಗಳಿಗೆ ಸಾಧ್ಯವಾಯಿತು. ಹೀಗೆ ನಾಗರೀಕತೆಯು ಬೆಳೆದು ಇತರೆಡೆಗೂ ತನ್ನ ಕಂಪನ್ನು ಬೀರಲು ಆರಂಭಿಸಿತು.

ಅರಬರಿಲ್ಲದಿರುತ್ತಿದ್ದರೆ ಆಧುನಿಕ ಯೂರೋಪ್ ರೂಪುಗೊಳ್ಳುತ್ತಿರಲಿಲ್ಲವೆಂಬ ಸತ್ಯವನ್ನು ನಂಬಲೇಬೇಕು. ಪರಿಣಾಮದ ದೃಷ್ಟಿಯಿಂದ ಪ್ರಾಚೀನ ದಶಕಗಳನ್ನು ಮುಚ್ಚಿ ಹಾಕುವ

ಸ್ವಭಾವ ಗುಣಗಳನ್ನು ಮುಸ್ಲಿಮರ ಅಭಾವದಲ್ಲಿ ಗಳಿಸಲು ಅವರಿಗೆ ಸಾಧ್ಯವಿಲ್ಲ, ಯುರೋಪಿನ ಬೆಳವಣಿಗೆಯ ಸಣ್ಣ ಹಂತದಲ್ಲಿ ಕೂಡಾ ಇಸ್ಲಾಮ್‌ನ ಪ್ರಭಾವ ಕಾಣದಿರಲು ಸಾಧ್ಯವಿಲ್ಲ.' (The making of Humanity, page 183-190)

ಯೂರೋಪ್ ಇಂದು ಅನುಭವಿಸುತ್ತಿರುವ ಸುಖ ಸೌಕರ್ಯಗಳಿಗೆಲ್ಲಾ ಅದು ಇಸ್ಲಾಮ್ ಮತ್ತು ಮುಸ್ಲಿಮರೊಂದಿಗೆ ಋಣಭಾರ ಇರಿಸಬೇಕಾಗಿದೆಯೆಂದು ಪ್ರಸಿದ್ಧ ಇತಿಹಾಸಕಾರರಾದ ಜಾನ್ ವಿಲಿಯಂ ತನ್ನ Intellectual Development of Europe ಎಂಬ ಗ್ರಂಥದಲ್ಲಿ ಬಹಳ ಸ್ಪಷ್ಟವಾಗಿ ವಿವರಿಸಿದ್ದಾರೆ. 'ವೈಜ್ಞಾನಿಕ ರಂಗದಲ್ಲಿ ಮುಸ್ಲಿಮರು ಆರಂಭಿಸಿದ ಯಾವುದನ್ನೂ ನಮಗೆ ಪೂರ್ತಿಗೊಳಿಸಬೇಕಾಗಿ ಬರಲಿಲ್ಲ' ಎಂದು ಎಚ್.ಜಿ.ವೆಲ್ಸ್ ಎಂಬವರು ತನ್ನ 'ವಿಶ್ವ ಚರಿತ್ರೆಯ ಸಂಗ್ರಹ' ಎಂಬ ಗ್ರಂಥದಲ್ಲಿ ಬಹಿರಂಗಪಡಿಸಿದ್ದಾರೆ. ಪಂಡಿತ ಜವಾಹರಲಾಲ್ ನೆಹರೂ ತನ್ನ Glimpses of World History ಯಲ್ಲಿ ಬರೆಯುತ್ತಾರೆ: 'ಪ್ರಾಚೀನ ಕಾಲವನ್ನು ಗಮನಿಸುವಾಗ ಈಜಿಪ್ಟ್, ಭಾರತ ಅಥವಾ ಚೀನಾದಲ್ಲೂ ಸೂಕ್ತ ಸಾಂಸ್ಕೃತಿಕ ಪರಂಪರೆ ನಾವು ಕಾಣುವುದಿಲ್ಲ, ಅದರ ಸಣ್ಣ ಕುರುಹು ಪುರಾತನ ಗ್ರೀಕ್‌ನಲ್ಲಿ ಗೋಚರಿಸುತ್ತದೆ. ರೋಮನರಲ್ಲೂ ಅದು ಇರಲಿಲ್ಲ, ಆದರೆ ಅರಬರಲ್ಲಿ ವೈಜ್ಞಾನಿಕ ಸಂಶೋಧನೆಯ ಉತ್ಸಾಹ ಕಂಡುಬಂದಿತ್ತು. ಆದ್ದರಿಂದ ಆಧುನಿಕ ವಿಜ್ಞಾನದ ಪಿತಾಮಹರು ಮುಸ್ಲಿಮರೆಂದು ಹೇಳಬಹುದು.' ಅವರು ಪುನಃ ಬರೆಯುತ್ತಾರೆ: 'ಗ್ರೀಕರು ಆರಂಭಿಸಿ, ಬಳಿಕ ಉಪೇಕ್ಷಿಸಿದ ಸಾಮಾನ್ಯ ಜ್ಞಾನದ ಕ್ರಮಬದ್ಧವಾದ ಬೆಳವಣಿಗೆಯನ್ನು ಅರಬ್ ಮನಸ್ಸು ಒಂದು ಹೊಸ ದೃಷ್ಟಿಕೋನ ಹಾಗೂ ಚೈತನ್ಯದಿಂದ ಸ್ವೀಕರಿಸಿತು. ಹೀಗೆ ಅರಬರಿಂದ ಜಗತ್ತಿಗೆ ವಿಜ್ಞಾನದ ಪ್ರಭೆ ಹಾಗೂ ಶಕ್ತಿ ಲಭಿಸಿತೇ ಹೊರತು ಲ್ಯಾಟಿನ್‌ನ ಮೂಲಕ ಲಭಿಸಿದ್ದಲ್ಲ.'

ಈ ಎಲ್ಲ ರೀತಿಯ ಪ್ರಗತಿಗೆ ಇಸ್ಲಮೀ ವಿಶ್ವಾಸವೇ ಕಾರಣ. Rom Landon ತನ್ನ Islam and the Abars ಎಂಬ ಗ್ರಂಥದಲ್ಲಿ ಬರೆಯುತ್ತಾರೆ: ವೈಜ್ಞಾನಿಕ ಸಂಶೋಧನೆಗಳಿಗೆ ಅಲ್ಲಾಹನು ಸೃಷ್ಟಿಸಿದ ವಿಸ್ಮಯಕಾರಿ ಪ್ರಪಂಚದ ಕುರಿತು ಅಗಾಧ ಪಾಂಡಿತ್ಯವನ್ನು ಗಳಿಸುವ ಬಯಕೆಯೇ ಪ್ರಚೋದನೆ ನೀಡಿತ್ತು. ಲೌಕಿಕ ಪ್ರಪಂಚವೂ ಆಧ್ಯಾತ್ಮಿಕ ಲೋಕದಂತೆಯೇ ಪ್ರಾಮುಖ್ಯವೆಂಬ ನಂಬಿಕೆಯೂ, ಸತ್ಯಾನ್ವೇಷಣೆಯ ಜಿಜ್ಞಾಸೆಯೂ ಕೂಡಾ ಸೇರಿಕೊಂಡಿತು. ಮಾತೃವಾತ್ಸಲ್ಯದಿಂದ ಮಾರಕ ರೋಗಗಳ ವರೆಗಿನ ಪ್ರತಿಯೊಂದೂ ದೇವನು ಸೃಷ್ಟಿಸಿದ ಪ್ರಪಂಚದಲ್ಲಿ ಸೇರಿಕೊಂಡಿದೆ. ಅವೆಲ್ಲವೂ ಅವನ ನಿದರ್ಶನಗಳಾಗಿವೆ. ಆದ್ದರಿಂದ ಅವು ಕಲಿಕೆಗೆ ಯೋಗ್ಯವಾಗಿದೆ. ಇಸ್ಲಾಮ್‌ನಲ್ಲಿ ಧರ್ಮ ಮತ್ತು ವಿಜ್ಞಾನ ಬೇರೆ ಬೇರೆಯಲ್ಲ, ಧರ್ಮವು ವೈಜ್ಞಾನಿಕ ಸಂಶೋಧನೆಗಳಿಗೆ ಪ್ರಚೋದನೆ ನೀಡುವ ಶಕ್ತಿಯಾಗಿದೆ.

ಶಿಲುಬೆ ಯುದ್ಧದಿಂದ ಮುಸ್ಲಿಮ್ ರಾಷ್ಟ್ರಗಳನ್ನು ವಶಪಡಿಸಿಕೊಂಡ ಕ್ರೈಸ್ತರು ನಂತರದ ದಿನಗಳಲ್ಲಿ ಅರಬರ ವೈಜ್ಞಾನಿಕ ಸಂಶೋಧನೆಗಳನ್ನು, ಪ್ರಗತಿಯನ್ನು ತಮ್ಮದಾಗಿಸಿಕೊಳ್ಳಲು ಬಹಳಷ್ಟು ಪ್ರಯತ್ನಿಸಿದರು. ವಿಜ್ಞಾನಕ್ಕೆ ಸಂಬಂಧಿಸಿದ ಹಲವಾರು ಅರಬಿ ಗ್ರಂಥಗಳನ್ನು

ತಮ್ಮ ಭಾಷೆಗೆ ಅನುವಾದಿಸಿದರು. ಹೀಗೆ ಯೂರೋಪ್‌ನಲ್ಲಿ ಅಭಿವೃದ್ಧಿಯ ಚಲನೆಗಳು ಗೋಚರಿಸ ತೊಡಗಿದವು. ಕಾರ್ಡೋವ, ಗ್ರಾನಿಡ್, ಟೋಲಿಡೋ, ಬಗ್ದಾದ್, ದಮಾಸ್ಕಸ್, ಕೈರೋ, ಅಲೆಗ್ಸಾಂಡ್ರಿಯಾಗಳಂತಹ ಪ್ರಸಿದ್ಧ ನಗರಗಳ ಗ್ರಂಥಾಲಯಗಳಲ್ಲಿದ್ದ ಗ್ರಂಥಗಳಲ್ಲಿ ಮುಖ್ಯವಾದವುಗಳನ್ನೆಲ್ಲಾ ಲ್ಯಾಟಿನ್ ಭಾಷೆಗೆ ಭಾಷಾಂತರಿಸಿದರು. ಬಳಿಕ ಅವುಗಳನ್ನು ಉಪಯೋಗಿಸಿಕೊಂಡು ಸಂಶೋಧನೆಗಳನ್ನು ನಡೆಸಿದರು. ಹೀಗೆ ಪಾಶ್ಚಾತ್ಯರು ವೈಜ್ಞಾನಿಕ ಪ್ರಗತಿಯ ಮೆಟ್ಟಿಲನ್ನು ಏರಿದರು.

ಇಸ್ಲಾಮೀ ಸಾಂಸ್ಕೃತಿಕ ಹಾಗೂ ನಾಗರಿಕತೆಯ ಕೇಂದ್ರವಾಗಿದ್ದ ಸ್ಪೇಯಿನ್‌ನ ಸರ್ವವನ್ನೂ ವಶಪಡಿಸಿದ ಇಸ್ಲಾಮಿನ ಶತ್ರುಗಳು 1492ರಲ್ಲಿ ಆ ರಾಷ್ಟ್ರವನ್ನೇ ತಮ್ಮ ಅಧೀನಗೊಳಿಸಿದರು. ಬಳಿಕ ಅಲ್ಲಿನ ಬೃಹತ್ ಗ್ರಂಥಗಳನ್ನೆಲ್ಲಾ ಅಗ್ನಿಗಾಹುತಿ ಮಾಡಿದರು. ಅರ್ಧಶತಮಾನ ಕಳೆದಾಗ ಒಬ್ಬ ಮುಸ್ಲಿಮನೂ ಉಳಿಯದ ರೀತಿಯಲ್ಲಿ ಬಲತ್ಕಾರವಾಗಿ ಮತಾಂತರಿಸಿ, ಒಪ್ಪದವರನ್ನು ನಿರ್ದಯವಾಗಿ ಕೊಂದುಹಾಕಿದರು. ಅದರೊಂದಿಗೆ ಮುಸ್ಲಿಮ್ ರಾಷ್ಟ್ರಗಳು ಕುಸಿತ ಕಂಡು ಹಿನ್ನಲೆಗೆ ಸರಿದವು. ಮುಸ್ಲಿಮರು ಹಿಂದುಳಿದವರೆಂಬ ಹಣೆಪಟ್ಟಿಯೂ ದೊರೆಯಿತು. ಈ ವಿಷಯವನ್ನು ಪ್ರಸಿದ್ಧ ಆಂಗ್ಲ ಇತಿಹಾಸಕಾರರಾದ ಲೆಯಿನ್ ಪೂಲ್ ಸ್ಪಷ್ಟಪಡಿಸುತ್ತಾರೆ: 'ಸ್ಪೇಯಿನ್ ದೇಶವು ಶತಮಾನಗಳವರೆಗೆ ನಾಗರಿಕತೆಯ ಕೇಂದ್ರ, ಕಲಾವೈವಿಧ್ಯಗಳ ಸಂಗಮ ಭೂಮಿಯಾಗಿತ್ತು. ಅದೇ ರೀತಿ ಎಲ್ಲಾ ರಂಗಗಳಲ್ಲೂ ನಾಯಕತ್ವಸ್ಥಾನದಲ್ಲಿತ್ತು. ಯೂರೋಪ್‌ನ ಯಾವುದೇ ದೇಶವೂ ಕೂಡಾ ಅರಬ್ ನಾಗರಿಕತೆಯ ಸನಿಹಕ್ಕೂ ತಲುಪಿರಲಿಲ್ಲ. ಫೆರ್ಡಿನಾಂಡ್ ಇಸಬೆಲ್ಲಾ, ಚಾರ್ಲ್ಸ್‌ರ ಸಾಮ್ರಾಜ್ಯಗಳಿಗೆ ಯಾವುದೇ ಶಾಶ್ವತ ಉನ್ನತಿ ಪ್ರಾಪ್ತವಾಗಿರಲಿಲ್ಲ. ಮುಸ್ಲಿಮರನ್ನು ಹೊರಕಟ್ಟಲಾಯಿತು. ಕೆಲವೆಡೆಗಳಲ್ಲಿ ಕ್ರೈಸ್ತ ಸ್ಪೇಯಿನ್ ಚಂದ್ರನಂತೆ ಸಾಲಪಡೆದ ಬೆಳಕಿನಿಂದ ಪ್ರಕಾಶಿತವಾಯಿತು. ಕೆಲವೇ ಕ್ಷಣಗಳಲ್ಲಿ ಅದಕ್ಕೆ ಗ್ರಹಣ ಉಂಟಾಯಿತು. ಬಳಿಕ ಇಂದಿನವರೆಗೂ ಸ್ಪೇಯಿನ್ ಅಂಧಕಾರದಲ್ಲೇ ತಡಕಾಡುತ್ತಿದೆ.

ಸಾಮ್ರಾಜ್ಯಶಾಹಿಗಳ ಆಕ್ರಮಣದಿಂದ ಮುಸ್ಲಿಮ್ ರಾಷ್ಟ್ರಗಳ ಅವನತಿ ಪೂರ್ಣಗೊಂಡಿತು. 19ನೇ ಶತಮಾನದಲ್ಲಿ ಹಾಗೂ 20ನೇ ಶತಮಾನದ ಮೊದಲ ದಶಕಗಳಲ್ಲಿ ಅವು ಎಲ್ಲಾ ಮುಸ್ಲಿಮ್ ರಾಷ್ಟ್ರಗಳನ್ನು ಹಂಚಿಕೊಂಡವು. ಹೀಗೆ ಮುಸ್ಲಿಮ್ ಜಗತ್ತು ಪಾಶ್ಚಾತ್ಯ ಸಾಮ್ರಾಜ್ಯ ಶಕ್ತಿಗಳ ವಶವಾಯಿತು. ಅವರು ಮುಸ್ಲಿಮ್ ರಾಷ್ಟ್ರಗಳನ್ನು ಸಂಪೂರ್ಣವಾಗಿ ಕೊಳ್ಳೆಹೊಡೆದದ್ದು ಮಾತ್ರವಲ್ಲ, ಮುಸ್ಲಿಮರನ್ನು ಅವರ ಉನ್ನತ ಧ್ಯೇಯ, ಆದರ್ಶ ಹಾಗೂ ವಿಶ್ವಾಸಗಳಿಂದ ವ್ಯತಿಚಲಿಸುವಂತೆ ಮಾಡಿದರು. ಹೀಗೆ ಮುಸ್ಲಿಮ್ ರಾಷ್ಟ್ರಗಳು ಹಾಗೂ ಸಮುದಾಯ ಸುಲಭದಲ್ಲಿ ಪರಿಹರಿಸಲಾಗದಂತಹ ಹಿಂದುಳಿದ ಸ್ಥಿತಿಗೆ ಒಳಗಾಯಿತು. ಅದರೊಂದಿಗೆ ಅಭಿವೃದ್ಧಿ ಹಾಗೂ ನವೋತ್ಥಾನದ ಚಾಲಕ ಶಕ್ತಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಆದರ್ಶ ಸಿದ್ಧಾಂತಗಳೂ, ಜೀವನದ ದೃಷ್ಟಿಕೋನಗಳೂ ಮಸುಕಾದವು.

ಕಳೆದ ಶತಮಾನದ ಮಧ್ಯದಶಕಗಳಲ್ಲಿ ಈ ರಾಷ್ಟ್ರಗಳು ಸ್ವಾತಂತ್ರ್ಯಗಳಿಸಿದರೂ ನೇರವಾಗಿ ಎದ್ದು ನಿಲ್ಲಲಾಗದ ಸ್ಥಿತಿಗೆ ತಲುಪಿದ್ದವು. ಸಾಮ್ರಾಜ್ಯಶಾಹಿ ಶಕ್ತಿಗಳು ಸ್ವಾತಂತ್ರ್ಯ ನೀಡುವುದರೊಂದಿಗೆ ತಮ್ಮ ಹಿತಾಸಕ್ತಿಯನ್ನು ಕಾಯ್ದುಕೊಂಡಿದ್ದವು. ತಮ್ಮ ಬೇಡಿಕೆಗಳನ್ನು ಪೂರೈಸುವ, ಇಸ್ಲಾಮೀ ವ್ಯವಸ್ಥೆಯನ್ನು ಜಾರಿಗೆ ತರುವ ಮನಸಾಕ್ಷಿಯಿಲ್ಲದ, ದೇಶದ ಪ್ರಗತಿಯ ಕುರಿತು ದೂರದೃಷ್ಟಿ ಇಲ್ಲದ ಸರ್ವಾಧಿಕಾರಿಗಳು, ರಾಜಕುಮಾರರು, ಸುಲ್ತಾನರನ್ನು ಆಡಳಿತದಲ್ಲಿ ಕುಳ್ಳಿರಿಸಿದರು. ಸ್ವದೇಶಿಗಳ ಅಭಿಪ್ರಾಯ, ಅಭಿರುಚಿಗಳನ್ನು ಪರಿಗಣಿಸದೆ ಅವರು ಇಂದು ಆಡಳಿತ ನಡೆಸುತ್ತಿದ್ದಾರೆ. ಆದ್ದರಿಂದ ಪಾಶ್ಚಾತ್ಯ ಶಕ್ತಿಗಳಿಗೆ ಗುಲಾಮಗಿರಿಯ ಕಾಲದಂತೆಯೇ ನಂತರವೂ ಆ ದೇಶಗಳನ್ನು ಕೊಳ್ಳೆ ಹೊಡೆಯಲು ಸಾಧ್ಯವಾಯಿತು. ಇಂದು ಕೂಡಾ ಅದೇ ಸ್ಥಿತಿ ಮುಂದುವರಿದಿದೆ. ದೇಶಗಳ ಪ್ರಗತಿ ಹಾಗು ಅಭಿವೃದ್ಧಿಗೆ ಕಾರಣವಾಗುವ ಇಸ್ಲಾಮೀ ವ್ಯವಸ್ಥೆಯ ಜಾರಿಗೆ ಪ್ರಯತ್ನಿಸುವ ಸಂಘಟನೆಗಳನ್ನು ಸಾಮ್ರಾಜ್ಯಶಾಹಿ ಶಕ್ತಿಗಳ ಸಹಕಾರದೊಂದಿಗೆ ಆ ದೇಶದ ಸರ್ವಾಧಿಕಾರಿಗಳು ಕ್ರೂರವಾಗಿ ಮರ್ದಿಸಿ, ರಕ್ತದಲ್ಲಿ ಮುಳುಗಿಸಿ ಕೊಲ್ಲುತ್ತಿದ್ದಾರೆ. ಅಲ್ಲಿ ಜನರ ಹಿತಾಸಕ್ತಿಗಳ ಈಡೇರಿಕೆಯನ್ನು ಹಾಗೂ ಪ್ರಜಾಪ್ರಭುತ್ವ ಸ್ಥಾಪನೆಯಾಗುವುದನ್ನು ಪಾಶ್ಚಾತ್ಯ ಶಕ್ತಿಗಳು ಇಷ್ಟಪಡುವುದಿಲ್ಲ, ಅವರ ಮೋಸದಾಟ ಹಾಗೂ ಮುಸ್ಲಿಮ್ ರಾಷ್ಟ್ರಗಳ ಹಿಂದುಳಿಯುವಿಕೆಯು ನಿರಂತರವಾಗಿ ಮುಂದುವರಿಯಲು ಅದು ಅನಿವಾರ್ಯವಲ್ಲವೇ? ಮುಸ್ಲಿಮ್ ರಾಷ್ಟ್ರಗಳು ಇಸ್ಲಾಮೀ ವ್ಯವಸ್ಥೆಯನ್ನು ಯಥಾವತ್ತಾಗಿ ಜಾರಿಗೆ ತಂದಾಗ ಉನ್ನತಿಯ ಶಿಖರಕ್ಕೇರಿದ್ದು ಮತ್ತು ಅದನ್ನು ಕೈಬಿಟ್ಟಾಗ ಅವನತಿಯ ಪಾತಾಳಕ್ಕೆ ಇಳಿದದ್ದು ನಮಗೆ ಕಾಣಲು ಸಾಧ್ಯವಾಗಿದೆ. ಇಸ್ಲಾಮ್ ಸಮಾಜದಲ್ಲಿ ಸೃಷ್ಟಿಸುವ ಸ್ವಾಧೀನವು ಎಂತಹದ್ದೆಂದು ಇತಿಹಾಸವು ಸ್ಪಷ್ಟಪಡಿಸುತ್ತದೆ.

ಭಾರತದಲ್ಲಿ ವಿದೇಶಿಯರ ಆಕ್ರಮಣದ ವರೆಗೆ ಮುಸ್ಲಿಮರ ಸ್ಥಿತಿಯು ಇತರ ವರ್ಗಗಳಿಗೆ ಹೋಲಿಸಿದರೆ ಹಿಂದುಳಿದಿರಲಿಲ್ಲ ಎಂಬುದಕ್ಕೆ ಇತಿಹಾಸವೇ ಸಾಕ್ಷಿ.